

ಕೈಲಾಸ ಶಿಖರದ ಮತ್ತೊಂದು ಪ್ರಖರಿ



‘ರಾವಣಹೃದಯ’ ಸ್ಥಿರ ಸರೋವರ

# ಮಾನಸ ಪಥದಲ್ಲಿ

ಲೇಖಕರು

ತಾರಾಮೂರ್ತಿ



ಪ್ರಕಾಶಕರು

ಸಾಹಿತ್ಯ ಕಲಾದರ್ಶಿನಿ

ನಂ. 13/2, ಮೂದಲಿಯಾರ್ [illegible], 4ನೇ ಕ್ರಾಸ್,

ನಾಗಪ್ಪ ಬೀದಿ, ಪ್ಯಾಲೇಸ್ ನಗರ,

ಬೆಂಗಳೂರು. ದೂರವಾಣಿ- 3363605

**MANASA PATHADALLI** - A travellogue by Taramurthy

Published :
**"Sahitya Kala Darshini"**
No.13/2, 1st Floor, 4th Cross,
Nagappa Street, Palace Nagar,
Bangalore-560003.



First Published in 1999

**Price: Rs. 125/-**

**Designed & Printed by**
**VIDEO DARSHAN INDIA Ph : 3440606**

# ಮಾನಸ ಪಥದಲ್ಲಿ




# ಕೈಲಾಸನಾಥನ ಅಡಿಗಳಿಗೆ

# ಓಂ ನಮಃ ಶಿವಾಯ

ಕಣ್ಣಲ್ಲಿ ಬೆಳಕಾಗಿ, ಬಾಯಲ್ಲಿ ಸೊಲ್ಲಾಗಿ,
ವಂದಿಸುವ

[illegible] ಆಸರಿಸಿ
[illegible] ದಿದಿತ್ತು,
[illegible] ಕ್ಕೊಡುವ
[illegible] ಕೈಯದಾಗಿತ್ತು
ಓಂ ನ[illegible] ಶಿವಾಯ

ನೋವಿನಲಿ, ನಲಿ ನಲಿ, ಜೊತೆಗೂಡಿಹಾಡುತ್ತ
ಹಗಲಲ್ಲಿ ಗೆಳೆತನವು [illegible]
ನೋಡಾ ಶಿಖರ! ಇಲ್ಲಿ ಈ ಇಂದ್ರಧನು
ತೋರಿಸುತ ಕೌತುಕವ ಕೈಯ ಚಾಚಿತ್ತು,
ಓಂ ನಮಃ ಶಿವಾಂಯ

ಗುನುಗುನಿಸಿ, ನಮಿಸುತಲಿ ಸರವೆತ್ತಿ ಉಗ್ಗಡಿಸಿ
ಜಂಗಮದ ಜಾಲವನೆ ನೆಯ್ದುದಾಗಿತ್ತು,
ಎನಿತೊ ಕರಗಳು ಅಲ್ಲಿ, ಎನಿತೆನಿತೊ ಕರಣಗಳು
ಕಾರಣಕೆ ಮಲ್ಲೇಶನ ಕೈವಾಡವಿತ್ತು,
ಓಂ ನಮಃ ಶಿವಾಯ

# ಪರಿವಿಡಿ


ಮುನ್ನುಡಿ ೧

ಅರಿಕೆ ೫

ಪೃಥ್ವಿಯ ಮಾನದಂಡ 1

ಹಿಮಗಿರಿಯ ಮಡಿಲಲ್ಲಿ 11

ಮಾನಸ ತಡಿಯಲ್ಲಿ 55

ಅನುಭಾವದಂಗಳದಲ್ಲಿ 87

ಹೂಣರೊಡನಾಟದಲ್ಲಿ 115

ಮಾನಸ ಪಥದಲ್ಲಿ 141

ಹಿನ್ನುಡಿ

ಯಾತ್ರಾ ಮಾಹಿತಿ

ಕೈಲಾಸ ಮಾನಸಕ್ಕೆ ವಿದೇಶೀಯರ ಪ್ರತಿಕ್ರಿಯೆ

ನಕ್ಷೆಗಳು- ೩

ಹಿಮಾಲಯದ ಜನನ

# ಮುನ್ನುಡಿ

ಶ್ರೀಮತಿ ತಾರಾಮೂರ್ತಿಯವರ ಹಿಮಾಲಯ ಪ್ರವಾಸವನ್ನು ಕುರಿತ ಪುಸ್ತಕವನ್ನು ಓದಿ ಮುಗಿಸಿದ ಮೇಲೆ ಮತ್ತೆ ಮತ್ತೆ ಅದನ್ನು ಓದಬೇಕೆನ್ನಿಸಿತು. ಅವರು ಓದಿದ ರಾಮಾಯಣ, ಮಹಾಭಾರತ, ಕಾಳಿದಾಸ, ಕುವೆಂಪು ಚರಿತ್ರೆಗಳಿಂದ ರೂಪಿತವಾದ ಸಂಸ್ಕೃತಿ, ಅದು ಜನರ ಬದುಕಿನಲ್ಲಿ ಕಾಣಿಸಿಕೊಳ್ಳುವ ರೀತಿ, ಅವರು ಕಂಡುಬಂದ ಇತರ ದೇಶಗಳು ಮೊದಲಾದವು ಈ ಪ್ರವಾಸಕಥನಕ್ಕೆ ಹಿನ್ನೆಲೆಯನ್ನು ಒದಗಿಸಿವೆ. ಕಾಳಿದಾಸ ಹಿಮಾಲಯವನ್ನು ದೇವತಾತ್ಮ ಎಂದು ಏಕೆ ಕರೆದ ಅನ್ನುವುದನ್ನು ತಿಳಿದುಕೊಳ್ಳಬೇಕಾದರೆ, ಹಿಮಾಲಯಕ್ಕೇ ಪ್ರವಾಸ ಹೋಗಿ ಬರಬೇಕು ಅಥವಾ ತಾರಾಮೂರ್ತಿಯವರ ಪ್ರವಾಸಕಥನವನ್ನು ಓದಬೇಕು. ಹಿಮಾಲಯ ಗಿರಿಜೆಯ ಮತ್ತು ಶಿವನ ಮನೆ ಏಕಾಗಿದೆ ಅನ್ನುವುದೂ ಸಹ ಈ ಪುಸ್ತಕದಲ್ಲಿ ಅದ್ಭುತವಾಗಿ ಒಡಮೂಡಿದೆ.

ಹಿಮಾಲಯಕ್ಕೆ ಯಾತ್ರೆ ಹೋಗಬೇಕಾದರೆ ಕಾಗದ ಪತ್ರ, ಉಡುಪು, ಔಷಧಗಳು, ತಿನಿಸುಗಳು, ಟಿಕೇಟು, ಹಣ, ಪ್ಲಾಸ್ಟಿಕ್ ಚೀಲ, ಗೋಣೀ ಚೀಲ, ಮೊದಲಾದದ್ದು ಏನೇನು ಬೇಕು ಮೊದಲದ ಮಾಹಿತಿಗಳನ್ನು ಎಲ್ಲಿ ಪಡೆಯಬೇಕು, ಎಲ್ಲಿ ವೈದ್ಯಕೀಯ ಪರೀಕ್ಷೆ, ಎಲ್ಲಿ ವೀಸಾ ಮತ್ತು ವಿದೇಶೀವಿನಿಮಯ, ಅರ್ಧದಾರಿಯಲ್ಲಿ ಕೆಲವರು ಏಕೆ ಹಿಂತಿರುಗಬೇಕಾಗುತ್ತೆ, ಅನ್ನುವ ಅತ್ಯವಶ್ಯವಾದ ವಿವರಗಳು ಈ ಪುಸ್ತಕವನ್ನು ಮಾರ್ಗದರ್ಶಿಯನ್ನಾಗಿ ಮಾಡಿದೆ. ಪ್ರಯಾಣದ ಉದ್ದಕ್ಕೂ ದೇವಸ್ಥಾನಗಳು, ನದಿ ಸಂಗಮಸ್ಥಳಗಳು, ಧುಮ್ಮಿಕ್ಕುವ ಜಲಪಾತಗಳು, ಬಸ್ ಪ್ರಯಾಣ, ಕುದುರೆ ಮತ್ತು ಯಾಕ್ ಸವಾರಿ, ಕಾಲ್ನಡಿಗೆ, ಆತಂಕ, ಆಯಾಸ, ಭಯ, ಹಸಿವು, ಸಹಪ್ರಯಾಣಿಕರು, ಅವರ ಸಹಾಯಕವಾದ ಭೋಟಿಯಾ ಜನಗಳು, ಪ್ರವಾಸ ನಿಗಮದ ಅಧಿಕಾರಿಗಳು, ಇವೆಲ್ಲವೂ ನೋಡಿ ಕೇಳಿ ಅನುಭವಿಸುವ ಸುಖ ಈ ಪ್ರವಾಸಕಥನವನ್ನು ಓದುವುದರಿಂದ ಸಿಗುತ್ತದೆ.

ನನಗೆ, ಬೆಟ್ಟದಿಂದ ಇರಲಿ ಒಂದನೇ ಅಂತಸ್ತಿನಿಂದ ಕೆಳಗೆ ನೋಡಿದರೆ ಕಾಲುನಡುಗುತ್ತವೆ. ಕಣ್ಣುಕತ್ತಲೆ ಬಂದಂತಾಗುತ್ತದೆ. ಹಾಗಿದ್ದಾಗ ತಾರಾಮೂರ್ತಿಯವರ ಹಿಮಾಲಯ ಯಾತ್ರೆಯ ಮೊದಲ ಭಾಗವನ್ನು ಓದುತ್ತಿದ್ದಾಗ ಏನಾಗಿರಬಹುದು ಊಹಿಸಿಕೊಳ್ಳಿ. ಧಾನೀದಾರ್ ಬೋಳು ಬೆಟ್ಟವನ್ನು ಹತ್ತಿದ್ದನ್ನು ತಾರಾಮೂರ್ತಿಯವರು ಹೀಗೆ ಹೇಳುತ್ತಾರೆ :

ಆರಂಭ ಶೂರತ್ವದಲ್ಲಿ ಎಲ್ಲರೂ ಸರಸರನೆ ಮೆಟ್ಟಿಲುಗಳನ್ನೇರಿದೆವು.ಅರ್ಧಗಂಟೆಯಲ್ಲೇ ಏದುಸಿರು, ಒಣಗಿಬಂದ ಗಂಟಲು, ಕಾಲ್ನಡುಕ ಆದರೂ ಸೋಲಬಾರದೆಂಬ ಛಲ. ಐವತ್ತು ಅಡಿ ಮೇಲೇರಿದರೆ ಐದು ನಿಮಿಷ ನಿಲ್ಲುವುದು, ಮತ್ತೆ ಮುಂದೆ ಹೋದವರನ್ನು ನೋಡುತ್ತಲೇ ಆವೇಶ ಬಂದವರಂತೆ ಮೇಲೇರುವುದು. ಒಬ್ಬೊಬ್ಬರಂತೆ ತಂಡದ ಸದಸ್ಯರು ನನ್ನನ್ನು ಹಿಂದೆಹಾಕಿ ಹೋದಾಗಲೆಲ್ಲ ಮತ್ತಷ್ಟು ಸಾಹಸ ಹುಟ್ಟಿ ಇನ್ನೊಂದೈವತ್ತು ಅಡಿಗಳಿಗೆ ದೇಹವನ್ನು ಎಳೆದುಹಾಕುತ್ತಿದ್ದೆ. ಹತ್ತು ಗಂಟೆಯ ಹೊತ್ತಿಗೆ ಹತ್ತುವ ಶ್ರಮದ ಜೊತೆಗೆ ಬಿಸಿಲಿನ ತಾಪದಿಂದಲೂ ಮೈಬೆವರೊಡೆದಿತ್ತು.

ಬಾಯಾರಿಕೆ ಹೇಳಲಾರದಷ್ಟು. ಅರ್ಧದಾರಿಮುಗಿದು ಸುಧಾರಿಸಿಕೊಳ್ಳಲು ನಿಂತು ಕೆಳಗೆ ನೋಡಿದರೆ ತಲೆಸುತ್ತಿಬಂದಂತೆ ಕೆಳಗರುಳುತ್ತಿರುವಂತಹ ಭಾವನೆ. ಧೈರ್ಯವಹಿಸಿ ನಿಂತುನೋಡಿದರೆ ತವಾಘಾಟ್‌ನಲ್ಲಿ ಓಡಾಡುವ ಜನರು ಇರುವೆಗಳಂತೆ ಚಿಕ್ಕದಾಗಿ, ಆದರೆ ಸ್ಪಷ್ಟವಾಗಿ ಕಾಣುತ್ತಿದ್ದರು. ಥಾನೀಘಾಟ್ ಬೆಟ್ಟ ಅಷ್ಟು ಬೋಳುಬೋಳಾಗಿದೆ, ಕಡಿದಾಗಿದೆ, ತವಾಘಾಟ್ ಕಡೆಗೆ!

ತಾರಾಮೂರ್ತಿಯವರೆ,

ಸದ್ಯ ನಿಮ್ಮ ಪುಸ್ತಕ ಓದಿದ್ದೇನೆ. ಇನ್ನು ನಾನು ಹಿಮಾಲಯಕ್ಕೆ ಹೋಗುವುದಿಲ್ಲ. ಹಿಮಾಲಯ ಹೇಗಿದೆ ಅನ್ನುವ ಅನುಭವಕ್ಕೆ ನಿಮ್ಮ ಪುಸ್ತಕವನ್ನು ಮತ್ತೆ ಮತ್ತೆ ಓದುತ್ತೇನೆ.

ತಾರಾಮೂರ್ತಿಯವರ ಕಣ್ಣಿನ ಮೂಲಕ ನಾವು ಅದ್ಭುತದೃಶ್ಯಗಳನ್ನು ನೋಡುತ್ತೇವೆ, ಕಿವಿಯ ಮೂಲಕ ನಾನಾರೀತಿಯ ಸದ್ದುಗಳನ್ನು ಕೇಳುತ್ತೇವೆ. ಈ ಪ್ರವಾಸ ನಮ್ಮ ಕಣ್ಣೆದುರಿಗೆ ಒಂದು ಡಾಕ್ಯುಮೆಂಟರಿಯ ಹಾಗೆ ಬಿಚ್ಚಿಕೊಳ್ಳುತ್ತ ಹೋಗುತ್ತದೆ. ತುಂಬ ಹಸಿದಾಗ ಎಂಥದೋ ಆಹಾರಸಿಕ್ಕಾಗ ತಿನ್ನುವ ಸುಖ, ದಣಿದಾಗ ಸಿಗುವ ವಿಶ್ರಾಂತಿಯ ಸುಖ, ಯಾರ್‍ಯಾರೋ ಅಪರಿಚಿತರ ನಡುವೆ ತನ್ನನ್ನೇ ಮರೆಯುವ ಆನಂದ, ಹೀಗೆ ತಾರಾಮೂರ್ತಿಯವರ ಪ್ರವಾಸ ನಮಗ ಇಂದ್ರಿಯಗ್ರಾಹ್ಯವಾದ ಅನುಭವವಾಗುತ್ತದೆ. ಪ್ರವಾಸದಲ್ಲಿ ಸಿಗುವ ಸ್ವಾತಂತ್ರ್ಯ ಭಾವನೆಗೆ ಈ ನಾರಾಯಣಾಶ್ರಮಕ್ಕೆ ನಡೆದು ಅನುಭವವನ್ನು ಕೇಳಿ:

ಬೆಳಿಗ್ಗೆ ಆರುಗಂಟೆಗೆ ಇನ್ನೂ ಮುಸುಕಿದ್ದ ಮಂಜಿನಲ್ಲೇ ನಡೆಯಲಾರಂಭಿಸಿದೆವು. ಮೂರು ಕಿ.ಮೀ.ನ ಏರುದಾರುದಾರಿಯನ್ನು ಒಂದೂವರೆ ಗಂಟೆಯಲ್ಲಿ ಕ್ರಮಿಸಿದೆವು. ಥಾನೀದಾರ್ ಬೆಟ್ಟ ಹತ್ತುವಿಕೆಗೆ ಹೋಲಿಸಿದರೆ ಇದು ಮಕ್ಕಳಾಟದಂತಿತ್ತು......... ನಮ್ಮ ಜೊತೆಯಲ್ಲೇ ನಡೆದಿದ್ದ ಭಾವಾನೀಸಿಂಗ್ ಇಂದು ಕೇವಲ 'ಪೋನಿವಾಲಾ'ನಾಗದೆ ಗೆಳೆಯನಾಗಿ ಹೋಗಿದ್ದ. ಹದಿನೆಂಟರ ಈ ಯುವಕ ಧಾರ್ಚುಲಾಶಾಲೆಯಲ್ಲಿ ಹನ್ನೊಂದನೇ ಇಯತ್ತೆಯಲ್ಲಿದ್ದ ವಿದ್ಯಾರ್ಥಿ. ತಂದೆಯ ವರಮಾನ ಸಾಲದೆಂದು ಈ ಯಾತ್ರಾಕಾಲದ ನಾಲ್ಕು ತಿಂಗಳು ಕುದುರೆ ನಡೆಸುವ ಕಾಯಕಕ್ಕಿಳಿದ. ಅವನ ರೀತಿ, ನೀತಿ ಶಾಲೆಯಿಂದ ಖಾಯಂ ರಜೆಯಲ್ಲಿದ್ದಂತಿತ್ತು. ಚುರುಕಿನ ಭಾವಾನಿ ಸಿಂಗ್ ಹಳ್ಳಿ ಹಾಡುಗಳ ಸರದಾರನೇ! ಹರೆಯದ ಹುಡುಗಿಯರನ್ನು ಕುರಿತ ಹಾಡುಗಳ ಖಜಾನೆಯೇ ಇವನಲ್ಲಿತ್ತು.

ಹೀಗೆ ಈ ಪ್ರವಾಸಕಥನ ಸಾಗುತ್ತಿದ್ದಾಗ, ಬರೀ ದೃಶ್ಯಗಳಲ್ಲಿ, ಪ್ರವಾಸದಲ್ಲಿದ್ದ ಜನಗಳೂ ಜೀವಂತ ಪಾತ್ರಗಳಾಗುತ್ತಾರೆ. ನೀವೊಂದು ಕಾದಂಬರಿಯನ್ನು ಓದುತ್ತಿದ್ದೀರೋ ಏನೋ ಎನಿಸುತ್ತದೆ. ಮತ್ತೆ ಸ್ವಲ್ಪ ಮುಂದಿನ ಭಾಗ ಹೀಗಿದೆ:

ನಿರ್ಮಲಾರೊಂದಿಗೆ ಭವಾನಿಸಿಂಗ್ ಬಹುಮುಂದೆ ಹೋಗಿದ್ದ. ಪಾಯಿಂಟ್‌ನಿಂದ ಐದಾರು ಜನ ಒಟ್ಟಿಗೆ ಇಳಿಯಲು ಮೊದಲಿಟ್ಟರೂ ಅರ್ಧಗಂಟೆಯಲ್ಲೇ ನನ್ನ ನಿಧಾನದ ನಡಿಗೆಯಿಂದಾಗಿ ನಾನು ಮತ್ತೆ ಒಬ್ಬಂಟಿ. ಎರಡೂ ಕಡೆ ಹಬ್ಬಿದ್ದ ಕಾಡು, ಹಕ್ಕಿಗಳ ಚಿಲಿಪಿಲಿ ವಿಭಿನ್ನ ಕೂಗುಗಳು, ನನ್ನ ಬೂಟುಗಾಲಿನ ಧಪ್ ಧಪ್ ಸದ್ದಿನಡಿ ಒಣಗಿದೆಲೆಗಳ ಸರಸರ. ಹಠಾತ್ತನೇ ನನ್ನ ಕೈಯಿಂದ ಊರುಗೋಲನ್ನು ಸೆಳೆದುಕೊಂಡ ಕೈ. ಕಿಟ್ಟನೆ ಕಿ ರುಚಿದೆ. ಎಲ್ಲೆಡೆ ಗಹಗಹಿಸಿ ನಗುವಸದ್ದು. ಕಿವಿಯ ಬಳಿಯೇ ಹೂಹೂ ಎಂದು ವಿಕಾರವಾಗಿ ಕಿರುಚಿದ

ಮುಖಿ. "ಡರ್ ಗಯೇ ಬೆಹನಜೀ" ಎಂದು ದಾರಿಗಡ್ಡವಾಗಿ ಹಾರಿ ಬಂದ ಭವಾನಿಸಿಂಗ್! ಕುಕ್ಕರಿಸಿ ಕುಳಿತೆ. ಆಗ ಗೋಚರಿಸಿದರು ಪಕ್ಕದ ಪುಟ್ಟ ಬಯಲಿನಲ್ಲಿ ಕುಳಿತು, ಮಲಗಿ ವಿರಮಿಸುತ್ತಿದ್ದ ಇತರ ಕೆಲವು ಪೋರ್ಟರ್ ಪೋನೀವಾಲಾಗಳು. "ಇನ್ನೊಮ್ಮೆ ಈ ರೀತಿ ಹೆದರಿಸಿದರೆ ಜ್ಞಾನತಪ್ಪಿ ಬೀಳುವವಳೇ. ಆಗ ನೀನೇ ನನ್ನನ್ನು ಹೊತ್ತು ಒಯ್ಯಬೇಕಾಗುವುದು ಎಚ್ಚರ" ಎಂದೆ. " ನೀನೇನು ಜ್ಞಾನತಪ್ಪಿ ಬೀಳಬೇಕಾಗಿಲ್ಲ. ಈಗಲೇ ಹೇಳು, ಎತ್ತಿ ಒಯ್ಯುತ್ತೇನೆ. ಇಲ್ಲ ನಿನ್ನ ಕುದುರೆ ತರುತ್ತೇನೆ" ಎಂದ. "ಹೌದಪ್ಪಾ ಹನುಮಂತ" ಎಂದು ನಕ್ಕು ಅವರಿದ್ದ ಜಾಗಕ್ಕೇ ಹೋಗಿ ಕುಳಿತು, ಕಾಲಿನ ನಡುಕ ಹೋಗಲೆಂದು. ಆಕ್ಷಣದಿಂದ ಭವಾನಿಸಿಂಗ್‌ನಂತ ಇತರ ಸಿಂಗ್‌ಗಳು ನನ್ನ ಬಂಟರೇ ಆಗಿಹೋದರು.

ಹೀಗೆ ಭವಾನಿಸಿಂಗ್, ದಿವಾನ್‌ಸಿಂಗ್, ತುಲಾರಾಂ ಸಿಂಗ್ ಭಿಕ್ಷುಕರ ಮಕ್ಕಳು ಶಾಲೆಗೆ ಹೋಗುವ ಹುಡುಗರು, ಗುಡ್ಡಗಾಡಿನ ಜನ, ಅವರ ಸಂಸಾರಗಳು, ಭೋಟಿಯಾಗಳ ನರ್ತನ, ಕುಸಿಯುವ ಮಣ್ಣು, ಉರುಳಿಬೀಳುವ ಬಂಡೆಗಳು, ಜರಿದುಹೋಗುವ ದಾರಿಗಳು, ಸರೋವರಗಳು, ಪರ್ವತಶಿಖರಗಳು, ಜಲಪಾತಗಳು, ಗೊಂಪಾ ಜನಗಳು ನೂರೆಂಟು ಪಾತ್ರಗಳು ನಮ್ಮ ಅನುಭವಕ್ಕೆ ಬರುತ್ತವೆ.

'ಗರ್ಭ್ಯಾಂಗ್' ಅನ್ನುವ ಭಾರತ-ಟಿಬೆಟ್ ನಡುವಿನ ದೊಡ್ಡ ವ್ಯಾಪಾರ ಕೇಂದ್ರ ಈಗ ಸಣ್ಣ ಹಳ್ಳಿಯಾಗಿ ಹೋದ ಚರಿತ್ರೆಯನ್ನು ತಾರಾಮೂರ್ತಿ ಹೇಳುತ್ತಾರೆ. ಅದರ ಹಿಂದಿನ ಶ್ರೀಮಂತಿಕೆಯನ್ನು ಕಲ್ಪಿಸಿಕೊಳ್ಳುತ್ತಾ ಹೋಗುತ್ತಿದ್ದಾಗ ನಿರ್ಮಲಾ ಅವರು ಸೌಂದರ್ಯಲಹರಿಯನ್ನು ಹಾಡುತ್ತಿದ್ದಾಗ-

ಅಲ್ಲಿ ಮೇಯುತ್ತಿದ್ದ ಕುರಿಗಳೂ ಅರಚಿಕೊಳ್ಳುತ್ತಿದ್ದವು. ಮೇಲಿನಿಂದ ಹಾರಿಬಂದ ಹದ್ದೊಂದು ಕುರಿಮರಿಯನ್ನು ಎತ್ತಿಕೊಂಡು ಮೇಲೆ ಹಾರಿತು. ಅದರ ಹಿಡಿತ ಸರಿಯಿರಲಿಲ್ಲವೋ ಅಥವಾ ಮರಿಯೇ ಭಾರವಾಯಿತೋ ಮರಿ ದೊಪ್ಪೆಂದು ಕೆಳಗೆ ಬಿತ್ತು. ಒಂದು ಸುತ್ತು ಹಾರಿ ರಿವ್ವನೆ ಮತ್ತೆ ಎರಗಿದ ಹದ್ದು ಮರಿಯಮೇಲೇ ಕುಳಿತು, ಸುತ್ತಲೂ ನೋಡಿ ಒಂದು ದೊಡ್ಡ ಕೂಗು ಹಾಕಿದ್ದೇ ತಡ ಕುರಿಗಳೆಲ್ಲಾ ಚೆಲ್ಲಾಪಿಲ್ಲಿ. ಹದ್ದು ಅಲ್ಲೇ ಆಗಲೇ ತನ್ನ ಊಟವನ್ನು ಹರಿಯಾಲಾರಂಭಿಸಿತು. ಸೌಂದರ್ಯಲಹರಿಯಿಂದ ಜಾರಿಸಿ ರುದ್ರ ಅಲೆಗಳಿಗೆ ಅಪ್ಪಳಿಸಿದಂತಾಗಿ ಜೀವ ತಲ್ಲಣಿಸಿಹೋಯಿತು.

ಹೀಗೆ ತಾರಾಮೂರ್ತಿಯವರ ಕ್ಯಾಮರಾ ಕಣ್ಣು ಅನೇಕ ದೃಶ್ಯಗಳನ್ನು ಸೆರೆಹಿಡಿಯುತ್ತದೆ. ಅದು ಯಾಕ್ ಸವಾರಿಯಾಗಬಹುದು ಅಥವಾ ಕುದುರೆ ಮರಿಗಳ ಚಿತ್ರವಾಗಬಹುದು. ಪ್ರವಾಸಿ ತಂಡದೊಂದಿಗೆ ನಡೆದಿದ್ದ ಕುದುರೆಮರಿಗಳ ಸಡಗರ, ಚೆಲ್ಲಾಟ, ತುಂಬಿದ ಕೆಚ್ಚಲಿಗೆ ಬಾಯಿಹಾಕುವ ಅವುಗಳ ನೆಗೆದಾಟ, ಬಳಿಗೆ ಬಂದ ಇತರ ಮರಿಗಳೊಡನೆ, ಮನುಜರೊಡನೆ ಖಾಲಿ ಗುದ್ದಾಟ. ಒದೆದಾಟ, ಅರ್ಥವಿಲ್ಲದ ಜಗಿತ, ಓಟ-ಮನ ಕದಿಯುವ ಮಕ್ಕಳು ಮಕ್ಕಳೇ! ಯಾವುದೇ ಪ್ರಾಣಿಯದಾಗಲಿ ಎಳೆಯರ ಮುಗ್ಧತೆ ಮನವೊಲಿಸುವಂತಹದು.

ಮಾಂಧಾತ ಪರ್ವತ ಶಿಖರಗಳು, ರಾಕ್ಷಸ ತಾಲ್, ಮಾನಸ ಸರೋವರ ಕೈಲಾಸದ ಪರ್ವತಗಳನ್ನು ನೋಡಿದ ಮೇಲೆ ತಾರಾಮೂರ್ತಿಯವರು ಹೀಗೆ ಹೇಳುತ್ತಾರೆ:

ಆದಿ ಮಾನವನಿಂದ ಆಧುನಿಕ ಮಾನವನವರೆಗೆ ಏಕತಂತುವಾಗಿ ಹರಿದು ಬಂದಿರುವ ಭಾವವೇ ಅನುಭಾವ – 'ಮಿಸ್ಟಿಕ್ ಎಕ್ಸ್‌ಪೀರಿಯನ್ಸ್!' ಪರಿಸರದಲ್ಲಿನ ಭವ್ಯ ದೃಶ್ಯಗಳನ್ನು ನೋಡಿ ದಿಙ್ಮೂಢನಾಗುವುದು–ಈ ಇಂದ್ರಿಯಾತೀತ ಅನುಭವವನ್ನು ಮತ್ತೆ ಮತ್ತೆ ಪಡೆಯಲು ಈ ತಾಣಗಳಿಗೆ ಮರಳುವುದು. ಭೀತಿಜನ್ಯ ಭಕ್ತಿಯನ್ನು ಪ್ರೀತಿಜನ್ಯ [illegible]ನ್ನಾಗಿಸಿಕೊಳ್ಳಲು ಪ್ರಯತ್ನಿಸುವುದು. ಅದಕ್ಕಾಗಿ ದೇಗುಲ, ಪೂಜೆ ಎಂದು ಭವ್ಯವನ್ನು 'ಮಾನವೀಯ' ಮಾಡುವುದು ಮಾನವನ ಮೂಲ ಸ್ವಭಾವದ ಒಂದು ಮುಖ. ಟಿಬೆಟ್ಟಿನ ನ್ಗಾರಿ ಪ್ರದೇಶದ ನಿಸರ್ಗ ವೈಶಿಷ್ಟ್ಯದ ಅನುಭವದ ಮೇಲೆ 'ಅಸಂಭವ' 'ಅಸಾಧ್ಯ' ಪದಗಳು ನಮ್ಮ ಬುದ್ಧಿಗೆ ನಾವೇ ಹಾಕಿಕೊಳ್ಳುವ ಮಿತಿಯೆನಿಸಿತ್ತು. ಇಲ್ಲಿ ಹಿಮವಂತನೊಡಲಲ್ಲಿ ಈ ರೀತಿ ನಡೆದಾಡಿದ ಮೇಲೆ ಅವೆರಡು ಪದಗಳು ಕೇವಲ ಶಬ್ದಕೋಶದ ಪದಗಳಾಗಿ ಉಳಿದು ಹೋದವು. ಪ್ರಕೃತಿನಿಯಮದ ನಿಗೂಢತೆ, ಅದರ ಅನಂತತೆಯ ಸುಳಿವು ಸಿಕ್ಕುವುದು ಈ ಪರ್ವತ ಶ್ರೇಣಿಗಳಲ್ಲಿ. ಈ ಸುಳಿವಿನ ಬೆಂಬತ್ತಿ ನಿಸರ್ಗನಿಯಮವನ್ನರಿಯುವ, ಅನಂತತೆಯನ್ನಳಿಯುವ ಮಾನವ ಚೈತನ್ಯದ ಅಪರಿಮಿತತೆಯ ಅರಿವಾಗುವುದು ಇದೇ ಪರ್ವತಸ್ತೋಮದ ಎತ್ತರದಲ್ಲಿ.

ಬಾಲ್ಯದ ಕುರುಹುಗಳಾದ ಹಾರಾಟ, ಕುಣಿದಾಟ, ಲವಲವಿಕೆಯ ಉತ್ಸಾಹ, ಕುತೂಹಲ, ಅಚ್ಚರಿ, ಇತರರ ನೋವು ನಲಿವಿಗೆ ಸ್ಪಂದಿಸುವ ಚೈತನ್ಯ, ಸ್ಥಾವರಗಳಿಗೂ ಪ್ರಾಣನೀಡುವ ಕಲ್ಪನಾಶಕ್ತಿ ದೊಡ್ಡವರಾದಂತೆ ಕ್ಷೀಣಿಸಿದುದು ಈ ಪ್ರವಾಸ ಕಾಲದಲ್ಲಿ ಮತ್ತೆ ಬಲಗೊಂಡಿದ್ದವು. ಆಹ್ಲಾದ ಆನಂದ ಪರವಶತೆ ತಲ್ಲೀನತೆ ಎಂಬುದರ ಮರುಪರಿಚಯವಾಗಿತ್ತು. ನಿಜವಾದ ಅರ್ಥದಲ್ಲಿ ನಾವೆಲ್ಲ ಜೀವಂತರಾಗಿದ್ದೆವು. ಮೂರು ವಾರಗಳ ನಿಸರ್ಗದೊಡಲಿನ ಚಾರಣದಿಂದ ಕಾಯಕಲ್ಪವೇ ಆಗಿತ್ತು................

ಈ ರೀತಿ ಕುಟುಂಬದವರೊಡನೆ ಯಾವುದೇ ರೀತಿ ಸಂಪರ್ಕವಿಲ್ಲದೆ, ಮಾಮೂಲಿ ದಿನಚರಿಯಿಲ್ಲದೆ, ರೇಡಿಯೋ, ಟಿ.ವಿ, ದಿನಪತ್ರಿಕೆ ಇತ್ಯಾದಿಗಳ ಮೂಲಕ ಆಗುವ ಹೊರಗಿನ ಪ್ರಪಂಚದ ಸಂಪರ್ಕವೂ ಇಲ್ಲದೆ, ೩–೪ ವಾರ ಒಬ್ಬರೇ ಇದ್ದರೆ ವ್ಯಕ್ತಿಗತ ಭಾವನೆಗಳ ಸಂಬಂಧಗಳ ಪೂರ್ವಾಗ್ರಹ ವಿಚಾರಗಳ, ಅಭಿಪ್ರಾಯಗಳ ಗೋಜಲನ್ನು ಕಿತ್ತೊಗೆದು ಮನದಂಗಳವನ್ನೊಮ್ಮೆ ಸ್ವಚ್ಛಗೊಳಿಸುವ ಕಾರ್ಯನಡೆಯುವುದು ಸುಲಭ. ಇಂತಹ ತಿಳುವಳಿಕೆ ಯಾರೇ ಹೇಳಿದ ಮಾತಾಗದೆ ಸ್ವಾನುಭವದ ಫಲವಾದ ಅರಿವಾಗುವುದು ಹೇಗೆನ್ನುವುದನ್ನು ಈ ಪುಸ್ತಕ ತೋರಿಸಿಕೊಡುತ್ತದೆ.

ನಾನು ಈ ಮುನ್ನುಡಿಯಲ್ಲಿ ಹೇಳದೇ ಬಿಟ್ಟಿರುವ ಅನೇಕ ಕುತೂಹಲಕಾರಿ, ಆಕರ್ಷಕ ವಿಷಯಗಳನ್ನು ತಿಳಿಯಬೇಕಾದರೆ, ಈ ಪುಸ್ತಕವನ್ನು ಆಮೂಲಾಗ್ರವಾಗಿ ಓದಲೇ ಬೇಕು. ಶ್ರೀಮತಿ ತಾರಾಮೂರ್ತಿಯವರು ಈ ಪುಸ್ತಕವನ್ನು ಹಸ್ತಪ್ರತಿಯಲ್ಲಿ ಓದಿಸಿ ಉಪಕಾರಮಾಡಿದ್ದಾರೆ. ಅವರಿಗೆ ಕೃತಜ್ಞತೆಗಳು.

**ಸುಮತೀಂದ್ರ ನಾಡಿಗ್**

**ಅಧ್ಯಕ್ಷರು, ನ್ಯಾಷನಲ್ ಬುಕ್ ಟ್ರಸ್ಟ್, ದೆಹಲಿ**

# ಅರಿಕೆ

ಕೈಲಾಸ ಮಾನಸ ಯಾತ್ರೆಯು ಒಂದೊಂದು ದಳವೂ ಚಿತ್ರಾಂಕಿತವಾಗಿರುವ ಒಂದು ಸಹಸ್ರದಳ ಕಮಲದಂತೆ. ನನ್ನ ಅನುಭವಕ್ಕೆ ಬಂದದ್ದು ಇನ್ನೂರು ದಳಗಳಾದರೆ ನೆನಪಿನಲ್ಲಿ ಸ್ಥಿರಗೊಂಡದ್ದು ನೂರುದಳಗಳು ಮಾತ್ರ. ಅವುಗಳನ್ನು ಮಾತಿನಲ್ಲಿ ವಿವರಿಸ ಹೊರಟಾಗ ವಿವರಣೆಗೆ ಸಿಕ್ಕಿದ್ದು ಕೇವಲ ಐವತ್ತು ದಳಗಳ ವಿವರ! ಮಿಕ್ಕೆಲ್ಲವೂ ಮಾತಿಗೆ ನಿಲುಕದ ಅನುಭವಗಳಾಗಿ, ನನ್ನನ್ನು ರಹಸ್ಯವಾಗಿ ಕೈಲಾಸ – ಮಾನಸಕ್ಕೇ ಕಟ್ಟಿಹಾಕಿದ ಸೂತ್ರಗಳಾಗಿ ಒಳಸರಿದು ಹೋದವು – ಸಿಹಿನೋವನುಳಿಸಿ. ಕಾರಣ, ಯಾತ್ರಾ ಪ್ರವಾಸದ ಪ್ರತಿಯೊಂದು ದಿನವೂ ಕ್ರಿಯಾನ್ವಿತವಾಗಿದ್ದುದೇ ಅಲ್ಲದೆ ದೇಹಮನಸ್ಸುಗಳ ಮೇಲ ಅನುಭವಗಳ ದಾಖಲಾತಿ ಸತತವಾಗಿರುತ್ತಿತ್ತು. ಅಸಾಧಾರಣ ಘಟನೆಗಳ – ನೋಟಗಳ ನಿರಂತರ ಆಘಾತದಿಂದಾಗಿ ಬುದ್ಧಿ ಬಹುವೇಳೆ ದಿಗ್ಭ್ರಮೆಗೊಳಗಾಗಿರುತ್ತಿತ್ತು. ಅನುಭವಗಳ ಚಿಂತನೆ–ಮನನಕ್ಕೆ ವ್ಯವಧಾನವೆಲ್ಲಿ? ಆರೋಗ್ಯ ತಪ್ಪುವುದಕ್ಕೂ ವ್ಯವಧಾನವಿರಲಿಲ್ಲ! ಬಿದ್ದು ಮೂಳೆ ಮುರಿದಾಗಲೂ ಉಳುಕಿದಾಗಲೂ ತುರ್ತು ಚಿಕಿತ್ಸೆಮುಗಿಸಿ ಮುಂದೆ ಸಾಗುತ್ತಿದ್ದ ದಿನಗಳವು. ಅರಿವಿಗೆ ಬರುವ ಮುನ್ನವೇ ಕೈಲಾಸ ಮಾನಸ ಯಾತ್ರಾ ಪ್ರವಾಸ ಮುಗಿದು ಹೋಯಿತು. ಪ್ರವಾಸಕಾಲದಲ್ಲಾದ ಅನುಭವಗಳನ್ನು ಮೆಲುಕಾಡಿ ಅರಗಿಸಿಕೊಳ್ಳಲು ನಾಲ್ಕೈದು ತಿಂಗಳುಗಳೇ ಬೇಕಾದವು. ಹಗಲೆಲ್ಲಾ ಬಂದು ಕಾಡುತ್ತಿದ್ದ ಎಷ್ಟೋ ನೆನಪುಗಳು – ಅನಿಸಿಕೆಗಳು ವಿಶೇಷ ರೀತಿಯ ವಿಮನಸ್ಕತೆಗೆ ನನ್ನನ್ನು ತಳ್ಳುತ್ತಿದ್ದವು – ದೈನಂದಿನ ಚರ್ಯೆಗೆ ಅಡ್ಡಗಾಲಿಡುತ್ತಿದ್ದವು. ಕೈಲಾಸ ಮಾನಸದ ಗುಂಗಿನಿಂದ ಹೊರಬರಲು (ಅನಿವಾರ್ಯವಾಗಿ) ಇದ್ದುದೊಂದೇ ಮಾರ್ಗ. ಬಹುಸ್ಪುಟವಾಗಿ ಬಂದಿದ್ದ ಫೋಟೊಗಳು ಮತ್ತು ಆತುರದಲ್ಲಿ ಗೀಚುತ್ತಿದ್ದ ದಿನಚರಿಯ ನೆರವಿನಿಂದ ಮತ್ತೊಮ್ಮೆ ಸಾವಕಾಶವಾಗಿ, ಮಾನಸ ಪಥದಲ್ಲಿ ಸಾಗಿ ಬರುವುದು. ಅಂದು ಆದುದನ್ನು ಮರು ಅನುಭವಿಸಿ, ಆನಂದಿಸಿ, ನಿಧಾನದಲ್ಲಿ ಚಿಂತಿಸಿ ತೊಳಲುತ್ತಿದ್ದ ಮನಸ್ಸನ್ನು ಸಂತೈಸಿ ಮತ್ತೆ ಮನೆವಾಳ್ತೆಯ ನೊಗಕ್ಕೆ ಹೂಡುವುದು.

ಕೈಲಾಸ – ಮಾನಸದ ಪ್ರತ್ಯಕ್ಷ ಪ್ರವಾಸವೇನೋ ಮೂವತ್ತೈದು ದಿನಗಳಲ್ಲಿ ಮುಗಿದು ಹೋಯಿತು. ಮಾನಸ ಪಥದಲ್ಲಿನ ಪ್ರವಾಸವಾದರೋ ಅನುಗಾಲದ ಯಾತ್ರೆ. ಅದರ ಕೆಲವು ಮುಖ್ಯ ಮಜಲುಗಳನ್ನು ಪ್ರವಾಸಕಥನ ರೂಪದಲ್ಲಿ ದಾಖಲಿಸಲು ಒಂದು ವರ್ಷವೇ ಬೇಕಾಯಿತು. ಪ್ರವಾಸದಲ್ಲಾದ ಘಟನೆಗಳನ್ನು ಪ್ರತಿಕ್ರಿಯೆ ಭಾವನೆಗಳನ್ನು ಸಮಭಾವದಲ್ಲಿ ನಿಂತು ನೋಡುವ ಮಾನಸಿಕದೂರ ತಂದುಕೊಳ್ಳಲು ಈ ಕಾಲಾವಕಾಶದ ಅಗತ್ಯವಿತ್ತು. ಇದುವರೆಗ ಓದಿ ತಿಳಿದೆನೆಂದುಕೊಂಡಿದ್ದ ಎಷ್ಟೋ ಗಹನವಿಚಾರಗಳು, ವಾಕ್ಯಗಳು ಯಾತ್ರೆಯಲ್ಲಿನ ಸ್ವಾನುಭವದ ಪ್ರಕಾಶದಲ್ಲಿ ಸ್ಪಷ್ಟರೂಪತಳೆದು ಅರಿವಿನಾಳಕ್ಕಿಳಿದವು. ಈ ಬರವಣಿಗೆಯ ಕಾರ್ಯ ನಿಜಯಾತ್ರೆಯಷ್ಟೇ ಕಷ್ಟವಾದರೂ ಅಷ್ಟೇ ಆನಂದ, ಆತ್ಮ ತೃಪ್ತಿ ತಂದುಕೊಟ್ಟ ಕಾರ್ಯ. ಬಾಳಿಗೊಂದು ಹೊಸ ಅರ್ಥ ಒರೆದ ಕಾರ್ಯ. ಕೈಲಾಸಮಾನಸವನ್ನು ಹೃದಯದೊಳಗಿಳಿಸಿದ ಸಾಹಸ ಕಾರ್ಯ. ಇದು ಸಾಹಸ ಕಾರ್ಯವೇ ದಿಟ! ಏಕೆಂದರೆ ಇದನ್ನು ದಾಖಲಿಸಲು ನಾನಿನ್ನೂ ಬದುಕುಳಿದಿರುವ. ಇನ್ನೂ ಪರಿವರ್ತನೆ ಹೊಂದುತ್ತಿರುವುದರಿಂದ ಅಸ್ಥಿರ ಸ್ಥಿತಿಯಲ್ಲಿರುವ ಹಿಮಾಲಯ ಪರ್ವತಗಳನ್ನು ಹಾದು ಹೋಗುವ ಗಂಡಾಂತರದ ಮಾರ್ಗದಲ್ಲಿ, ಅಲ್ಲಿನ ಅನಿಶ್ಚಯತೆಯ ಹವಾಮಾನದಲ್ಲಿ, ಕಾಲ್ನಡಿಗೆಯಲ್ಲಿ ಪ್ರವಾಸ ಮಾಡುವುದೊಂದು ಸಾಹಸಕಾರ್ಯವೇ! (ಹುಚ್ಚುತನವೆಂದು ಹಲವರ ಅಭಿಮತ.) ಉದಾಹರಣೆಗೆ

ಕೈಲಾಸ ಮಾನಸ ಪ್ರವಾಸ ಮಾರ್ಗದಲ್ಲಿದ್ದ ಹಳ್ಳಿ ಗರ್ಭ್ಯಾಂಗ್ ಹಲವು ವರ್ಷಗಳ ಹಿಂದಿನ ಭೂಕಂಪದಲ್ಲಿ ಭೂಗತವಾಗಿ ಭೂತಕಾಲಕ್ಕೆ ಸರಿದುಹೋದಂತೆ ಕಳೆದ ತಿಂಗಳಷ್ಟೇ ಭೂಕುಸಿತದಿಂದಾಗಿ ಚರಿತ್ರೆಯ ಪುಟಗಳಿಗೆ ಸಂದುಹೋದ ಮಾಲ್ಪಾಹಳ್ಳಿಯಲ್ಲಿ ಎರಡು ಬಾರಿ ನಾವು ತಂಗಿದ್ದೆವೆಂಬುದನ್ನು ನೆನೆಸಿಕೊಂಡರೇ ಎದೆನಡುಕ ಬರುತ್ತದೆ. ಬದುಕಿನ ಅನಿತ್ಯತೆಯನ್ನು ಹೆಜ್ಜೆಹೆಜ್ಜೆಗೂ ತೋರಿಸುತ್ತಿದ್ದ ಈ ಪ್ರವಾಸದ ಅವರ್ಣನೀಯ ಅನುಭವಗಳನ್ನು ಶಬ್ದ ಜಾಲದಲ್ಲಿ ಹಿಡಿದಿಡುವುದು ಮತ್ತೊಂದು ಸಾಹಸ ಕಾರ್ಯ. (ಮೂಢತನವೆಂದರೂ ಸರಿ.)

ಗೋಕುಲಾಷ್ಟಮಿಯಂದು ಹಾದಿಮಧ್ಯದಲ್ಲಿ ಆರು ಆಳೆತ್ತರಕ್ಕ ಕಟ್ಟುವ ಮೊಸರು ಬೆಣ್ಣೆಗಡಿಗೆಯನ್ನು ಪಡೆಯಲು, ಗೋಪುರವಾಗಿ ನಿಂತ ಗೆಳೆಯರಮೇಲೇರಿ ಹೋದವನೊಬ್ಬನೇ ಹುಡುಗ ಬೆಣ್ಣೆ ಸೂರೆ ಮಾಡಿದಂತೆ ನನ್ನೆರಡೂ ಸಾಹಸಕಾರ್ಯಗಳು ಕೈಗೂಡಿದುದು ಹತ್ತುಹಲವರ ಸಹಾಯದಿಂದ ಮಾತ್ರ. ಮನೆಮಂದಿಯ ಬೆಂಬಲ, ಸಹಕಾರ, ಪ್ರೋತ್ಸಾಹವಷ್ಟೇ ಅಲ್ಲದೆ ವೈದ್ಯಕೀಯ ತಪಾಸಣೆ, ಪಾಸ್‌ಪೋರ್ಟ್ ಔಷಧಿಗಳು, ಉಣ್ಣೆ ಉಡುಪುಗಳು, ರೈಲು ರಿಸರ್ವೇಶನ್, ದಿಲ್ಲಿಯಲ್ಲಿನ ಸರಕಾರೀ ಕೆಲಸಗಳು, ಯಾತ್ರೆಗೆಂದು ಕಡೆಯದಾಗಿ ಖರೀದಿಸಿ ತಂದುದನ್ನು ಕಟ್ಟಿ ಕೊಟ್ಟು ನನ್ನ ಯಾತ್ರೆ ಸುಗಮವಾಗಿಸಿದ ಅನೇಕ ಬಂಧುಮಿತ್ರರ ಸಹಾಯ ದೈವ ಸಹಾಯದಷ್ಟೇ ಅಗತ್ಯವಾಗಿತ್ತು. ನನ್ನ ಕೈಗೆ ಬಂದುಳಿದ ಬೆಣ್ಣೆಯನ್ನು-ಪ್ರವಾಸದ ಛಾಯಾಚಿತ್ರಗಳು, ಅನುಭವಗಳನ್ನು- ಕನ್ನಡ ಬಾಂಧವರಲ್ಲಿ ಹಂಚಿಕೊಳ್ಳಲು ಪುಸ್ತಕ ರೂಪದಲ್ಲಿ ತರುವಾಗಲೂ ಅನೇಕರ ಸಹಕಾರ ಅತ್ಯಗತ್ಯವಾಗಿತ್ತು. ನಮ್ಮ ಛಾಯಾಚಿತ್ರಗಳನ್ನು, ಕೈಪಿಡಿ ಪುಸ್ತಕಗಳನ್ನು ಎರವಲು ಕೊಟ್ಟು ತಮ್ಮ ಅನುಭವಗಳನ್ನು ಅನಿಸಿಕೆಗಳನ್ನು ಹಂಚಿಕೊಂಡ ಸಹಯಾತ್ರಿಗಳ ದೇಣಿಗೆ ಅಮೂಲ್ಯ. ಬರವಣಿಗೆ ಕಾರ್ಯದಲ್ಲಿ ಮನಸ್ಸು - ಬುದ್ಧಿ ಕುಂಟಿದಾಗಲೆಲ್ಲಾ ಬೆನ್ನು ತಟ್ಟಿ ಪ್ರೋತ್ಸಾಹಿಸಿ ಬೇಕಾದ ಮಾಹಿತಿಗಳನ್ನು ಕೊಟ್ಟು, ಗ್ರಂಥಾಲಯಗಳಿಂದ ಪುಸ್ತಕಗಳನ್ನೊದಗಿಸಿದ ಸಾರಸ್ವತ ಬಂಧುಗಳ ಬೆಂಬಲ ಅಗಾಧ.

ನನ್ನ ಪ್ರವಾಸ ಕಥನದ ಮೂಲ ಪ್ರತಿಯನ್ನು ಓದಿ, ಪ್ರತಿಕ್ರಿಯಿಸಿ ಸೂಕ್ತ ಸಲಹೆಗಳನ್ನಿತ್ತವರು ಗೆಳತಿ ಡಾ. ಉಷಾ ಪಾಠಕ್. ಹಸ್ತಪ್ರತಿಯನ್ನು ಪರಿಷ್ಕರಿಸುವ ಕಷ್ಟತರ ಕಾರ್ಯವನ್ನು ಮಾಡಿದವರು ಡಾ. ಟಿ. ಪಿ. ಸುಬ್ರಹ್ಮಣ್ಯ(ನಿವೃತ್ತ ಪ್ರಾಧ್ಯಾಪಕರು). ಇದನ್ನು ನನ್ನಿಂದ ಓದಿಸಿ ಕೇಳಿದ ಡಾ. ತ. ಸು. ಶಾಮರಾಯರು ಮೆಚ್ಚಿ ಪುಸ್ತಕ ರೂಪದಲ್ಲಿ ತರಲು ಪ್ರೋತ್ಸಾಹಿಸಿದರು. ಹಸ್ತಪ್ರತಿಯನ್ನು ಪೂರ್ತಿ ಓದಿ, ತಕ್ಕುದಾದ ಸೊಗಸಾದ ಮುನ್ನುಡಿಯನ್ನು ಬರೆದು ಕೊಟ್ಟವರು ಡಾ. ಸುಮತೀಂದ್ರ ನಾಡಿಗ್. ಹಸ್ತಪ್ರತಿಯನ್ನು ಸುಂದರ ಪುಸ್ತಕವಾಗಿ ವಿನ್ಯಾಸಗೊಳಿಸಿ ಮುದ್ರಿಸಿದವರು 'ಮಿಡಿಯಾ ದರ್ಶನ್' ನಿರ್ದೇಶಕರಾದ ಶ್ರೀ ಎಸ್. ಎಸ್. ಪ್ರಸಾದ್ ಮತ್ತು ತಂಡದವರು ಹಾಗೂ 'ಸಾಹಿತ್ಯ ಕಲಾ ದರ್ಶಿನಿ'ಯ ಸಂಚಾಲಕರಾದ ರಾಧಾಕೃಷ್ಣ ಕಲ್ಯಾಣಪುರ್. ಪ್ರವಾಸಕಾಲದಲ್ಲಿ ತಗೆದ ಕೆಲವು ಛಾಯಚಿತ್ರಗಳನ್ನು ಕೊಟ್ಟು ಸಹಕರಿಸಿದ ಸಹಯಾತ್ರಿಕರು ಶ್ರೀ ಅಯೋಧ್ಯಾಪ್ರಸಾದ್(ಜೈಪುರ), ನವೀನ್ ಶಾಸ್ತ್ರೀ(ಮುಂಬಯಿ) ಮತ್ತು ರತ್ನ ಸಚ್ಚಿದಾನಂದ(ಬೆಂಗಳೂರು). ಇವರೆಲ್ಲರ ಸಹಯೋಗದೊಂದಿಗೆ ಪ್ರಕಾಶಕರಾದ ಶ್ರೀ ಎಚ್. ಎಸ್. ಮೂರ್ತಿಯವರ ಸಂಪೂರ್ಣ ಬೆಂಬಲದಿಂದಾಗಿ ಮಾತ್ರ ಈ ಪ್ರವಾಸ ಕಥನವು ಹೊರಬರಲು ಸಾಧ್ಯವಾದುದು. ಇವರೆಲ್ಲರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು

ದಿನಾಂಕ: 19-09-1999.  ರಾಮೂರ್ತಿ

ಬೆಂಗಳೂರು

# ಪೃಥ್ವಿಯ ಮಾನದಂಡ

**ಅಸ್ತ್ಯುತ್ತರಸ್ಯಾಂ ದಿಶಿ ದೇವತಾತ್ಮಾ ಹಿಮಾಲಯೋ ನಾಮ ನಗಾಧಿರಾಜಃ**
**ಪೂರ್ವಾಪರೌ ತೋಯನಿಧೀವಗಾಹ್ಯ ಸ್ಥಿತಃ ಪೃಥಿವ್ಯಾ ಇವ ಮಾನದಂಡಃ॥**
**ಯಂ ಸರ್ವಶೈಲಾಃ ಪರಿಕಲ್ಪ್ಯವತ್ಸಂ ಮೇರೌಸ್ಥಿತೇ ದೋಗ್ಧರಿ ದೋಹದಕ್ಷೇ**
**ಭಾಸ್ವಂತಿ ರತ್ನಾನಿ ಮಹೌಷಧೀಶ್ಚ ಪೃಥೂಪದಿಷ್ಟಾಂ ದುದುಹುರ್ಧರಿತ್ರೀಂ ॥**

(ಕುಮಾರ ಸಂಭವ ಪ್ರಥಮ ಸರ್ಗ ೧,೨)

ಶತಮಾನಗಳ ಹಿಂದೆ ಮಹಾಕವಿ ಕಾಳಿದಾಸನು ಹಿಮಾಲಯದ ಬಗ್ಗೆ ಬರೆದ ಮೇಲಿನ ಪಂಕ್ತಿಗಳು ಕವಿಯ ಉತ್ಪ್ರೇಕ್ಷೆಯಾಗಿರದೆ ವಾಸ್ತವದ ವಿವರಣೆಯೇ ಆಗಿದೆ. ಅವರ್ಣನೀಯವಾದುದನ್ನು ಕೆಲವೇ ಶಬ್ದಗಳಲ್ಲಿ ಹಿಡಿದಿಟ್ಟ ವಾಕ್ಪತಿ ಕಾಳಿದಾಸನು ಹಿಮಾಲಯದ ಸಾರಸತ್ವವನ್ನು ಮಾನದಂಡ ಎಂಬ ಒಂದೇ ಒಂದು ಶಬ್ದದಲ್ಲಿ ಘಟ್ಟಿಯಿಳಿಸಿದ್ದಾನೆ. ನಂತರ ಧರೆಯೆಂಬಧೇನುವಿಗೆ ಹಿಮಾಲಯ ಕರುವಿನಂತೆ ಎಂದು ಉಪಮಿಸಿ ಭೂಮಿ ಮತ್ತು ಹಿಮಾಲಯದ ನಡುವೆ ವಿಶಿಷ್ಟ ಸಂಬಂಧವನ್ನು ಬೆಸೆದಿದ್ದಾನೆ. ಜೊತೆಗೆ, ಹಾಲ್ಗರೆವ ನಿಪುಣನಾಗಿ ನಿಂತವನು ಮೇರುಗಿರಿ ಎಂದಿದ್ದಾನೆ. ಈ ಮೇರುಗಿರಿಯೇ ಬಹುಶಃ ನಿಸರ್ಗ ಸೌಂದರ್ಯದ ನೆಲೆಗಳನ್ನು ಆಯ್ದು ತಂದು ಹಿಮಾಲಯ ಕರುವನ್ನು ಶೃಂಗರಿಸಿರುವನೇನೋ! ಮೇರುಗಿರಿಯು ತನಗಾಗಿ ಇರಿಸಿಕೊಂಡ ಉತ್ಕೃಷ್ಟಮಣಿಗಳೇ ಕೈಲಾಸ ಶಿಖರ, ಮಾನಸ ಸರೋವರ ಮತ್ತು ರಾವಣ ಹ್ರದ (ರಾಕ್ಷಸ ತಾಲ್). ಈ ಮೂರೂ ಅಮೂಲ್ಯ ರತ್ನಗಳು ತಮ್ಮೆಡೆಗೆ ಬಂದವರನ್ನೆಲ್ಲ ಕವಿಗಳನ್ನಾಗಿಸುವ ಸ್ಪರ್ಶ ಮಣಿಗಳು.

ಕವಿಕಾಳಿದಾಸನ ಕಲ್ಪನೆಗೆ ಭೌತಿಕ ಆಧಾರವಿರುವುದು ಸ್ವತಃಸಿದ್ಧ. ಹಿಮಾಲಯವು ಹಲವು ರೀತಿಯಲ್ಲಿ ಪೃಥ್ವಿಯ ಮಾನದಂಡ. ಮಾನವನು ಭೂಮಿಯ ವಿಸ್ತಾರವನ್ನು ತನ್ನ ಅನುಭವಕ್ಕೆ ಬರುವಂತೆ ಅಳೆಯಬೇಕೆಂದರೆ ಹಿಮಾಲಯದ ಉದ್ದಗಲಕ್ಕೆ ಅಡ್ಡಾಡಬೇಕು. ಎತ್ತರ–ಆಳವನ್ನರಿಯಲು ಇದರ ಶಿಖರ –ಕಣಿವೆಗಳನ್ನು ಹತ್ತಿ ಇಳಿಯಬೇಕು. ಮಾನವನ ಕಾಲಮಾನವವನ್ನು ಬಿಟ್ಟು ಭೂಮಿಯ ಕಾಲಮಾನವನ್ನು ಅರಿಯಬೇಕೆಂದರೆ ಹಿಮಾಲಯದ ಒಡಲಲ್ಲಿ ಸುತ್ತಿ ಕಾಲದ ಕುರುಹುಗಳನ್ನು ಗುರುತಿಸಿದರೆ ಸಾಕು. ಭೂರಚನಾಕ್ರಮದ, ಭೂಮಿಯ ವಿವಿಧ ಪ್ರದೇಶಗಳ, ಋತುಮಾನಗಳ ಮಾದರಿಗಳನ್ನು ಅಭ್ಯಸಿಸಲು ಹಿಮಾಲಯ ಒಂದೇ ಸಾಕು. ಅಲ್ಲೇ ಎಲ್ಲ ಮಾದರಿಗಳೂ ಸಿಗುತ್ತವೆ. ಭೂಮಿಯ ಸಣ್ಣ ಮಾದರಿಯೊಂದು ಬೇಕೆಂದರೆ ಅದುವೇ ಹಿಮಾಲಯ. ಭೂಗರ್ಭದಿಂದ ಉದಿಸಿದ ಕಡೆಯ ಗಿರವತ್ಸವೇ ಹಿಮಾಲಯ. ೧೬೦ ಕೋಟಿ ವರ್ಷಗಳ ಹಿಂದೆ ನೀರಿನಿಂದ ತುಂಬಿದ್ದ ಟೆಥಿಸ್ ಸಾಗರದಲ್ಲಿ ಹಿಮಾಲಯದ ಗರ್ಭವಾಸ ಸುಮಾರು ನೂರು ಕೋಟಿ ವರ್ಷಗಳು. ಕೇವಲ ೬೦ ಲಕ್ಷ ವರ್ಷಗಳ ಹಿಂದಷ್ಟೆ ಈಗಿನ ರೂಪ ಪಡೆದಿರುವ, ಭೂಶಾಸ್ತ್ರದ ಕಾಲಮಾನದಲ್ಲಿನ್ನೂ ಶೈಶಾವಸ್ಥೆಯಲ್ಲಿರುವ ಹಿಮಾಲಯ ವಯೋಮಾನದಲ್ಲಿ ಅತ್ಯಂತ ಕಿರಿಯದಾದರೂ ಕಾಯಮಾನದಲ್ಲಿ ಮಿಕ್ಕೆಲ್ಲ ಪರ್ವತಶ್ರೇಣಿಗಳನ್ನೂ ಮೀರಿಸಿದ ಪರ್ವತ ಶ್ರೇಣಿ. ಇನ್ನೂ ವಿಕಾಸಶೀಲ ಸ್ಥಿಯಲ್ಲಿರುವ ಶ್ರೇಣಿ. ಬೇರಾವ ಪರ್ವತ ಪಂಕ್ತಿಗಳಲ್ಲೂ ಕಾಣ ಸಿಗದ ಮಹೋನ್ನತ ಶಿಖರಗಳು, ಅತಿದುರ್ಗಮ

ಕಣಿವೆಗಳಿರುವ ಹಿಮಾಲಯವು ನಗಾಧಿರಾಜ ಎನಿಸಿಕೊಂಡಿರುವುದು ಉಚಿತವೇ !

ಹಿಮಾಲಯ ದಿಂದ ನಿರಂತರ ಪ್ರವಹಿಸುವ ಜೀವನದಿಗಳ ಆಸರೆ, ನದಿಗಳ ಜೊತೆಗೆ ಹರಿದು ಬರುವ ಮೆಕ್ಕಲು ಮಣ್ಣಿನಿಂದ ಫಲವತ್ತಾದ ಗಂಗಾ ಬಯಲುಗಳು, ಹಿಮಾವೃತ ಪರ್ವತಗಳ ಬೃಹನ್ನತೆ ದುರ್ಗಮತೆಯಿಂದಾಗಿ ಸುರಕ್ಷಿತ ಜನಜೀವನ–ಎಲ್ಲವೂ ಭಾರತಕ್ಕೆ ಹಿಮಾಲಯದ ಕೊಡುಗೆ. ಇದರಿಂದಾಗಿಯೇ ಭಾರತೀಯ ಸಂಸ್ಕೃತಿಯ ಜನನ –ಪೋಷಣ–ವಿಜೃಂಭಣದಲ್ಲಿ ಹಿಮಾಲಯದ ಪಾತ್ರ ಹಿರಿದು. ಭಾರತೀಯನಿಗೆ ಹಿಮಾಲಯದ ಒಂದೊಂದು ಬೆಟ್ಟವೂ ದೇವತಾವಾಸ. ಒಂದೊಂದು ಗುಹೆಯೂ ಯಾರಾದರೊಬ್ಬ ಸಾಧು–ಸಂತ–ಸಿದ್ಧನ ತಪದ ಮನೆ. ಒಂದೊಂದು ಊರೂ ಒಂದಲ್ಲ ಒಂದು ಪುರಾಣ ಕಥೆಗೆ ಸಂಬಂಧಿಸಿದುದು. ಇಲ್ಲಿನ ವಿಶೇಷ ಆಕಾರದ ಬಂಡೆ – ಪುಟ್ಟಗುಡಿ – ಪುಟ್ಟ ಮಂದಿರ – ದೊಡ್ಡಮಂದಿರ ಬೃಹತ್ ದೇವಾಲಯ ಎಲ್ಲವೂ ಪವಿತ್ರ ಸ್ಥಾನಗಳೇ! ಋಷಿವಾಣಿಯಂತೆ ನೂರು ಜನ್ಮಗಳು ಸಾಲವು ಹಿಮಾಲಯದ ದಿವ್ಯ ಮಹಿಮೆಯನ್ನು ವಿವರಿಸಲು. ರವಿಯ ಮುಂದಿನ ಮಂಜಿನಂತೆ ತುಚ್ಛವಾದುದೆಲ್ಲವೂ ಕರಗಿಹೋಗುವುವು ಈ ನಿತ್ಯ ಪವಿತ್ರ ಹಿಮಾಲಯನ ದರ್ಶನ ಮಾತ್ರದಿಂದ . ಅಂತೆಯೇ ಈ ನಗಾಧಿರಾಜ ಹಿಮಾಲಯನು ಭಾರತೀಯ ಸಮಷ್ಟಿ ಪ್ರಜ್ಞೆಯ ಅಚಲ ಶ್ರಧ್ಧಾ ಭಕ್ತಿಗೆ ಪಾತ್ರನು. ಭಾರತೀಯ ಪುರಾಣ–ಇತಿಹಾಸ–ಸಾಹಿತ್ಯಗಳಲ್ಲಿ ಚಿರಸ್ಥಾನ ಪಡೆದವನು. ದೇವತಾತ್ಮನು.

ಒಂದು ರೀತಿಯಲ್ಲಿ ಹಿಮಾಲಯವು ಭಾರತೀಯ ಸಮಾಜದ (ಸೇಫ್ಟಿ ವಾಲ್ವ್) ಸುರಕ್ಷಣಾ ಕವಾಟ. ಸಾವಿರಾರು ಯಾತ್ರಿಗಳು ಪ್ರತಿದಿನವೂ ಇದರತ್ತ ಸಾಗುವರು. ದೇವರನ್ನು ಹುಡುಕಿಕೊಂಡು ಹೊರಟ ಭಕ್ತಜನರೇ ಅಲ್ಲದೆ, ಲೋಕ ವಿಲಕ್ಷಣರು, ವಿರಕ್ತರು, ದುಃಖಿಗಳು, ಜೀವನದಲ್ಲಿ ಬಳಲಿ ಬೇಸತ್ತವರು, ಸಮಾಜದಿಂದ ಭ್ರಷ್ಟರಾದವರು ಕೂಡ ಮನಶಾಂತಿಯನ್ನರಸುತ್ತ ಹಿಮಾಲಯದೊಡಲಿಗೆ ಧಾವಿಸುವರು. ತನ್ನಡೆಗೆ ಬರುವವರೆಲ್ಲರನ್ನೂ ಸಂತೈಸಿ ದಾರಿಗೆ ಹಚ್ಚುವ ದೈವೀಕತೆ ಹಿಮಾಲಯಕ್ಕಿರುವುದರಿಂದಲೇ ಅವನು ದೆವತಾತ್ಮನು. ಇಲ್ಲಿ ಸಿಗುವ ಅಸಾಧಾರಣ ಶಾಂತಿಯನ್ನು ಪ್ರತ್ಯಕ್ಷ ಕಂಡುಕೊಂಡ ಮತಾಚಾರ್ಯರುಗಳು – ಧರ್ಮಗುರುಗಳು ಹಿಮಾಲಯದಲ್ಲಿನ ಪ್ರವಾಸವನ್ನು ಯಾತ್ರೆಯೆಂದು ಪರಿಗಣಿಸಿ ಧಾರ್ಮಿಕ ವಿಧಿಗಳ ಪಟ್ಟಿಗೆ ಸೇರಿಸಿರುವರು.

ಯೂರೋಪಿನ “ ಆಲ್ಫ್” ಪರ್ವತಗಳನ್ನು ಮೀರಿಸುವ ವಿಶ್ವವಿಖ್ಯಾತ ಹಿಮ ಶಿಖರಗಳು, ಅಮೇರಿಕದ ರಾಕೀ ಮೌಂಟನ್ಸ್‌ನ್ನು ನಾಚಿಸುವ ಶಿಲಾಖಂಡಗಳ ಪರ್ವತ ಭಾಗಗಳು, ಸದಾ ಹಿಮಚ್ಛಾದಿತ ಪರ್ವತಗಳು, ಜಗತ್ಪ್ರಸಿದ್ಧ ಹಿಮಪ್ರವಾಹಗಳು, ಸರೋವರಗಳು, ಮಹಾನದಿಗಳು, ನದಿಗಳ ನಿರಂತರ ಹರಿಯುವಿಕೆಯಿಂದಾದ ದರಿ ಕೊಳ್ಳಗಳು, ನದಿಗಳು ಅಂಕುಡೊಂಕಾಗಿ ಹೊರಳಿ ಹರಿದು ನಿರ್ಮಿಸಿರುವ ಮಜಲುಗಳ ಬಯಲುಗಳು – ಮನೋಹರ ಕಣಿವೆಗಳು, ಫಲವೃಕ್ಷ ಸಹಿತ ಕೃಷಿಯೋಗ್ಯ ಪ್ರದೇಶಗಳು ಪ್ರಸ್ಥಭೂಮಿಗಳು, ಗಂಧಕಯುಕ್ತ ಬಿಸಿನೀರಿನ ಬುಗ್ಗೆಗಳು, ನದೀ ಸಂಗಮಗಳು, ವಿವಿಧ ರೀತಿಯ ಕಾನನಗಳು, ಅಭಯಾರಣ್ಯಗಳು – ವಿಶಾಲ ಹಿಮಾಲಯದೊಡಲಿನ ಈ ಅನ್ಯಾದೃಶ ನಿಸರ್ಗತಾಣಗಳ ವೈಭವವನ್ನು ಪೂರ್ಣವಾಗಿ ಆನಂದಿಸಲು ಒಂದು ಜನ್ಮಸಾಲದು. ಇದೇ ಕಾರಣ, ಒಮ್ಮೆ ಹಿಮಾಲಯದ ಮಡಿಲಲ್ಲಿ ಕಾಲಿಟ್ಟವರಿಗೆ ವಿಚಿತ್ರಗೀಳು ಹಿಡಿಯುವುದು. ಮತ್ತೆ ಮತ್ತೆ ಇಲ್ಲಿಗೆ ಬರುವಾಸೆ, ಇಲ್ಲಿಯ ನೋಟ ನೋಡುವಾಸೆ. ಇಲ್ಲಿನ ಗಾಳಿ, ನೀರು

ಸೇವಿಸುವಾಸೆ, ಆಗಸಕ್ಕೆ ಮೊಗ ಮಾಡಿ ನಿಲ್ಲುವಾಸೆ, ಇಲ್ಲಿನ ಪರ್ವತಗಳ ಬಗಲಿನಲ್ಲಿ ಹಾರಾಡುವಾಸೆ. ಇನ್ನೊಂದೇ ಸಲವೆಂದು ಮತ್ತೆ ಮತ್ತೆ ಮರಳುವಾಸೆ, ಇಲ್ಲಿನ ವಿಪತ್ತುಗಳನ್ನು ಎದುರಿಸಿ ಮೈನವಿರೇಳುವುದನ್ನು ಅನುಭವಿಸುವಾಸೆ ಈ ಕೊನೆಯಿಲ್ಲದ ಆಸೆಗಳು ಚಟವಾಗಿಹೋಗುವುದು. ಏನಿಲ್ಲವೆಂದರೂ ಕನಸಿನಲ್ಲಿಯಾದರೂ ಹಿಮಾಲಯದೊಡಲಿಗೆ ಧಾವಿಸುವುದು ಮನಸ್ಸು. ಈ ರೀತಿ ನಮ್ಮ ಮನಸ್ಸನ್ನು ಚುಂಬಕದಂತೆ ಸೆರೆಹಿಡಿದೆಳವ ಶಕ್ತಿ ಹಿಮಾಲಯಗಲ್ಲದೆ ಬೇರಾರಿಗೆ ಸಾಧ್ಯ! ಇಲ್ಲಿನ ಗಮ್ಯಸ್ಥಾನದಷ್ಟೇ ಅಥವಾ ಅದಕ್ಕಿಂತಲೂ ಮನೋಹಾರೀ ಚೇತೋಹಾರೀ ಮಾರ್ಗಗಳೂ ಯಾತ್ರಿಕರಿಗೆ,ಪ್ರವಾಸಿಗರಿಗೆ, ಚಾರಣಿಗರಿಗೆ ಮೋಡಿಹಾಕುತ್ತವೆ.

ಇನ್ನೂ ಪರಿವರ್ತನೆ ಹೊಂದುತ್ತಿರುವ, ಹಂತ ಹಂತವಾಗಿ ಎತ್ತರ ಪಡೆದು ಬೆಳೆಯುತ್ತಿರುವ ಹಿಮಾಲಯದಲ್ಲಿ ವಿವಿಧ ಭೂಮಟ್ಟದ ಸಸ್ಯ ಜಾಲ, ಪ್ರಾಣಿ ಜಾಲ ಒಂದು ಮಟ್ಟದಿಂದ ಇನ್ನೊಂದು ಮಟ್ಟಕ್ಕೆ ಕ್ರಮೇಣ ಬದಲಾಗುವ ರೀತಿಯೇ ಕುತೂಹಲಕಾರಿ. ಆಯಾ ಭೂ ಮಟ್ಟ ಪ್ರದೇಶಕ್ಕೆ ವಿಶಿಷ್ಟವಾದ ವಿವಿಧ ಜಾತಿಯ ಹುಲ್ಲು, ಕಂದ ಮೂಲಗಳು, ಹೂಗಿಡಗಳು, ಬಳ್ಳಿ ಮರಗಳು, ಪರಾವಲಂಬಿ ಸಸ್ಯಗಳು ಅಂತೆಯೇ ಕೀಟಗಳು, ಪಕ್ಷಿಸಂಕುಲ, ಸರಿಸೃಪಗಳು, ಸಸ್ಯಹಾರಿ ಮಾಂಸಾಹಾರಿ ಮೃಗಗಳು, ಜಲಚರಗಳು –ನಿಸರ್ಗಾಧ್ಯಾಯಿಗೆ ಹಿಮಾಲಯ ಒಂದು ಪ್ರಯೋಗ ಶಾಲೆ. ಜೀವಂತ ಸಂಗ್ರಹಾಲಯ.

ಸಾಗರ ಮಟ್ಟದಿಂದ ಮೇಲೆ ಹೋದಂತೆ ಬದಲಾಗುವ ಹವಾಮಾನ ಮತ್ತು ಭೂಲಕ್ಷಣಗಳನ್ನು ಅನುಸರಿಸಿ ವಿಕಾಸಗೊಂಡ ವೈವಿಧ್ಯಮಯ ಜನಜೀವನ ಹಿಮಾಲಯದ ಉದ್ದಗಲಕ್ಕೂ ಕಾಣಬರುವುದು. ಹಿಮಾಲಯದ ದಕ್ಷಿಣ ಭಾಗದಲ್ಲಿ ೮೦೦೦ ಅಡಿಗಳಿಗೇ ಅನವರತ ಹಿಮದ ರೇಖೆ ಬಂದರೆ ಉತ್ತರ ಭಾಗದಲ್ಲಿ ೧೫೦೦೦ ಅಡಿಗಳೆತ್ತರದಲ್ಲಿ ಕೂಡ ಬೇಸಾಯವಿದ್ದು ಆಲೂಗಡ್ಡೆ, ಬಾರ್ಲಿ ಬೆಳೆಯುವ ಹಳ್ಳಿಗಳಿವೆ. ೧೭೦೦೦ ಅಡಿಗಳೆತ್ತರದಲ್ಲಿಯೂ ಜನವಸತಿಯಿರುವುದು ಅಚ್ಚರಿಯ ಸಂಗತಿ. ಹಿಮಾಲಯ ತಪ್ಪಲು ತೆರಾಯಿಯ ಜನರು, ಪರ್ವತೀಯ ಪ್ರದೇಶದ ಘಡವಾಲ್, ಭೋಟಿಯಾ, ನೇಪಾಳಿ ಜನರು ಎತ್ತರದ ಪ್ರಸ್ಥ ಭೂಮಿಯ ಕಾಶ್ಮೀರೀ, ಟಿಬೆಟ್ಟೀ ಜನರು ಇವರ ಜೀವನ ರೀತಿ, ಸಂಪ್ರದಾಯಗಳು, ಉತ್ಸವ ಹಬ್ಬಗಳು, ಉಡುಪು, ಭಾಷೆ, ಧರ್ಮ ಎಲ್ಲವೂ ಆಕರ್ಷಕ ಅಧ್ಯಯನಯೋಗ್ಯ. ಅಂತೂ ಭೂವಿಜ್ಞಾನಿ, ಜೀವಶಾಸ್ತ್ರಜ್ಞ, ಹವಾಮಾನಶಾಸ್ತ್ರಜ್ಞ, ಮಾನಾವಶಾಸ್ತ್ರಜ್ಞ, ಪರಿಸರವಿಜ್ಞಾನಿ, ಸಾಹಸಕ್ರೀಡಾಪಟು, ಪರ್ವತಾರೋಹಿ, ಚಿತ್ರಕಾರ, ಪಕ್ಷಿತಜ್ಞ, ಛಾಯಾಗ್ರಾಹಕ, ಅಧ್ಯಾತ್ಮಿ ಎಲ್ಲರನ್ನೂ ಅವರವರ ಮನೋವೃತ್ತಿಗಳ ಮೂಲಕ ಆಕರ್ಷಿಸಿ ಎಲ್ಲರ ಮೇಲೆ ವಿಶಿಷ್ಟ ಪರಿಣಾಮ ಬೀರಿ ಕಡೆಗೆ ಎಲ್ಲರನ್ನೂ ನಿಸರ್ಗ ಪ್ರೇಮಿಗಳನ್ನಾಗಿ ಪ್ರಕೃತಿಯ ಆರಾಧಕರನ್ನಾಗಿ ಮಾಡುವುದು ಹಿಮಾಲಯದ ವಿಶೇಷತೆ. ಹಿಮಾಲಯದ ಎತ್ತರ ಬಿತ್ತರ ಅದರ ಆಕಾಶ ತಿವಿಯುವ ಆಕಾರ ಎಲ್ಲರನ್ನೂ ಭವ್ಯವಾದೊಂದು ಭಾವಕ್ಕೆ ಕೊಂಡೊಯ್ದು ಅನಂತತೆಯ ಪರಿಚಯಮಾಡಿಸುವುದು.

ಪಶ್ಚಿಮೋತ್ತರದ ಅಫ್ಘಾನಿಸ್ಥಾನದಿಂದ ಹಿಡಿದು ಪೂರ್ವದ ಮಿಯಾನ್ಮಾರ್‌ವರಗೆ ಅರ್ಧ ಚಂದ್ರಾಕೃತಿಯಲ್ಲಿ ಸುಮಾರು ೨೫೦೦ ಕಿ.ಮೀ ಉದ್ದಕ್ಕೂ ಹಬ್ಬಿರುವ ಹಿಮಾಲಯ ಶ್ರೇಣಿಗಳ ಅಡ್ಡಗಲ ೩.೨೦ ರಿಂದ ೪೮೦ ಕಿ.ಮೀಗಳು. ಈ ಶ್ರೇಣಿಗಳು ಏಳು ರಾಷ್ಟ್ರಗಳನ್ನು – ಅಫ್ಘಾನಿಸ್ಥಾನ,

ಪಾಕೀಸ್ತಾನ, ಭಾರತ, ಚೀನಾ, ನೇಪಾಳ, ಭೂತಾನ್ ಮತ್ತು ಮಿಯಾನ್ಮಾರ್ ತಾಗಿ ಹಬ್ಬಿವೆ. ಹಿಮಾಲಯದ ದಕ್ಷಿಣ ಅಂಚಿಗೆ ಇರುವುದೇ ಶಿವಾಲಿಕ ಶ್ರೇಣಿ. ಹಿಮಾಲಯದ ಉದ್ದಕ್ಕೂ ಹಬ್ಬಿ ೨೫೦೦ ಅಡಿಗಳೆತ್ತರಕ್ಕೇರುವ ಈ ಶ್ರೇಣಿಯ ಬೆನ್ನಿಗಂಟಿದ ಹಾಗೆ ಪಶ್ಚಿಮೋತ್ತರಕ್ಕೆ ಹಬ್ಬಿರುವ ಉನ್ನತ ಪರ್ವತಗಳ ಶ್ರೇಣಿಯೇ ಲಘು ಹಿಮಾಲಯ (ಲೆಸ್ಸರ್ ಹಿಮಾಲಯಾಸ್). ಸುಮಾರು ೧೫೦೦೦ ಅಡಿಗಳೆತ್ತರದ ಪರ್ವತಗಳ ೩೦೦೦ ಅಡಿಗಳ ಆಳಕ್ಕೆ ಇಳಿಯುವ ಕಣಿವೆಗಳ ಈ ಶ್ರೇಣಿಯ ಮೂರು ಮುಖ್ಯ ಭಾಗಗಳು ನಾಗತಿಬ್ಬಾ, ಧವಳಧಾರ್ ಮತ್ತು ಪೀರಪಂಜಾಲ್.

ಪೂರ್ವ ದಕ್ಷಿಣ ದಿಕ್ಕಿಗೆ ನಂತರ ಪೂರ್ವೋತ್ತರವಾಗಿ, ಹಿಮಾಲಯದ ಬೆನ್ನೆಲುಬಿನಂತ ಬೆಳೆದಿರುವ ಮೂರನೇ ಶ್ರೇಣಿಯೇ ಬೃಹತ್ ಹಿಮಾಲಯ (ಗ್ರೇಟರ್ ಹಿಮಾಲಯಾಸ್). ಇದರ ಸರಾಸರಿ ಎತ್ತರ ಶಾಶ್ವತ ಹಿಮರೇಖೆಯನ್ನೂ ಮೀರಿದುದು. ಪ್ರಪಂಚದ ಹದಿನಾಲ್ಕು ಅತ್ಯುನ್ನತ ಶಿಖರಗಳಲ್ಲಿ ಒಂಭತ್ತು ಶಿಖರಗಳು ಈ ಶ್ರೇಣಿಯಲ್ಲೇ ಇವೆ.

ಬೃಹತ್ ಹಿಮಾಲಯದ ಉತ್ತರಕ್ಕೆ ಖಚಿತವಾದ ಲಾಕ್ಷಣಿಕ ಎಲ್ಲೆ ಇಲ್ಲದೆ ಪ್ರಸ್ಥಭೂಮಿಗಳು, ಬೆಟ್ಟಸಾಲಗಳು, ತಗ್ಗುಪ್ರದೇಶಗಳು ಒಟ್ಟಾರೆ ಟೆಥಿಸ್ ಹಿಮಾಲಯವೆಂದು ಕರೆಸಿಕೊಳ್ಳುವ ಭೂಭಾಗ ಟಿಬೆಟ್ಟಿನ ಮಹಾಪ್ರಸ್ಥಭೂಮಿಯಲ್ಲಿ ಕೊನೆಗೊಳ್ಳುವುದು. ಈ ಟೆಥಿಸ್ ಹಿಮಾಲಯ ಭಾಗದಲ್ಲಿ ಕಾಶ್ಮೀರಕ್ಕೆ ಸೇರಿದಂತೆ ಕಾರಕೊರಂ ಸಾಲು, ಲಡಾಕ್ ಸಾಲು, ಜಾಸ್ಕರ್ ಸಾಲುಗಳಿದ್ದು ಪೂರ್ವದ ಕಡೆಗೆ ಕೈಲಾಸ(ಗಾಂಗ್ಡೆಸ್) ಶ್ರೇಣಿ, ನ್ಯಂಚೆನ್ ಟಂಗ್ಲ ಶ್ರೇಣಿಗಳಿವೆ. ಈಶ್ರೇಣಿಗಳಲ್ಲಿ ಮತ್ತು ಹತ್ತಿರದ ಬೆಟ್ಟ ಸಾಲುಗಳಲ್ಲಿರುವ ಶಿಖರಗಳೇ ಕೈಲಾಸ, ಕಾಮೆಟ್, ಗುರ್ಲಾ ಮಾಂಧಾತ, ಜಾಂಗ್ಸಂಗ್, ಚೊಮೋಲ್ಹಾರಿ ಮುಂತಾದವು (ನಕ್ಷೆ ೧). ಹಿಮಾಲಯದ ಅಗಾಧತೆ, ಬೃಹನ್ನತೆ, ದುರ್ಗಮತೆ, ಪ್ರಕೃತಿಯ ನಿಗೂಢತೆಯ ಮುಂದೆ ಮಾನವ ಅತ್ಯಲ್ಪನಾಗಿ ಕಾಣುವುದು ಸಹಜ. ಆದರೆ ಇಂತಹ ಹಿಮಾಲಯದ ಉದ್ದಕ್ಕೂ ಅಡ್ಡಾಡುವಾಗ(ಟ್ರೆಕ್ಕಿಂಗ್), ಹಿಮಶಿಖರಗಳಮೇಲೆ ಹಾದುಹೋಗುವಾಗ(ಮೌಂಟನೀರಿಂಗ್),ಭೋರಿಡುವ ನದಿಗಳಲ್ಲಿ ಪ್ರವಹಿಸುವಾಗ(ರಿವರ್ ರಾಫ್ಟಿಂಗ್), ಹಿಮ ಪ್ರವಾಹಗಳ ಮೇಲೆ ಜಾರುವಾಗ(ಸ್ಕೀಯಿಂಗ್), ಪರ್ವತಾಗ್ರದಿಂದ ಹಕ್ಕಿಯಂತೆ ಹಾರಾಡುವಾಗ(ಹ್ಯಾಂಡ್ ಗ್ಲೈಡಿಂಗ್, ಪಾರಾ ಗ್ಲೈಡಿಂಗ್), ಅಲ್ಲಿಯ ಗುಹೆಗಳಲ್ಲಿ ತಿಂಗಳುಗಟ್ಟಲೆ ಏಕಾಂತಾವಾಸ ಮಾಡುವಾಗ– ಈ ತೆರನ ಎಲ್ಲ ಚಟುವಟಿಕೆಗಳಲ್ಲೂ ಭವ್ಯವಾದುದನ್ನು ಅನುಭವಿಸಿ ಆನಂದತುಂದಿಲನಾಗುವ ಮಾನವನ ಸಾಹಸೀ ಪ್ರವೃತ್ತಿ ಈ ಅಲ್ಪತೆಯನ್ನು ತೊಡೆದು ಹಾಕುತ್ತದೆ. ಸ್ವರ್ಗಾನಂದವನ್ನು ಭೂಮಿಯಲ್ಲೇ ಮಾನವಶರೀರದಲ್ಲೇ ಪಡೆಯಬಯಸುವ ಮತ್ತು ಪಡೆಯುವ ಶಕ್ತಿಯಿರುವುದು ಮಾನವನಲ್ಲಿ ಮಾತ್ರ. ಮಾನವರಲ್ಲಿ ತ್ರಿಶಂಕು ಕೌಶಿಕರೇ! ಈ ಧೀಶಕ್ತಿಯಿರುವುದರಿಂದಲೇ ಸೌಂದರ್ಯವನ್ನು ಸವಿಯುವ, ಅದರ ಉಪಾಸನೆಮಾಡುವ ಪ್ರಜ್ಞೆಯಿರುವುದೂ ಮಾನವನಲ್ಲಿ ಮಾತ್ರ. ನಿಸರ್ಗ ಸುಂದರ ಸ್ಥಳಗಳಲ್ಲಿ ಭೂಮಾನುಭವವಾದಾಗ, ಅನಂತತೆಯ ಅರಿವಾದಾಗ ಈ ಸ್ಥಳಗಳಲ್ಲಿ ವಿಶ್ವಚೈತನ್ಯವನ್ನು ಗುರುತಿಸಿ ಪವಿತ್ರಯಾತ್ರಾ ಸ್ಥಳವೆಂದು ನತಮಸ್ತಕನಾಗುವುದು ಮಾನವಸಹಜ ಪ್ರತಿಕ್ರಿಯೆ. ಇಂತಹ ಸ್ಥಳಗಳ ಭೌತಿಕ ಸತ್ಯಕ್ಕೆ ತನ್ನಲ್ಲಿರುವ ಸೌಂದರ್ಯ ಪ್ರಜ್ಞೆಯ ಕಲ್ಪನೆಯ ಭಾವಸತ್ಯವನ್ನು ತೊಡಿಸುವ ಮಾನವ ಸ್ಥಳ ಪುರಾಣ ಕಥೆಗಳನ್ನು ಕಟ್ಟುತ್ತಾನೆ. ಇವುಗಳ ಸುತ್ತ ಭಾವಕೋಶವನ್ನು ನಿರ್ಮಿಸಿ ಸಂಸ್ಕೃತಿ ಯನ್ನು ಹುಟ್ಟುಹಾಕುತ್ತಾನೆ. ಈ ಸಂಸ್ಕೃತಿಯಲ್ಲಿ

ತನ್ನತನವನ್ನು ಗುರುತಿಸಿಕೊಂಡು ಇದರ ಅವಿಭಾಜ್ಯ ಅಂಗವಾಗುತ್ತಾನೆ. ಇಂತಹ ಪ್ರಪ್ರಾಚೀನ, ಇತಿಹಾಸ ಪುರಾಣಗಳ ಹಿನ್ನೆಲೆಯುಳ್ಳ ಸ್ಥಳಗಳು ಹಿಮಾಲಯದಲ್ಲಿ ಅನೇಕ. ಕೇದಾರ, ಬದರಿ, ಗಂಗೋತ್ರಿ, ಯಮನೋತ್ರಿ, ಅಮರನಾಥ, ಮುಕ್ತಿನಾಥ, ವೈಷ್ಣೋದೇವಿ– ಪುಟಗಟ್ಟಲೆ ಪಟ್ಟಿಯಾಗುವ ಸ್ಥಳಗಳವೆಷ್ಟೋ! ಪವಿತ್ರಕ್ಷೇತ್ರಗಳನ್ನು ನೋಡಲೆಂದೇ ಹೊರಡುವ ಜನಸಾಮಾನ್ಯರ ಸಂಖ್ಯೆ ಅಗಣಿತ.

ಹಿಮಾಲಯದಲ್ಲಿನ ಪವಿತ್ರ ಯಾತ್ರಾಕ್ಷೇತ್ರಗಳಲ್ಲಿಯೇ ಶ್ರೇಷ್ಠತಮವೆನಿಸಿರುವ ಕೈಲಾಸಮಾನಸ ಪ್ರದೇಶದ ಪ್ರಾಕೃತಿಕ ಸೌಂದರ್ಯ ಜನಜನಿತ, ವಿಶ್ವವಿಖ್ಯಾತ. ಯಾವುದೇ ಪೌರಾಣಿಕ ಅಥವ ಸಾಂಸ್ಕೃತಿಕ ಕಾರಣವಿಲ್ಲದೆಯೇ ಕೇವಲ ನಿಸರ್ಗ ಪ್ರೇಮಿಗಳಾಗಿ ಇಲ್ಲಿಗೆ ಬಂದ ಪಾಶ್ಚಾತ್ಯ ಪ್ರವಾಸಿಗರೂ ಕೂಡ ಇಲ್ಲಿನ ಅಲೌಕಿಕತೆಗೆ ಮಾರುಹೋದವರೇ. (ಪರಿವಿಡಿ ೧) ಇಲ್ಲಿಗೆ ಬರಲು ಅನೇಕ ಅನಾನುಕೂಲಗಳು ವಿಪತ್ತಿನ ಹಾದಿ, ಅಹಿತಕರ ತಂಗುದಾಣ, ಅಸುಖಕರ ಪ್ರಯಾಣ, ಪ್ರತಿಕೂಲ ಹವಾಮಾನ, ಅನಿಶ್ಚಿತ ಅಶನ– ಆದರೂ ಜನರು ಇದರೆಡೆಗೆ ಪಯಣಿಸುವರು, ಹಿಂದೂ, ಜೈನ, ಬೌದ್ಧ, ಬೊಂಗ್ಪೊಯಿ ನಾಲ್ಕೂ ಧರ್ಮಗಳ ಅನುಯಾಯಿಗಳನ್ನು ಏಕರೀತಿ ತನ್ನತ್ತ ಸೆಳೆವುದೀ ಪವಿತ್ರ ಪ್ರದೇಶ. ಬ್ರಹ್ಮಪುತ್ರ, ಸಿಂಧು, ಶತದ್ರು ಮತ್ತು ಕರ್ನಾಲಿ ನಾಲ್ಕೂ ಪವಿತ್ರ ನದಿಗಳ ಉಗಮಸ್ಥಾನವಾಗಿ ಪೂಜನೀಯವಾದುದೀ ಅಲೌಕಿಕ ಕ್ಷೇತ್ರ. ಕಾಲ್ನಡಿಗೆಯಲ್ಲಿ ಹಿಮಾಲಯವನೇರಿ ಈ ಕ್ಷೇತ್ರವನ್ನು ದರ್ಶನ ಮಾಡಿದವರು ಇಲ್ಲಿ ಸಲ್ಲುವರು ಅಲ್ಲಿ ಸಲ್ಲುವರು ಎಲ್ಲೆಲ್ಲಿ ಬೇಕಾದರೂ ಸಲ್ಲಲು ಶಕ್ತರು ಎಂಬ ಅಭಿಪ್ರಾಯ ಸಾಧಾರವಾದದ್ದೇ. ಈ ಪ್ರವಾಸದ ಯಶಸ್ಸಿಗೆ ಅವಶ್ಯ ಬೇಕಾದ ಅರ್ಹತೆಯೆಂದರೆ ಸಂಕಲ್ಪ ಶ್ರದ್ಧೆ ಮತ್ತು ಸರ್ವದಾ ಸಕಾರಾತ್ಮಕ ಮನೋಭಾವ. ಪೃಥ್ವಿಯ ಮಾನದಂಡವಾದ ಹಿಮಾಲಯದ ಮಾರ್ಗವಾಗಿ ನಡೆಯ ತೊಡಗುವ ಯಾತ್ರಿಕನು ಭೂಮಿಯನ್ನಳೆಯುತ್ತ ಸಾಗಿದಂತೆ ಹಿಮಾಲಯವು ಅವನನ್ನು ಅಳೆಯತೊಡಗುವುದು. ಅಳೆದುದನ್ನು ಅವನಿಗೆ ಮನದಟ್ಟು ಮಾಡಿಸುತ್ತಾ ಹೋಗುವುದು. ಕೈಲಾಸ ಮಾನಸ ಪ್ರದೇಶ ತಲುಪುವ ವೇಳೆಗೆ ಯಾತ್ರಿಕನ ದೈಹಿಕ ಮಾನಸಿಕ ಬೌದ್ಧಿಕ ಆಧ್ಯಾತ್ಮಿಕ ಬೆಳವಣಿಗೆಯನ್ನು ಅಳೆಯುವ ಅಳತೆಗೋಲಾಗುವುದು. ನಾವು ಚಾರಣಿಗರಾಗಿ ಹಿಮಾಲಯದ ಮಡಿಲಲ್ಲಿ ಅಲೆದಾಡಿದಾಗ ಅದರ ಪರಿಸರದಲ್ಲಿ ಹೂವಾಗಿ ಅರಳಿದಾಗ, ಅದರ ವಿಪತ್ತು ವೈಭವ ಭವ್ಯತೆಗೆ ನಮ್ಮನ್ನು ಸಮರ್ಪಿಸಿಕೊಂಡಾಗ, ಹೃದಯವನ್ನು ಸರಳಸುಂದರ ಮಾಡಿಕೊಂಡಾಗ ಈ ಮಾನದಂಡ ತನ್ನ ತೀರ್ಮಾನ ಕೊಡುವುದು.

ವೇದಕಾಲದಿಂದಲೂ ಭಾರತೀಯರಿಗೆ ಪರಿಚಿತವಾದ ಕೈಲಾಸ ಮಾನಸ ಪ್ರದೇಶಕ್ಕೆ, ಈ ಶತಮಾನದ ಐದನೇ ದಶಕದವರೆಗೂ, ಯಾರು ಬೇಕಾದರೂ ಯಾವಾಗ ಬೇಕಾದರೂ ಹೋಗಬಹುದಿತ್ತು. ಚೀನೀ ಆಕ್ರಮಣದ ನಂತರ ಈ ಪ್ರದೇಶ ನಾಸ್ತಿಕವಾದಿ ಚೀನಾ ಸರಕಾರದ ಆಡಳಿತದಲ್ಲುಳಿದು, ಇಲ್ಲಿಗೆ ಹೋಗಬಯಸುವ ಭಾರತೀಯರು ವಿದೇಶ ಪ್ರವಾಸದ ಎಲ್ಲ ನಿಯಮಗಳನ್ನು ಅನುಸರಿಸಬೇಕಾದ ಪರಿಸ್ಥಿತಿ ಈಗ! ಭಾರತೀಯ ಯಾತ್ರಿಕರಿಗೆ ಅನುಕೂಲವಾಗಲೆಂದು, ಉತ್ತರ ಪ್ರದೇಶದ ಕುಮಾವ್ ಜಿಲ್ಲೆಯ ಸ್ವರ್ಗಸಮ ಹಿಮಾಲಯದಲ್ಲಿ ಹದಿನೈದು ದಿನಗಳ ಚಾರಣ; ಭುವನದ ಛಾವಣಿಯೆನಿಸಿದ ಟಿಬೇಟಿನಲ್ಲಿ ಐದು ದಿನಗಳ ಪ್ರವಾಸ; ಕೈಲಾಸ, ಮಾನಸ ಸರೋವರದ ಎಂಟು ದಿನಗಳ ಪ್ರದಕ್ಷಿಣಾ ಯಾತ್ರೆ; ಎಲ್ಲವನ್ನೂ ಒಂದು ತಿಂಗಳ ಕಾಲಾವಧಿಯಲ್ಲಿ ಸಾಧ್ಯವಾದಷ್ಟು ಸುರಕ್ಷಿತ ರೀತಿಯಲ್ಲಿ, ಆದಷ್ಟು ಕಡಿಮೆ ಖರ್ಚಿನಲ್ಲಿ ಸಂಯೋಜಿಸುವ ಕಾರ್ಯವನ್ನು ಕುಮಾವ್ ಮಂಡಲ

ವಿಕಾಸ ನಿಗಮದ ಸಹಕಾರದಲ್ಲಿ ಭಾರತದ ವಿದೇಶಾಂಗ ವ್ಯವಹಾರ ಸಚಿವಾಲಯವು ಪ್ರತಿವರ್ಷವೂ ಕೈಗೊಳ್ಳುತ್ತದೆ. ಜೂನ್ ತಿಂಗಳಾದಿಯಾಗಿ ನಾಲ್ಕು ತಿಂಗಳ ಅವಧಿಯಲ್ಲಿ ಅನೇಕ ಯಾತ್ರಿಕರಿಗೆ ಅಧಿಕೃತ ಪ್ರವಾಸ ಸೌಲಭ್ಯ ಒದಗಿಸುತ್ತದೆ(ಪರಿವಿಡಿ ೨) ಈ ಸೌಲಭ್ಯವನ್ನು ಉಪಯೋಗಿಸಿಕೊಳ್ಳುವ ಅವಕಾಶ ನನಗೊದಗಿದ್ದು ಬಹು ದಿನಗಳ ಕನಸು ನನಸಾಗಿತ್ತು.

ಕಾಲೇಜು ದಿನಗಳಲ್ಲಿ ಬಾಣನ ಕಾದಂಬರಿಯ ಅಚ್ಛೋದ ಸರೋವರದ ವರ್ಣನೆಯನ್ನು ಓದಿದಾಗಲೆಲ್ಲಾ ಇದು ಕೇವಲ ಬಾಣನ ಕಲ್ಪನೆಯಾಗಿರದೆ ವಾಸ್ತವವಾಗಿರುವುದಾದರೆ ಹೋಗಿ ನೋಡುವೆನೆಂಬ ಹರೆಯದ ಹುರುಪಿನ ಹಗಲುಗನಸು ಕಂಡಿದ್ದೆ. ಈ ಬಾಣನ ಸರೋವರದೊಂದಿಗೆ ಕಾಳಿದಾಸನು ಕಂಡ 'ಪ್ರತಿದಿನವೂ ರಾಶಿಗೊಳ್ಳುತ್ತಲಿರುವ ತ್ರ್ಯಂಬಕನ ಅಟ್ಟಹಾಸದಂತೆ' ಇರುವ ಕೆಲಾಸ ಪರ್ವತವು ಆಗಾಗ ಅರಿವಿನಂಚಿನಲ್ಲಿ ಮಿಂಚಿ ಮಾಯವಾಗುತ್ತಿತ್ತು. ನನ್ನ ಮಟ್ಟಿಗೆ ಕೈಲಾಸ ಪರ್ವತ ಮತ್ತು ಮಾನಸ ಸರೋವರ ಗಗನಕುಸುಮವಾಗಿಯೇ ಇದ್ದವು.

ಎಂಟು ವರ್ಷಗಳ ಹಿಂದೆ ಮನಾಲಿಗೆ ಹೋದಾಗ ಅಲ್ಲಿ ಕೈಲಾಸ ಯಾತ್ರಿಯೊಬ್ಬರ ಭೇಟಿಯಾಯಿತು. ಅವರು ಕೊಟ್ಟ ಮಾಹಿತಿ ವರ್ಣನೆಗಳ ಆಧಾರದ ಮೇಲೆ ಕೈಲಾಸ ಮಾನಸ ದರ್ಶನದ ಕನಸು ಕಟ್ಟಿದೆ. ೧೯೯೬ ಮಾರ್ಚ್ ತಿಂಗಳಲ್ಲಿ ಬಂದ ಭಾರತದ ಸರಕಾರದ ಆಹ್ವಾನದಂತೆ ಈ ಪ್ರವಾಸಕ್ಕೆ ಅರ್ಜಿ ಸಲ್ಲಿಸಿ ಮೊದಲ ಬಾರಿಗೇ ಆಯ್ಕೆಗೊಂಡೆ. ಪ್ರವಾಸಕ್ಕೆ ಮುಂಗಡ ಹಣ ಕಟ್ಟುವ ಮೂಲಕ ಕಟ್ಟಿದ್ದ ಕನಸು ನನಸಾಗಿಸುವ ಮೊದಲ ಖಚಿತ ಹೆಜ್ಜೆಯಿಟ್ಟೆ. ನನಗಿಂತಲೂ ಹೆಚ್ಚು ಉತ್ಸುಕರಾಗಿ, ಸ್ವಗೃಹದ ನಿವೇಶನಕ್ಕೆಂದು ಕೂಡಿಸಿಟ್ಟಿದ್ದ ಹಣ ನಲವತ್ತು ಸಾವಿರ ರೂಪಾಯಿಗಳನ್ನು ತೆಗೆದುಕೊಟ್ಟು ಎಲ್ಲ ರೀತಿಯ ಸಹಕಾರ ಪ್ರೋತ್ಸಾಹ ನೀಡಿದ ನನ್ನ ಪತಿ ದೆಹಲಿಗೆ ಟಿಕೇಟು ತಂದಾಗ ಅತೀವ ಆನಂದದೊಂದಿಗೆ ಒಬ್ಬಳೇ ಹೊರಡಬೇಕಾಗಿ ಬಂದ ಉದ್ವಿಗ್ನತೆಯೂ ಇತ್ತು. ನನ್ನ ಹದಿಹರಯದ ಮಕ್ಕಳಿಗೆ ಮತ್ತು ನನ್ನ ಪತಿಗೆ ಈ ಯಾತ್ರೆಯು ನಂಬಲಸಾಧ್ಯವಾದ ಸಾಹಸಕಾರ್ಯವಾಗಿತ್ತು. ' ಅಮ್ಮ ಮುನ್ನೂರು ಕಿ.ಮೀ. ಟ್ರೆಕ್ಕಿಂಗ್ ಮಾಡುವುದು ಮೈಸೂರಿಗೆ ಪ್ರವಾಹ ಬರುವುದು ಒಂದೇ' – ಮಗಳ ಹೇಳಿಕೆ. 'ಅಮ್ಮ ಟಿಬೆಟ್ ಪ್ರವಾಸ ಮಾಡುವರೇ? ಅಲ್ಲೆಲ್ಲೂ ಕಟ್ಟಾ ವೆಜ್ಜಿ (ಶಾಖಾಹಾರಿ ಊಟ) ಸಿಗದೆ ಉಪವಾಸ ಬಿದ್ದು ಐದೇ ದಿನಕ್ಕೆ ವಾಪಸ್ಸು' ಎನ್ನುವುದು ಮಗನ ತೀರ್ಮಾನ. 'ಇದು ಯಾತ್ರೆಯಂತು ಅಲ್ಲ. ದೇವರ ಪೂಜೆಯೆಂದರೆ ಮೊಗದಿರುವಿ ಜಾಗ ಖಾಲಿ ಮಾಡುವವಳು ದೇವರ ದರ್ಶನಕ್ಕೆಂದು ಒಂದು ತಿಂಗಳು ಒಬ್ಬಳೇ ಅಷ್ಟು ದೂರ ಪ್ರಯಾಣ ಮಾಡಿ ಕಷ್ಟ ಪಡುವಾಕೆ ನೀನಲ್ಲ.' ಎಂಬ ಅಭಿಪ್ರಾಯದವರು ನನ್ನ ಪತಿ.

ಎಲ್ಲರೂ ಪರೋಕ್ಷವಾಗಿ ನನ್ನ ಕುಂದುಗಳನ್ನು ತೋರಿಸಿದರೂ ಮನೆವಾಳ್ತೆಯ ಹೊಣೆ ಹೊತ್ತು ನನಗೆ ಒಂದು ತಿಂಗಳ ರಜೆ ಕೊಟ್ಟು ಪ್ರಯಾಣದ ಸಿದ್ಧತೆಯಲ್ಲಿ ಸಹಕರಿಸಿದರು. ಬೇಕಾದ ಕಾಗದ ಪತ್ರಗಳು, ವಿಶೇಷ ಉಡುಗೆ ತೊಡುಗೆಗಳು, ಔಷಧಗಳು, ಪ್ರಯಾಣದ ತಿನಿಸುಗಳು, ಕ್ಯಾಮರಾ, ಟಿಕೇಟು ಇತ್ಯಾದಿಗಳನ್ನು ಹೊಂದಿಸಿ ಕೊಟ್ಟರು. ಶಿವನ ಅಟ್ಟಹಾಸವು ರಾಶಿಗೊಂಡಿರುವ ಕೈಲಾಸವನ್ನು ಅದರ ಬಳಿಯೇ ತಿಳಿಗನ್ನಡಿಯಾಗಿ ನಿಂತ ಮಾನಸಸರೋವರವನ್ನು ನೋಡಲೇಬೇಕೆಂದು ಹಠ ಹಿಡಿದು, ಹುಚ್ಚು ಧೈರ್ಯದಲ್ಲಿ ಒಬ್ಬಂಟಿಯಾಗಿಯೇ ಹೊರಟವಳನ್ನು ಸಂತೋಷದಿಂದ ಯಶಸ್ವೀ ಸುಖ ಪ್ರಯಾಣ ಕೋರಿ ಬೀಳ್ಕೊಟ್ಟರು.

ದೆಹಲಿಯಲ್ಲಿದ್ದ ಮೊದಲ ದಿನ ವಿದೇಶಾಂಗ ವ್ಯವಹಾರ ಮಂತ್ರಾಲಯದಲ್ಲಿ, ಯಾತ್ರಿಗಳ ಐದನೇ ತಂಡದ ಸದಸ್ಯೆಯಾಗಿ ಪರಿಚಯಾತ್ಮಕ ಸಭೆಯಲ್ಲಿ ಭಾಗವಹಿಸಿದೆ. ನಮ್ಮ ತಂಡ ಕಿರುಭಾರತವೇ ಆಗಿತ್ತು. ಅನೇಕ ರಾಜ್ಯಗಳಿಂದ ಬಂದಿದ್ದ ಯಾತ್ರಿಗಳು ವಿವಿಧ ಹುದ್ದೆಯಲ್ಲಿ ವಿವಿಧ ವೃತ್ತಿಯಲ್ಲಿದ್ದವರು. ಇಪ್ಪತ್ತೇಳು ವರ್ಷದ ಯುವಕನಿಂದ ಹಿಡಿದು ಅರವತ್ತೂರು ವರ್ಷದ ಉತ್ಸಾಹಿಗಳೂ ಇದ್ದರು. ಮೂವತ್ತು ಜನರ ತಂಡದಲ್ಲಿ ನಾವು ಮಹಿಳೆಯರು ಎಂಟು ಮಂದಿ. ನಾಲ್ವರು ಪತಿಸಮೇತರಾದರೆ ಉಳಿದ ನಾಲ್ವರು ಒಬ್ಬಂಟಿಗರಾಗಿ ಹೊರಟವರು. ಸಂಯೋಜಕರು ಕೈಲಾಸ ಮಾನಸಸರೋವರ ಪ್ರದೇಶದ ಕಿರುಪರಿಚಯವನ್ನು ಮಾಡಿಕೊಟ್ಟು ಪ್ರವಾಸದ ಕ್ರಮ-ಸಿದ್ಧತೆಗಳ ಬಗ್ಗೆ ಹಲವು ಸಲಹೆ ನಿಯಮಗಳನ್ನು ತಿಳಿಸಿದರು. ವಿಚಿತ್ರವೆನಿಸಿದ ಆದರೆ ಅಗತ್ಯವಾದ ಮೊದಲ ಬೇಡಿಕೆ ಎಂದರೆ ಉಡುಪುಗಳನ್ನು ಪ್ರತ್ಯೇಕವಾಗಿ ಪ್ಲಾಸ್ಟಿಕ್ ಚೀಲಗಳಲ್ಲಿಟ್ಟು ಅವುಗಳನ್ನು ಬಾಗಿ ಮೂಟೆಯಾಗುವಂತಹ ಕಿಟ್‌ಬ್ಯಾಗ್‌ಗಳಲ್ಲಿ ಅಥವಾ ರಕ್‌ಸ್ಯಾಕ್‌ಗಳಲ್ಲಿ ಕಟ್ಟಿಡುವುದು. ನಂತರ ಈ ಮೂಟೆಯನ್ನು ಒಂದು ದೊಡ್ಡ ಪ್ಲಾಸ್ಟಿಕ್ ಗೋಣಿ ಚೀಲದಲ್ಲಿಟ್ಟು ಬಾಯಿಕಟ್ಟುವುದು. ಇದರಿಂದ ಮೂಟೆಗಳನ್ನು ಬೇಕಾದಂತೆ ಬಾಗಿಸಿ ಕುದುರೆ-ಕಚ್ಚರಗಳ ಮೇಲೆ ಹೇರುವುದು ಸುಲಭವಿತ್ತು. ಮುಂಗಾರು ಮಳೆಯಲ್ಲೂ ಥಂಡಿ ಅಥವಾ ನೀರು ಒಳಸೋರದಂತೆ ರಕ್ಷಣೆಯಿರುತ್ತಿತ್ತು.

ಅದೇ ದಿನ ಮಧ್ಯಾಹ್ನ ಭಾರತ-ಟಿಬೆಟ್ ಗಡಿ ರಕ್ಷಣಾ ದಳದ ಆಸ್ಪತ್ರೆಯಲ್ಲಿ ಹಿಮಾಲಯದ ಎತ್ತರದಲ್ಲಿನ ಪರಿಸ್ಥಿತಿಗನುಸಾರವಾಗಿ ವೈದ್ಯಕೀಯ ತಪಾಸಣೆ. ಉತ್ತರ ಕರ್ನಾಟಕದವರೊಬ್ಬರು ಮತ್ತು ಮಹಾರಾಷ್ಟ್ರದವರೊಬ್ಬರು ಈ ಪರೀಕ್ಷೆಯಲ್ಲಿ ನಾಪಾಸಾಗಿ ಹಿಂದಿರುಗಬೇಕಾಯಿತು. ಆನೇಕಲ್‌ನಿಂದ ಬಂದಿದ್ದ ನಿರ್ಮಲಾದೇವಿಯವರದೂ ರಕ್ತದೊತ್ತಡದ ಕಾರಣ ಸಂದೇಹಾಸ್ಪದವಾಗಿದ್ದುದು, ಗುಂಜಿ ಶಿಬಿರದವರೆಗೆ ಪ್ರಯತ್ನಿಸಲು ವೈದ್ಯರು ಅನುಮತಿಯಿತ್ತರು. ಗುಂಜಿಯಲ್ಲೂ ಇದೇ ತೊಂದರೆ ಕಂಡು ಬಂದರೆ ಹಿಂದಿರುಗಬೇಕೆಂಬ ನಿಬಂಧನೆಯನ್ನೂ ಹಾಕಿದ್ದರು. ಹಿರಿಯರ ಹಾರೈಕೆ ಬಲವಾಗಿದ್ದರೆ ಮಾತ್ರ ಕೈಲಾಸ-ಮಾನಸ ದರ್ಶನವೆನ್ನುವುದು ಖಚಿತವಾಯಿತು. ಮುಂದಿನೆರಡು ದಿನಗಳು ಚೀನಾದ ವೀಸಾ ವಿದೇಶೀ ವಿನಿಮಯ ಮತ್ತು ಅಗತ್ಯ ವಸ್ತುಗಳ ಖರೀದಿಯಲ್ಲಿ, ಪ್ರಯಾಣದ ಸಿದ್ಧತೆಯಲ್ಲಿ ಕಳೆದು ಹೋದವು.

ಜುಲೈ ೩ನೇ ತಾರೀಖು ಬುಧವಾರ ಬೆಳಗಿನ ನಾಲ್ಕು ಗಂಟೆಗೆಲ್ಲಾ ಕುಮಾವ್ ಮಂಡಲ ವಿಕಾಸ ನಿಗಮದ(ಕು.ಮಂ.ವಿ.ನಿ)ಮಿನಿ ಬಸ್ಸಿನ ಮೇಲೆ ಸಾಮಾನುಗಳನ್ನು ಏರಿಸಿ, ಇಪ್ಪತ್ಮೂರು ಮಂದಿ ಯಾತ್ರಿಗಳು ಬಸ್ಸಿನಲ್ಲಿ ಕುಳಿತರೆ ಉಳಿದ ಐವರು ಮಂದಿ ಬೇರೊಂದು ಕಾರಿನಲ್ಲಿ. ತಂಡದ ಸಂಖ್ಯೆ ಇಪ್ಪತ್ತೆಂಟಕ್ಕೆ ಇಳಿದಿತ್ತು. ಬೀಳ್ಕೊಡಲು ಬಂದಿದ್ದ ಕುಟುಂಬದವರು, ಬಂಧುಮಿತ್ರರು ಕಣ್ಣೊರಸಿಕೊಳ್ಳುತ್ತಲೇ ಶುಭಕೋರಿ ಕೈಕುಲುಕುತ್ತಿದ್ದಂತೆಯೇ ಜಯಕಾರದೊಂದಿಗೆ ಯಾತ್ರಾ ಪ್ರವಾಸ ಪ್ರಾರಂಭಿಸಿದೆವು.

ಗಜಿಯಾಬಾದ್, ಮೊರಾದಾಬಾದ್ ಮಾರ್ಗವಾಗಿ ಹೊರಟ ಬಸ್ಸು ಬೆಳಗಿನ ಎಂಟು ಗಂಟೆಗೆಲ್ಲಾ ಸುಡು ಬೇಸಿಗೆಯ ಬಿಸಿಲಿಗೆ ಕಾದ ಕಬ್ಬಿಣದ ಡಬ್ಬವಾಗಿತ್ತು. ಬಿಸಿಲಿನ ತಾಪಕ್ಕೆ ಕಾದ ಕೆಂಧೂಳಿನ ಗಂಗಾ ಬಯಲು ಸೀಮೆಯನ್ನು ದಾಟಿ ಹಿಮಾಲಯದೊಡಲಿನ ತಂಪನ್ನರಿಸಿ ಸಾಗಿದೆವು. ಶಿವಾಲಿಕ -ಹಿಮಾಲಯದ ದಕ್ಷಿಣದಂಚಿನ ಮೊದಲ ಗಿರಿಸಾಲನ್ನು ಬಳಿಸಾರಿದೆವು. ಬಯಲು

ಸೀಮೆಯ ಅಂಚಿನಲ್ಲಿರುವ ಹಲ್ದ್ವಾನಿ ದಾಟಿ ನೈನಿತಾಲ್ ಕಡೆಗೆ ಹೊರಟ ಬಸ್ಸು 'ಶಿವಾಲಿಕದ ಬೆಟ್ಟಗಳನ್ನೇರತೊಡಗಿತು. ಬಸ್ಸು ಬೆಟ್ಟಗಳನ್ನು ಬಳಸಿ ಬಂದಂತೆ ಚಿಕ್ಕ ದೊಡ್ಡ ಕೆರೆಗಳು– ತಾಲ್ ಗಳು ಕಾಣಬಂದು ಹಾಗೆಯೇ ಕಣ್ಮರೆಯಾಗುತ್ತಿದ್ದವು. ಹಚ್ಚ ಹಸರಿನ ಮಧ್ಯೆ ವರುಣ ದೇವನು ತನಗಾಗಿ ನಿರ್ಮಿಸಿದ ಭೋಗ ಮಂದಿರಗಳಂತಿದ್ದ ಈ ಕೆರೆಗಳೊಂದೊಂದಕ್ಕೂ ರೋಚಕ ಪುರಾಣದ, ಸ್ಥಳಪುರಾಣದ ಕಥೆಗಳುಂಟು. ಬಯಲು ಪ್ರದೇಶದ ಕೆರೆಯ ದೃಶ್ಯ ಒಂದು ಬಗೆಯದಾದರೆ ಬೆಟ್ಟಗಳ ನಡುವಿನ ಕೆರೆಯ ದೃಶ್ಯವೇ ಬೇರೊಂದು ಬಗೆಯದು. ಸೂರ್ಯನ ಪ್ರಕಾಶವು ಪ್ರತಿಫಲಿಸಿ ಗಾಜಿನಂತಾಗುವ ಜಲದರ್ಪಣವನ್ನು ಬೆಟ್ಟದೆತ್ತರದಿಂದ ವಿಹಂಗಮದಂತೆ ನೋಡುವ ಸೊಗಸೇ ಸೊಗಸು.

ನೈನಿತಾಲ್, ಸಾತ್‌ತಾಲ್, ಭೀಮತಾಲ್–ಅನೇಕ ತಾಲ್‌ಗಳನ್ನು ಬಸ್ಸಿನಲ್ಲಿ ಕೂತಂತೆಯೇ ನೋಡುತ್ತಾ ಭೊವಾಲಿಗೆ ಬಂದಾಗ ಮಧ್ಯಾಹ್ನ ಎರಡುಗಂಟೆ. ಅಲ್ಲಿ ಭೋಜನಾನಂತರ ವಿಶ್ರಮಿಸಿ ಮತ್ತೆ ಬಳಸಿನ ಏರುದಾರಿಯಲ್ಲಿ ಸಾಗಿದೆವು. ಬಸ್ಸಿನಲ್ಲಿ ಕುಳಿತ ನಮಗೆ, ತಿರುಗಿ ನಾವು ಹೊರಟ ಮೊದಲ ಬೆಟ್ಟಕ್ಕೆ ಬಂದೆವೇನೊ ಎನಿಸುವಂತೆ ಒಂದೇ ತೆರನಾಗಿ ಕಾಣುವ ಬೆಟ್ಟಗಳು, ಅವುಗಳ ನಡುವಿನ ಕಣಿವೆಗಳು, ಬೆಟ್ಟದ ಮಗ್ಗುಲಲ್ಲಿ ಕಂಡು ಬಂದು ನಂತರ ಕಣ್ಮರೆಯಾಗುತ್ತಿದ್ದ ಹಳ್ಳಿಗಳು, ಮಧ್ಯೆ ಮಧ್ಯೆ ತಲೆಯೆತ್ತುತ್ತಿದ್ದ ದೇಗುಲಗಳು, ಏರಿಳಿತದ ಸುತ್ತು ದಾರಿಯ ಅಸಂಖ್ಯಾತ ತಿರುವುಗಳು. ಅತ್ತ ಕಡೆಯಿಂದ ಬರುವ ವಾಹನಗಳು ಸುಳಿವೇ ಸಿಗದಂತಹ ತೀವ್ರ ತಿರುವುಗಳು. ಇಂತಹ ಒಂದು ತಿರುವಿನಲ್ಲಿ ಬಲಬದಿಯ ಗುಡ್ಡವನ್ನು ತಿವಿದು ನಿಂತಿತ್ತು ನಮ್ಮೊಡನೆ ಹೊರಟಿದ್ದ ಕಾರು. ಅಪಘಾತವಾಗಿತ್ತು.! ಇದರಲ್ಲಿದ್ದ ಇಬ್ಬರಿಗೆ ತರಚು ಗಾಯಗಳಾಗಿದ್ದರೆ ಒಬ್ಬರಿಗೆ ಬಲಗೈಯ ಮೊಣಕಟ್ಟಿನ ಭಾಗ ಪೂರ ಜಜ್ಜಿ ಹೋಗಿತ್ತು. ಹತ್ತಿರದಲ್ಲೇ ಇದ್ದ ಸರಕಾರಿ ಆಸ್ಪತ್ರೆಯಲ್ಲಿ ತುರ್ತು ಚಿಕಿತ್ಸೆ ದೊರೆತು ಅವರು ಅಲ್ಲೇ ವೈದ್ಯರ ಬಳಿಯಲ್ಲುಳಿದರು. ಯಾತ್ರಿಕರ ತಂಡ ತನ್ನ ದಾರಿ ಹಿಡಿಯಿತು. ಹಿಂದುಳಿದವರಿಗಾಗಿ ಪಯಣಿಗರೆಂತು ನಿಂತಾರು? ನಿಂತವರು ಪಯಣಿಗರು ಹೇಗಾದಾರು?

ನಿಸರ್ಗ ರಮಣೀಯ ಹಿಮಾಲಯ, ಅದರಲ್ಲಿನ ವೈವಿಧ್ಯಮಯ ಜನಜೀವನವನ್ನು ಕಂಡಾಗ 'ಸ್ವರ್ಗವೆನ್ನುವುದಿದ್ದರೆ ಅದು ಇಲ್ಲೇ, ಇಲ್ಲೇ! ಇಲ್ಲೇ!' ಎಂದುದ್ಗರಿಸಿದ ಕವಿವಾಣಿ ನೆನಪಾಗುವುದು. ಅದರೊಂದಿಗೇ ನಿಸರ್ಗದ ಮತ್ತೊಂದು ಮುಖ–ರೌದ್ರತೆಯ ಅನುಭವವೂ ಹಿಮಾಲಯದಲ್ಲಿ ಕಾಲಿಟ್ಟವರಿಗೆ ಆಗುವುದು ಅನಿವಾರ್ಯ. ಇದಕ್ಕೆ ಕಾರಣ ಇಲ್ಲಿನ ಪ್ರಕೃತಿ ವಿಕೋಪಗಳು, ವರ್ಷಾವಧಿಯ ಭಾರಿ ಹಿಮಪಾತ, ನದೀ ಪ್ರವಾಹಗಳ ಆಟಾಟೋಪ, ಜರಿದು ಕೆಳಗೆ ಬರುವ ಹಿಮ ಪ್ರವಾಹ, ಪರ್ವತಾಗ್ರದಿಂದ ಒಡೆದು ಉರುಳಿ ಬರುವ ಶಿಲಾಪಾತ, ಮಣ್ಣುಕುಸಿತ, ಆಗಾಗ ಸಂಭವಿಸುವ ಭೂಕಂಪ, ಅನಿರೀಕ್ಷಿತವಾಗಿ ಶೂನ್ಯಕ್ಕಿಂತ ಬಹಳ ಕೆಳಗಿಳಿಯುವ ಉಷ್ಣಾಂಶದಿಂದಾಗಿ ಅತಿ ಶೀತ ಹವೆ, ದಾರಿಗೆಡುವಂತೆ ಮಾಡುವ ಮಂಜಿನ ಮುಸುಕು–ಇವೆಲ್ಲ ಸಾಲದೆಂಬಂತೆ ಪ್ರಾಣಹಾನಿ ತರುವ ವಾಹನ ಅಪಘಾತಗಳು–ಇಡೀ ಬಸ್ಸೇ ಕಣಿವೆಗುರುಳುವ ಅಪಘಾತಗಳು. ದೇವ ಭೂಮಿಯೇ ರುದ್ರ ಭೂಮಿಯೂ ಆಗುವುದು. ಸ್ವರ್ಗವೇ ಮೃತ್ಯುಲೋಕವೂ ಆಗುವುದು. ಹಿಮಾಲಯವೇ ಯಮಾಲಯವಾಗುವುದು. ಈ ವಿಪತ್ತಿನಲ್ಲಿಯೇ ಒಂದು ಆಕರ್ಷಣೆಯಿರುವುದೂ ಅನುಭವವೇದ್ಯ. ಅಪಘಾತವಾಯಿತೆಂದು ಹಿಂದಿರುಗಿದವರಾರೂ ಇಲ್ಲ. ಹಿಮಾಲಯದ ಪ್ರಕೃತಿಯು ರುದ್ರರಮಣೀಯವಾಗಿ ಮಾನವನಲ್ಲಡಗಿರುವ ಸಾಹಸ ಪ್ರವೃತ್ತಿಯನ್ನು

ಪ್ರಚೋದಿಸುವುದು. ಅವನನ್ನು ಹಿಮಾಲಯದೆತ್ತರಕ್ಕೆ ಆಹ್ವಾನಿಸುವುದು.

ಅಲ್ಮೋರಾಗೆ ಹತ್ತಿರದಲ್ಲೇ ಇರುವ 'ಚಿತಾಯಿ' ದೇವಾಲಯದ ಎದುರಿಗೆ ನಿಂತ ಬಸ್ಸಿನಿಂದಳಿದವರೆಲ್ಲರ ಮನದಲ್ಲೂ ಒಂದೇ ಪ್ರಾರ್ಥನೆ. ಘಾಸಿಗೊಂಡವರು ಗುಣಮುಖರಾಗಿ ದೆಹಲಿಯಿಂದ ಹೊರಟವರೆಲ್ಲರೂ ಕೈಲಾಸ-ಮಾನಸ ಸರೋವರ ದರ್ಶನ ಮಾಡಲೆಂಬ ಪ್ರಾರ್ಥನೆ. ಚಿತಾಯಿ ದೇವಾಲಯದಲ್ಲಿ ಪೂಜೆಗೊಳ್ಳುವ ಗೊಲ್ಲು ದೇವತೆಗೆ ಹರಕೆ ಹೊತ್ತು ಅದು ನೆರವೇರಿದರೆ ಕಾಣಿಕೆಯಾಗಿ ಗಂಟೆಯೊಂದನ್ನು ಕಟ್ಟುವುದು ಇಲ್ಲಿಯ ರೂಢಿ. ಈ ದೇವರಲ್ಲಿ ನ್ಯಾಯಕ್ಕಾಗಿ ಮೊರೆಯಿಡುವವರೂ ಕೂಡ ತಮ್ಮ ದೂರು ದೇವರಿಗೆ ಕೇಳಲೆಂದು ಗಂಟೆಯನ್ನು ಕಟ್ಟುವರು. ಜನರ ಆಸೆ ಆಕಾಂಕ್ಷೆಗಳನ್ನು ಸಾರಿ ಹೇಳಲು ಒಂದು ಕಾರಣ, ತಮಗಾದ ಅನ್ಯಾಯವನ್ನು ಹೇಳಿ ನ್ಯಾಯ ಕೇಳಲು ತಮ್ಮೊಳಗಿನ ಅಶಾಂತಿ ಅಸಮಧಾನಗಳನ್ನು ಕೂಗಿ ಹೇಳಲು ಮತ್ತೊಂದು ಕಾರಣ-ಇವೆರಡೇ ಕಾರಣಗಳು ಸಾಕು ಇಡೀ ದೇವಾಲಯ ಗಂಟೆಗಳಿಂದ ತುಂಬಿ ಹೋಗಲು. ದೇವಾಲಯ ಮಾತ್ರವಲ್ಲದೆ, ಅದರ ಸುತ್ತಲಿನ ಪ್ರಾಕಾರದ ಗೋಡೆಗಳಲ್ಲಿ, ಹಾದಿಗೆ ಕಟ್ಟಿದ ಕಮಾನುಗಳಲ್ಲಿ ತೋರಣವಾಗಿ, ಧ್ವಜಸ್ತಂಭದ ಸುತ್ತಲೂ, ದೇವಾಲಯದಂಗಳದ ತುಂಬೆಲ್ಲ ಗಂಟೆಗಳು. ವಿವಧ ಲೋಹದ, ವಿವಿಧಾಕಾರದ, ವಿವಿಧಗಾತ್ರದ ಗಂಟೆಗಳು, ಸೇನಾ ತುಕುಡಿಗಳ ಹೆಸರು ಹೊತ್ತ ಗಂಟೆಗಳೂ ಇದ್ದವೆಂದಮೇಲೆ ಗೊಲ್ಲು ದೇವಿ ದಿಟವಾಗಿಯೂ ಜನತಯ ನಿಕಟವರ್ತಿನಿ ಗೊಲ್ಲು ದೇವಿಯ ಹೆಸರಿಗೆ ದೂರು ಪತ್ರಗಳು ಮನವಿಗಳು ಅಂಚೆಯ ಮೂಲಕವೂ ಸಾವಿರಾರು ಸಂಖ್ಯೆಯಲ್ಲಿ ಬರುವುದಂತೆ. ಈ ತಾಯಿಗೆ ಬಿಡುವೆಂಬುದೇ ಇರಲಾರದು.

ಸಾಗರ ಮಟ್ಟದಿಂದ ೫೪೦೦ ಅಡಿಗಳೆತ್ತರದಲ್ಲಿರುವ ಅಲ್ಮೋರಾ ನಗರ ಸಂಜೆ ಬಿಸಿಲಿನಲ್ಲಿ ಹಸಿರು ಶಾಲನ್ನು ಹೊದ್ದು ಕುಳಿತಿತ್ತು. ಬಸ್ಸಿನಲ್ಲಿ ಕುಳಿತು ಅದನ್ನು ಸುತ್ತಿ ಬರುತ್ತಾ ಮೇಲೆ ಮೇಲೆ ಏರಿ ಕು.ಮಂ.ವಿ.ನಿ.ಯ ಅಥಿತಿಗೃಹಕ್ಕೆ ಬಂದಿಳಿದೆವು. ಅಥಿತಿಗೃಹದ ಮುಂಭಾಗದಲ್ಲಿ ನಿಂತು ಕೆಳಗಿನ ಅಲ್ಮೋರ ನಗರವನ್ನು, ಸುತ್ತಲಿನ ಗಿರಿಪಂಕ್ತಿಯನ್ನು, ಅವುಗಳ ಹಿಂದೆ ಅಸ್ತಮಿಸುತ್ತಿದ್ದ ರವಿಯನ್ನು, ಅವನ ತಾಮ್ರ ಕಿರಣಗಳನ್ನು, ಆ ಸೊಬಗನ್ನು ನೋಡುತ್ತಲೇ ಮಂಜಿನ ಬಿಳಿ ತೆರೆ ಅಡ್ಡಬಂದು ನಮ್ಮನ್ನು ಬಂಗಲೆಯೊಳಗೆ ದಬ್ಬಿತು.

ನಾನೂರು ಕಿ.ಮೀ. ದೂರದ ತಿರುವುದಾರಿಯ ಪ್ರಯಾಣದ ದಣಿವು, ತಲೆಸುತ್ತಿನೊಂದಿಗೆ ಸುಭಾಷ್‌ಮೆಹ್ತಾ ಅವರ ಅಪಘಾತದ ಖಿನ್ನತೆ, ಜೊತೆಗೆ ಯಾವಾಗ ಎಲ್ಲಿ ಯಾರಿಗೆ ಏನಾಗುವುದೋ ಎಂಬ ಆತಂಕವೂ ಸೇರಿತ್ತು. ಆ ಸಂಜೆ ನಮಗಿದ್ದ ಭರವಸೆಯೆಂದರೆ ಬೆಳಗು ಮೂಡಿ, ರವಿಯೊಂದಿಗೇ ನಮ್ಮ ಮನಸ್ಸು ದೇಹ ಹೊಸ ದಿನವನ್ನು ಹೊಸತಾಗಿ ಉತ್ಸಾಹದಲ್ಲಿ ಸ್ವಾಗತಿಸುವುದೆಂಬ ಭರವಸೆ.

ಇಂದು ನೇಸರು ಮೂಡಿದ ಲವಲವಿಕೆಯಲ್ಲಿ ಹೊರಟವರನ್ನು ಬೀಳ್ಕೊಡಲು ಬಂದರು ಸುಭಾಷ್. ರಾತ್ರಿ ಪೂರಾ ನೋವನುಂಡು ಸೊರಗಿದ್ದ ಅವರ ಮುಖದಲ್ಲಿ ವೇದನೆಯ ಜೊತೆಗೆ ಕೈಲಾಸ ಯಾತ್ರೆ ಮಾಡಲಾಗದ ನಿರಾಶೆಯೂ ಸೇರಿತ್ತು. ನಮ್ಮೆಲ್ಲರಿಗೆ ಸುಖಪ್ರಯಾಣ ಕೋರಿದರು. ಮುಂದೆ ಆಗಬಹುದಾಗಿದ್ದ ವಿಪತ್ತು ತನ್ನೊಬ್ಬನಲ್ಲೆ ಮುಗಿದುಹೋಯಿತೆಂದು ಹೇಳಿ ನಮ್ಮಲ್ಲಿ ವಿಶ್ವಾಸ ಧೈರ್ಯ ತುಂಬುತ್ತ ಕೈಲಾಸ ಮಾನಸ ದರ್ಶನದ ವೇಳೆ ತಮ್ಮನ್ನು ನೆನೆಸಿಕೊಳ್ಳಲು ಬಿನ್ನವಿಸುತ್ತ

ಹಿಂದೆ ಸರಿದು ಕೈ ಬೀಸಿದರು.

ಸಹಯಾತ್ರಿಯೊಬ್ಬರನ್ನು ಹಿಂದೆ ಬಿಟ್ಟು ಯಾತ್ರಿಜನರ ತಂಡ ೧೮೦ ಕಿ.ಮೀ. ದೂರದ ಧಾರ್ಚುಲಾಗೆ ಹೊರಟಿತು. ಬೆಟ್ಟಗಾಡಿನ ಹೊರಳುದಾರಿಯಲ್ಲಿ ಹಸಿರು ಕಾನನವನ್ನು ಸೀಳುತ್ತ ನಿಧಾನವಾಗಿ ಬಸ್ಸು ಚಲಿಸುತ್ತಿತ್ತು. ಬೆಟ್ಟವೊಂದರ ತುದಿಗೇರಿದಂತೆ ಕೆಳಗಿನ ಕಣಿವೆಯನ್ನು ಮುಚ್ಚಿದ್ದ ವನಸಿರಿ ಕಣ್ಣಿಗೊಂದು ಹಬ್ಬವಾಗಿತ್ತು. ಈ ಹಸಿರನ್ನು ಸೀಳುತ್ತಾ ಬೇರೊಂದು ಬೆಟ್ಟವನ್ನೇರಿದರೆ ಅಲ್ಲಿ ಬೇರೆಯೇ ಚಿತ್ರವಾಗಿದ್ದ ವೃಕ್ಷ ಸಮೂಹ. ಪ್ರಕೃತಿದೇವಿಯ ವರ್ಣ ಭಂಡಾರದಲ್ಲಿ ಎಲೆಗಳ ಹಸುರು ಬಣ್ಣವೇ ಎನಿತು ವೈವಿಧ್ಯಮಯ! ಕೆಂದಳಿರಿನಿಂದ ಹಿಡಿದು ಉದುರಿ ಹೋಗುವ ಎಲೆಗಳ ಹಳದಿಹಸುರಿನವರೆಗೆ–ಎಲ್ಲ ಸಾಂದ್ರತೆಯ ಎಲ್ಲ ಛಾಯೆಯ ವಿವಿಧ ಮೇಲ್ಮೆಯ ಹಸಿರು. ಹಸಿರು ಬೆಳಕನ್ನೇ ಮುಕ್ಕಳಿಸುವ ಎಲೆಗಳು. ಪ್ರಾಣ ಶಕ್ತಿಯನ್ನೇ ದಿಕ್ಕುದಿಕ್ಕಿಗೆರೆಚುತ್ತಿದ್ದ ಜೀವಂತ ಹಸುರು. ಜೀವನದಾಯಿನಿ ಪ್ರಕೃತಿ ರಹಸ್ಯಮಯೀ ಚಿತ್ರಕಾರ್ತಿ. ಧರೆಯಲ್ಲಿ ಪ್ರಾಣಕೋಶಗಳು ಉದಿಸಿದ ಕ್ಷಣದಿಂದ ನಿರಂತರ ಪ್ರವಹಿಸಿರುವ ಪ್ರಾಣನದಿಯಲ್ಲಿ ಈಜಾಡಿದ ಮನಸ್ಸಿಗೆ ಕಲ್ಪಾಂತರಾವಧಿಯ ಭಾಸವಾಗಿತ್ತು ಈ ಕಣಿವೆಗಳಲ್ಲಿಳಿಯುವಾಗ.

ಬೆಟ್ಟಗಳ ಮೇಲ್ಮಗ್ಗಲುಗಳಲ್ಲಿ ಸರಾಸರಿ ೩೦ ಕಿ.ಮೀ. ವೇಗದಲ್ಲಿ ಸಾಗಿದ ಬಸ್ಸು ೧೮೦ ಕಿ.ಮೀ. ದೂರದ ಧಾರ್ಚುಲಾ ತಲುಪಲು ಏಳು ಗಂಟೆಗಳ ಕಾಲ ಹಿಡಿತಿತ್ತು. ಮಧ್ಯೆ ಊಟಕ್ಕೆಂದು ಒಂದು ಗಂಟೆಯ ವಿರಾಮವಿತ್ತು. ಧಾರ್ಚುಲಾ ಶಿಬಿರದಲ್ಲಿಳಿದಾಗ ಅಸಹನೀಯ ತಲೆನೋವಿನೊಂದಿಗೆ ಬಳಸು ಮಾರ್ಗದಿಂದುಂಟಾದ ವಾಕರಿಕೆ. ನಾಳೆಯಿಂದ ನಡಿಗೆಯ ಪ್ರವಾಸವಮ್ಮ ತಲೆಯಿಂದ ಹೋಯಿತು ಕಾಲಿಗೆ ಬಂತು. ಎಂದು ರೇಗಿಸಿದವರು ಆನೆಕಲ್ಲಿನ ನಿರ್ಮಲಾದೇವಿ. ನೇಪಾಳದ ಮುಕ್ತಿನಾಥ ದೇವಾಲಯಕ್ಕೆ ಚಾರಣ ಮಾಡಿದ್ದ ಅನುಭವಸ್ಥೆ. ಬಿಸಿಬಿಸಿಯಾದ ಹಾಲಿನ ಬಟ್ಟಲನ್ನು ಕೈಗಿರಿಸಿ ಇನ್ನರ್ಧಗಂಟೆಯಲ್ಲಿ ತಲೆನೋವು ಮಾಯವಾಗುವುದೆಂದು ಭರವಸೆಯಿತ್ತರು. ಅವರು ಹೇಳಿದಂತೆಯೇ ಅರ್ಧಗಂಟೆಯಲ್ಲಿ ನಾನು ಹೊಸಮನುಷ್ಯಳಾಗಿದ್ದೆ. ಸುತ್ತಲಿನ ನೋಟಕ್ಕೆ, ಪರಿಸರಕ್ಕೆ ಸ್ಪಂದಿಸುವಷ್ಟಾಗಿದ್ದೆ.

ಸುತ್ತಲೂ ಹಬ್ಬಿರುವ ಬೆಟ್ಟಗಳ ನಡುವೆ ತೊಟ್ಟಿಲಲ್ಲಿಟ್ಟಂತೆ ಕಾಣುವ ಧಾರ್ಚುಲಾ ಊರು ಸಮುದ್ರ ಮಟ್ಟದಿಂದ ಕೇವಲ ೨೯೭೦ ಅಡಿಗಳ ಎತ್ತರದಲ್ಲಿದೆ. ಇದು ಪೂರ್ವ ದಿಕ್ಕಿಗೆ ಬಸ್ ಅನುಕೂಲವಿರುವ ಕಡೆಯ ಪಟ್ಟಣ. ಉತ್ತರ ದಿಕ್ಕಿಗೆ ಚೀನಾದ ಸರಹದ್ದಿನಿಂದ ೭೦ ಕಿ.ಮೀ. ಒಳಗಿರುವ ಧಾರ್ಚುಲಾ ಸೀಮಾಂತ ಕ್ಷೇತ್ರದೊಳಗೆ ಬರುವುದರಿಂದ ದಾರಿಯಲ್ಲೇ ಸಿಗುವ ಜೌಲ್‌ಜೀಬಿ ಪಟ್ಟಣದಿಂದ ಪೂರ್ವಪೂರ್ವೋತ್ತರಕ್ಕೆ ಹೋಗುವವರೆಲ್ಲರಿಗೂ 'ಇನ್ನರ್‌ಲೈನ್ ಪರ್ಮಿಟ್' ಬೇಕೆ ಬೇಕು. ಈ ಸೀಮಾಂತ ಕ್ಷೇತ್ರದಲ್ಲಿ ವಾಸವಾಗಿರುವ ಪ್ರತಿಯೊಬ್ಬರಿಗೂ ಗುರುತಿನ ಚೀಟಿ ಬೇಕು. ತಾಲ್ಲೂಕು ಮುಖ್ಯ ಕಛೇರಿ ಮತ್ತು ರಕ್ಷಣಾ ಪಡೆಯ ಕಛೇರಿಗಳಿರುವ ಧಾರ್ಚುಲಾ ರಕ್ಷಣಾದಳದವರು ಸಂಸಾರಗಳೊಂದಿಗೆ ಇರಬಹುದಾದ ಕಡೆಯ ಪಟ್ಟಣ.

ಕು.ಮಂ.ವಿ.ನಿ.ದ ಅತಿಥಿಗೃಹದಲ್ಲಿದ್ದುದು ಎರಡು ದೊಡ್ಡ ಹಜಾರಗಳು. ಎರಡು ಸ್ನಾನದ ಮನೆಗಳು, ನಾಲ್ಕೈದು ಶೌಚಗಳು, ಒಂದು ಅಡಿಗೆ ಕೋಣೆ. ಇಪ್ಪತ್ತೇಳು ಮಂದಿಯೂ ಬೆಳಗ್ಗೆ

ಸರತಿಯಲ್ಲಿ ಸ್ನಾನ ಮುಗಿಸಿ ಆರುವರೆ ಗಂಟೆಗೆ ತಯಾರಾಗಿ ಹೊರಡುವುದು ದುಸ್ಸಾಧ್ಯವೆನಿಸಿದುದರಿಂದ ರಾತ್ರಿಯೇ ನಾವು ಸ್ನಾನ ಮುಗಿಸುವುದೆಂದು ನಿರ್ಧರಿಸಿದೆವು. ಅಲ್ಲದೆ ಮುಂದಿನ ದಿನಗಳಲ್ಲಿಯೂ ದಿನದ ನಡಿಗೆಯ ನಂತರ ಬೆವರಿಳಿದ ಮೈ ತೊಳೆದು ಮಡಿ ಬಟ್ಟೆಗಳನ್ನು ತೊಡುವುದು ಹೆಚ್ಚು ಸಮಂಜಸವೆನಿಸಿತು. ದಿನವೂ ಮುಂದಿನ ಶಿಬಿರ ತಲುಪಿದ ನಂತರ ಸ್ನಾನ ಮಾಡುವ ಕ್ರಮಕ್ಕೆ ಇಂದು ಮೊದಲಿಟ್ಟೆವು. ಮೊದಲೆರೆಡು ದಿನ ಸ್ನಾನ ಇಲ್ಲದೆ ಹೊರಡಲು ಮುಜುಗರವೆನಿಸಿದರೂ ಪರಿಸ್ಥಿತಿಗೆ ಹೊಂದಿಕೊಳ್ಳುವುದು ಅನಿವಾರ್ಯವಾಗಿತ್ತು. ಈ ಬದಲಾವಣೆಯಿಂದಾದ ಮತ್ತೊಂದು ಅನುಕೂಲವೆಂದರೆ ಮಲಗುವ ಮುನ್ನ ನಮ್ಮ ಸಾಮಾನುಗಳನ್ನು ಮೂಟೆಕಟ್ಟಿ ಶಿಬಿರದ ಹೊರ ಕೋಣೆಯಲ್ಲಿಟ್ಟುಬಿಟ್ಟರೆ ನಮ್ಮ ಹೊಣೆ ಮುಗಿಯುತ್ತಿತ್ತು. ರಾತ್ರಿ ನಿರಾಳದ ನಿದ್ದೆಗೆ ಅವಕಾಶವಿರುತ್ತಿತ್ತು. ಬೆಳಗ್ಗೆ ನಮ್ಮ ಮುಖಮಾರ್ಜನವಾಗುವಷ್ಟರಲ್ಲಿ ಸಾಮಾನು ಮೂಟೆಗಳನ್ನು ಕಚ್ಚರಗಳ ಮೇಲೆ ಕಟ್ಟೆಯಾಗಿರುತ್ತಿತ್ತು. ಈ ವ್ಯವಸ್ಥೆಯಿಂದಾಗಿ ಬೆಳಗ್ಗೆ ಕಣ್ಣು ತೆರೆದ ಹತ್ತೇ ನಿಮಿಷದಲ್ಲಿ ಯಾತ್ರಿ ತಂಡ ತಾಯಾರಾಗಿ ಆರುಗಂಟೆಗೆಲ್ಲಾ ನಡಿಗೆಗಾರಂಭಿಸಿರುತ್ತಿತ್ತು.

ಧಾರ್ಚುಲಾಗೆ ಬಂದ ಅರ್ಧಗಂಟೆಯಲ್ಲೇ ಕೆಲವರು ತಮ್ಮ ಮನೆಗಳಿಗೆ ಫೋನ್ ಮಾಡಲು ಎಸ್.ಟಿ.ಡಿ.ಬೂತ್‌ಗಳನ್ನರಿಸಿಕೊಂಡು ಹೊರಟರು. ಧಾರ್ಚುಲಾ ಬಿಟ್ಟರೆ ಮುಂದೆಲ್ಲೂ ದೂರವಾಣಿಯ ಸೌಲಭ್ಯವಿರಲಿಲ್ಲ. ವಿದೇಶೀ ಹಣದ ದುಬಾರಿ ಬೆಲೆಯಲ್ಲಿ ಟಿಬೆಟ್‌ನ ಟಕಲಾಕೊಟ್‌ನಿಂದ ಮಾತ್ರ ಸಂಪರ್ಕ ಸೌಲಭ್ಯವಿತ್ತು. ಆದರೆ ಅದೂಕೂಡ ಲೈನ್ ಸಿಕ್ಕರೆ ಮಾತ್ರ. ಮಿಕ್ಕ ಮಂದಿಯೂ ಹೊರಡುವ ಸಿದ್ಧತೆಯಲ್ಲಿದ್ದರು. "ನೀನು ಇಲ್ಲೇ ಇರುವವಳೇ? ನೇಪಾಳಕ್ಕೆ ಬರುವದಿಲ್ಲವೇ?" ಎಂದು ಗೆಳತಿ ಮಂದಾಕಿನಿ ಕೇಳಿದಾಗ ಆಶ್ಚರ್ಯವಾಯಿತು. ಕಾರಣ, ನಮ್ಮನ್ನು ಧಾರ್ಚುಲಾಗೆ ಕರೆತಂದ ಬಸ್ಸು ಆಗಲೇ ಗೆರೇಜಿಗೆ ಹೋಗಿಯಾಗಿತ್ತು. "ನನ್ನ ಮುಖ ನೋಡುತ್ತಾ ಕುಳಿತೆಯಲ್ಲಾ ಎರಡು ಕಿ.ಮೀ. ನಡೆದರೆ ನೇಪಾಳದ ಸರಹದ್ದಿನೊಳಗಿನ ಮಾರುಕಟ್ಟೆಯಲ್ಲಿರುತ್ತೇವೆ. ಅಲ್ಲೇನಿದೆ ನೋಡೋಣ! ಬೇಗ ತಯಾರಾಗು." ಮಂದಾಕಿನಿಯ ಒತ್ತಾಯಕ್ಕೆ ಮಣಿದು ನಾನೂ ಹೊರಟೆ.

ಧಾರ್ಚುಲಾ ಊರನ್ನು ಕಾಳೀ ನದಿ ಇಭ್ಭಾಗ ಮಾಡಿ ಹರಿಯುತ್ತದೆ. ನದಿಯೇ ಭಾರತ ನೇಪಾಳ ಸರಹದ್ದಿನ ರೇಖೆಯಾಗಿರುವದರಿಂದ ಊರಿನ ಅರ್ಧ ಭಾಗ ಭಾರತ ಸೇರಿದರೆ ಉಳಿದರ್ಧ ನೇಪಾಳದ ಸರಹದ್ದಿನೊಳಗಿದೆ. ಕಾಳೀ ನದಿಗೆ ಕಟ್ಟಿರುವ ಸೇತುವೆ ಎರಡೂ ಭಾಗಗಳಿಗೆ ಕೊಂಡಿಯಂತಿದೆ. ಬೆಳಗ್ಗೆ ಏಳು ಗಂಟೆಗೆ ಸೇತುವೆಯ ಬಾಗಿಲನ್ನು ತೆರೆದು ಸಂಜೆ ಏಳು ಗಂಟೆಗೆ ಮುಚ್ಚಿ ಬಿಡುತ್ತಾರೆ. ಜನರ ಓಡಾಟ ದಿನಪೂರ ಅತ್ತಿಂದಿತ್ತ ಇತ್ತಿಂದತ್ತ ಇರುತ್ತದೆ-ಯಾವುದೇ ಅಡೆತಡೆಯಿಲ್ಲದೆ. ಎರಡೂ ಕಡೆಯ (ರೂಪಾಯಿ) ನಾಣ್ಯಗಳು ಚಲಾವಣೆಯಲ್ಲಿರುವುದರಿಂದ ವ್ಯಾಪಾರ ಬಿರುಸಿನಲ್ಲಿ ನಡೆದಿರುತ್ತದೆ. ವ್ಯಾಪಾರ ಸಂಬಂಧವಷ್ಟೇ ಅಲ್ಲದೆ ವಿವಾಹಸಂಬಂಧಗಳೂ ಉಂಟು. ಕಾರಣ, ಧಾರ್ಚುಲಾ, ಮತ್ತು ಊರಿನ ಸುತ್ತಲಿನ ಪ್ರದೇಶವೆಲ್ಲಾ ಭೋಟಿಯಾ ಜನಾಂಗ ಅನುಚಾನವಾಗಿ ನೆಲೆಸಿರುವ ಭೋಟ್ ಪ್ರದೇಶ.

ದೂರದ ರಾಜಧಾನಿಗಳ ರಾಷ್ಟ್ರೀಯ ರಾಜಕೀಯದಲ್ಲಿ ಕಾಳೀನದಿಯು ಸರಹದ್ದಿನ ರೇಖೆಯಾಗಿ ಭೋಟ್ ಪ್ರದೇಶವನ್ನು ವಿಭಾಗಿಸಿದೆಯಾದರೂ ಇಲ್ಲಿನ ಜನಸಾಮಾನ್ಯರಿಗೆ ಧಾರ್ಚುಲಾ ಸೇತುವೆ ಭೋಟಿಯಾ ಸಮಾಜವನ್ನು ಬೆಸೆದಿರುವ ಬೆಸುಗೆಯಾಗಿದೆ. ಇಂತಹ ಆಟಕ್ಕುಂಟು ಲೆಕ್ಕಕ್ಕಿಲ್ಲದ ಗಡಿ

ಬಾಗಿಲುಗಳು ಭಾರತದ ಸರಹದ್ದಿನ ಗುಂಟ ಅಡೆಷ್ಟಿವೆಯೋ! ಜನರು ತಮ್ಮ ದಿನನಿತ್ಯದ ಬದುಕಿಗೆ ಅನುಕೂಲವಾಗುವಂತೆ ತೆರೆದುಕೊಂಡ ಈ ಕವಾಟಗಳು ವಿಶ್ವಬಂಧುತ್ವದ ಒಣಿಗಳೂ ಕೂಡ.

ರಾತ್ರಿ ಹತ್ತುವರೆ–ಹನ್ನೊಂದು ಗಂಟೆಯವರೆಗೂ ಶಿಬಿರದಲ್ಲಿ ಗೌಜು ಗದ್ದಲ. ಜೇನುಗೂಡಿನಂತೆ ಚಟುವಟಿಕೆ ಸಂಭ್ರಮ. ಪೆಡೋಮೀಟರ್‌ಗಳು, ಕ್ಯಾಮರಾದ ವಿವಿಧ ಜೋಡಣೆಗಳು, ಫಿಲ್ಮ್‌ರೋಲುಗಳು, ರೈನ್‌ಕೋಟುಗಳು ದೊಡ್ಡ ಮೂಟೆಯಿಂದ ಕೈಚೀಲಕ್ಕೆ ಬಂದವು. ತಿಂಡಿ ತಿನಸುಗಳು ಓವರ್ ಕೋಟಿನ ಜೇಬಿಗೆ ಇಳಿದವು. ಸಂಜೆಯೇ ಕೊಂಡಿದ್ದ ಬೆತ್ತದ ಕೋಲುಗಳು ತಮ್ಮ ಮಾಲೀಕರ ಕೈಚೀಲದ ಪಕ್ಕಕ್ಕೆ ನಿಂತವು. ಅವುಗಳ ನೆತ್ತಿಯಲ್ಲಿ ವಿವಿಧ ಆಕಾರ ವರ್ಣಗಳ ಟೋಪಿಗಳು ರಾರಾಜಿಸಿದವು. ಅವುಗಳ ಬುಡದಲ್ಲಿ ಬೆಳಗ್ಗೆ ಧರಿಸಲಿದ್ದ ಭಾರದ ಬೂಟುಗಳು ಕುಳಿತವು. ಪ್ರಶ್ನೆ ಮರು ಪ್ರಶ್ನೆ ಸಲಹೆಗಳು ಅತ್ತಿತ್ತ ತೂರಿದ್ದವು. ಎರಡು ದಿನದ ಬಸ್ ಪ್ರಯಾಣ ಮುಗಿದು, ಬೆಳಗ್ಗೆ ಆರಂಭವಾಗಲಿದ್ದ ಪಾದಯಾತ್ರೆಗೆ ಇಷ್ಟೆಲ್ಲ ತಯಾರಿ. ಇವೆಲ್ಲ ನಮ್ಮ ಪೂರ್ವಸಿದ್ಧತೆಯಾಗಿದ್ದಂತೆಯೇ ನಮ್ಮೊಳಗಿನ ಉದ್ವೇಗದ ಸಂಕೇತವೂ ಆಗಿತ್ತು. ಈ ರಾತ್ರಿಯ ಸಡಗರದಲ್ಲಿ ಮುಂದಿನ ಮೂವತ್ತು ದಿನಗಳ ಯಾತ್ರೆಗೆ ತೊಡಗುವ ಸಿದ್ಧತೆ, ಹಿಮಾಲಯವನ್ನು ಕಾಲ್ನಡಿಗೆಯಲ್ಲಿ ದಾಟಿ ಚೀನೀ ಆಡಳಿತದ ಟಿಬೆಟಿಗೆ ಕಾಲಿಡುವ ಸಾಹಸ ಕಾರ್ಯಕ್ಕೆ ಬೇಕಾದ ಮನಸ್ಥೈರ್ಯವನ್ನು ಒಗ್ಗೂಡಿಸುವ ಪ್ರಯತ್ನ, ಯಾವದೇ ಕಾರಣಕ್ಕೆ ಆರಂಭಿಸಿದ ಕಾರ್ಯ ಅರ್ಧಕ್ಕೆ ನಿಲ್ಲದಿರಲೆಂಬ ಹಾರೈಕೆ, ಪ್ರವಾಸದ ಉದ್ದಕ್ಕೂ ನೋಡಹೊರಟ ಸ್ಥಳಗಳ ದರ್ಶನವಾಗಲೆಂಬ ಪ್ರಾರ್ಥನೆ ಮಿಗಿಲಾಗಿ ಹಿಮಾಲಯದ ಮಾನದಂಡದ – ನಮ್ಮೊಳಗಿನ ಮೇರುದಂಡದ – ಮಾಪನದಲ್ಲಿ ಪೂರ್ಣಾಂಕ ಸಿಗಲೆಂಬ ಹಂಬಲ, ಅದಕ್ಕಾಗಿ ಮನೋವಾಕ್ಕಾಯ ಪೂರ್ಣಪ್ರಯತ್ನ ಮಾಡುವೆನೆಂಬ ನಿರ್ಧಾರ, ವಿಶ್ವಾಸ – ಎಲ್ಲವೂ ಬೆರೆತುಕೊಂಡಿದ್ದವು. ಶ್ರುತಿ ಮಾಡಿಟ್ಟ ವೀಣೆ ಮಿಡಿದರೆ ನುಡಿಯುವಂತೆ ನನ್ನ ಮನಸ್ಸು ಹಿಮಾಲಯದ ಪ್ರಕೃತಿಯೊಂದಿಗೆ, ಅಲ್ಲಿನ ಜನರೊಂದಿಗೆ ಮಿಡಿಯಲು ಸಜ್ಜುಗೊಳ್ಳುತ್ತಿತ್ತು.



**ಟಕಲಾಕೋಟ್‌ನ ಮಾರುಕಟ್ಟೆಯ ಮುಂದೆ "ಬಿಲಿಯರ್ಡ್ಸ್"**

# ಹಿಮಗಿರಿಯ ಮಡಿಲಲ್ಲಿ

ವಿಶ್ವದೇಹಿಯನು ಸರ್ವವಾಙ್ಮಯನು
ಶಶಿತಾರಾಲಂಕೃತನು ಸಾತ್ವಿಕನು ಶಿವನೆಂದು
ನುತಿಸುತ್ತ ಚರಿಸಿಹರು ಪ್ರಮಥರು
ಸಿದ್ಧ ಚಾರಣರು

ರಾಜರಾ ಗಾಥೆಯನು ವೀರರ ಪ್ರಸಂಗವನು
ಜನಪದದ ಚರಿತೆಯನು ಅದರ ಇತಿಹಾಸವನು
ಹಾಡುತ್ತ ಅಲೆದಿಹರು ಗಾಯಕರು
ಕಥಿಕ ಚಾರಣರು

ತನ್ನ ಮೂಲವನರಿಸಿ ನಿಸರ್ಗದೊಡಲನು ಸೇರಿ
ಪ್ರಕೃತಿಯಲಿ ಒಂದಾಗಿ ಅಧ್ಯಾತ್ಮಚಿಂತನೆಗೆ
ತೊಡಗಿಹನು ನಡೆದಿಹನು ಅನುಭಾವಿ
ಯೋಗಿ ಚಾರಣನು.

ಸಗುಣೋಪಾಸಕರಾಗಿ, ದೇವರ ದರ್ಶನಾಕಾಂಕ್ಷಿಗಳಾಗಿ ಪವಿತ್ರ ಕ್ಷೇತ್ರಗಳಲ್ಲಿ ಭಕ್ತಿಪೂರ್ವಕ ಚರಿಸುವ ಯಾತ್ರಿಗಳು; ವಿಭಿನ್ನ ಸ್ಥಳಗಳನ್ನು ಅಲ್ಲಿನ ಪ್ರಕೃತಿ ವೈಶಿಷ್ಟ್ಯವನ್ನು ಅಲ್ಲಿನ ಜನರನ್ನು ಅವರ ಇತಿಹಾಸ ಸಂಸ್ಕೃತಿಯನ್ನು ಅರಿಯಲು ಚರಿಸುವ ಪ್ರವಾಸಿಗರು; ನಾಗರಿಕತೆಯ ಪ್ರಭಾವದಿಂದ ದೂರವಾದ ನಿಸರ್ಗಕ್ಕೆ ನಿಕಟವಾದ ಅತಿ ಜನ ಸಂಚಾರವಿಲ್ಲದ ದಾರಿಯಲ್ಲಿ ದಿನಗಟ್ಟಲೆ ನಡೆಯುತ್ತ ಅಲ್ಲಿ ಸಿಗುವ ಏಕಾಂತದಲ್ಲಿ ಅಂತರ್ಮುಖಿಗಳಾಗುವ ಚಾರಣಿಗರು– ಎಲ್ಲತರಹದ ಪ್ರಯಾಣಿಕರನ್ನು ಏಕರೀತಿಯಲ್ಲಿ ತನ್ನೊಡಲಿಗೆ ಆಹ್ವಾನಿಸುವುದು ಹಿಮಾಲಯ ಪರ್ವತಸ್ತೋಮ. ದೇವತಾತ್ಮ ಹಿಮಾಲಯನ ಹೃದಯದಂತಿರುವ ಕೈಲಾಸ ಮಾನಸಸರೋವರದ ಪರ್ಯಟನ ಒಂದು ಯಾತ್ರೆಯೋ, ಪ್ರವಾಸವೋ, ಚಾರಣವೋ ಅಥವಾ ಇವೆಲ್ಲವನ್ನೊಳಗೊಂಡು ಇವನ್ನು ಮೀರಿದ ಭೂಮಾನುಭೂತಿಯೋ ಎನ್ನುವುದನ್ನು ಅಲ್ಲಿಗೆ ಹೋದ ಪ್ರತಿಯೊಬ್ಬನ ಅನುಭವ ಮಾತ್ರ ನಿರ್ಧರಿಸುವುದು. ಅವರವರ ಭಾವಕ್ಕೆ, ಅವರವರ ದರ್ಶನಕ್ಕೆ ತಕ್ಕಂತೆ ಈ ಅಲೌಕಿಕ ತಾಣಕ್ಕೆ ಸ್ಪಂದಿಸುವರೆಲ್ಲ ಪ್ರಯಾಣಿಕರು. ಪ್ರಾಚೀನ ಋಷಿಗಳು ಮೊದಲ್ಗೊಂಡು ಇಂದಿನ ಪರ್ಯಟಕರವರೆಗೆ ಯಾರೇ ಆಗಲಿ, ಕೈಲಾಸ ಶಿಖರಕ್ಕೆದುರಾಗಿ ಅಥವಾ ಮಾನಸಸರೋವರದ ದಂಡೆಯಲ್ಲಿ ನಿಂತವರು–ಕಡು ನಾಸ್ತಿಕನೂ– ಕೂಡ ಹೃದಯಾಂತರಾಳದಿಂದ ಉದ್ಗಾರವೆತ್ತಿ ಮಂಡಿಯೂರಿ ತಲೆಬಾಗುವರು. ಯಾವುದೇ ಧರ್ಮದ, ಯಾವದೇ ಭಾಷೆಯ, ಯಾವುದೇ ಜೀವನಧ್ಯೇಯದ ವ್ಯಕ್ತಿ ಇಲ್ಲಿಗೆ ಬಂದಾಕ್ಷಣ ಅಲೌಕಿಕವಾದ ಒಂದು ಶಕ್ತಿವಲಯಕ್ಕೆ ಸೆಳೆಯಲ್ಪಟ್ಟು ಅದರಲ್ಲಿ ಲೀನವಾಗುವನು. ಈ ವಲಯವು ಇಲ್ಲಿ ತಪಗೈದ ಸಹಸ್ರಾರು ತಪಸ್ವಿಗಳ ಆಧ್ಯಾತ್ಮಿಕ ಚಿಂತನಾ ತರಂಗಗಳಿಂದ ಬಲಗೊಂಡಿರುವುದರ ಸತ್ಯತೆ ನಮ್ಮ

ಅನುಭವಕ್ಕೇ ಬರುತ್ತದೆ. ಮದ್ಧತತ್ವ ಎಂಬ ಗ್ರಂಥದಲ್ಲಿ ಹೇಳಿರುವಂತ* ಅದ್ಭುತ ಪ್ರಭಾವವುಳ್ಳ ನೆಲ, ಜಲ, ತೇಜಸ್ಸು (ಅಗ್ನಿ) ಮತ್ತು ಋಷಿ ಮುನಿಗಳ ವಾಸದಿಂದ ತೀರ್ಥ ಸ್ಥಾನಗಳು ಪವಿತ್ರತೆಯನ್ನು ಹೊಂದುವುವು. ಇಂತಹ ಪವಿತ್ರ ಸ್ಥಾನಗಳು ಹಿಮಾಲಯದಲ್ಲೇ ಬಹಳಿಷ್ಟಿವೆ.ಇವುಗಳಲ್ಲಿ ಕೈಲಾಸ-ಮಾನಸಸರೋವರಕ್ಕೇ ಅಗ್ರಸ್ಥಾನ.

ಕೈಲಾಸ-ಮಾನಸಸರೋವರಕ್ಕೆ ಹೋಗುವ ಮಾರ್ಗವು ಎಷ್ಟೇ ದುರ್ಗಮವಾಗಿದ್ದರೂ, ಅಪಾಯ ಎಡರು ತೊಡರುಗಳಿಂದ ಕೂಡಿದ್ದರೂ ಎದೆಗುಂದದೆ, ಇಲ್ಲಿನ ಅಲೌಕಿಕ ಶಕ್ತಿವಲಯದ ಅನುಭೂತಿಗಾಗಿ ಜನರು ಇಲ್ಲಿಗೆ ನಡೆದು ಬರುವರು. ಕೈಲಾಸ-ಮಾನಸಸರೋವರದಂತೆಯೇ ಅಲ್ಲಿಗೆ ಹೋಗುವ ಮಾರ್ಗವೂ ಸೌಂದರ್ಯದ ತವರು. ನಿಸರ್ಗ ಸುಂದರ ಕುಮಾವ್ ಜಿಲ್ಲೆಯ ಮೂಲಕ ಹೋಗುವ ಮಾರ್ಗ ರುದ್ರ ರಮಣೀಯ ಪರ್ವತಗಳ, ಭವ್ಯ ಹಿಮ ಶಿಖರಗಳ ಸಮೀಪದಲ್ಲಿ ಸಾಗುವುದು(ನಕ್ಷೆ ೨). ಅನೇಕ ಪ್ರಾಚೀನ ದೇವಸ್ಥಾನಗಳನ್ನು, ನದೀ ಸಂಗಮ ಸ್ಥಳಗಳನ್ನು ಹಾದು ಹೋಗುವುದು. ಧುಮ್ಮಿಕ್ಕುವ ಜಲಪಾತಗಳು ರಭಸದಿಂದ ಕೆಳಗಿಳಿದು ಬಂದು ಸೇರುವ ಕಾಳೀ ನದಿಯ ದಂಡೆಯಲ್ಲೇ ಸಾಗುವದಾರಿ ಕಷ್ಟದ್ದೇ ಆದರೂ ಚೇತನದಾಯಿ. ನನಗೆ ಕೈಲಾಸ ಮಾನಸ ಪ್ರದೇಶದ ಪ್ರವಾಸ ಕೊಟ್ಟಿದ್ದು ನಿರೀಕ್ಷಿತ ಆನಂದವಾದರ ಕುಮಾವ್ ಪ್ರದೇಶದಲ್ಲಿನ ಪ್ರವಾಸ ಮತ್ತು ಚಾರಣ ಅನಿರೀಕ್ಷಿತ ಆನಂದ ಪ್ರಕೃತಿಯು ಕೊಟ್ಟ ಪ್ರೀತಿಯ ಕೊಡುಗೆ-ಅಮೃತಪಾನ ಮಾಡಲಿರುವವನಿಗೆ ಕಲ್ಪವೃಕ್ಷದ ನೆರಳೂ ಸಿಕ್ಕಂತೆ.

ಇಂದು, ಐದನೇ ತಾರೀಖು, ಬಹುದಿನಗಳಿಂದ ಎದರು ನೋಡುತ್ತಿದ್ದ ಈ ಬೆಳಗು ವಿಶೇಷದ ಬೆಳಗು. ಅಸಾಧ್ಯವೆನಿಸಿದುದನ್ನು ಸಾಧಿಸ ಹೊರಟ ಮೊದಲ ಬೆಳಗು. ಚಾರಣಕ್ಕೆ ಸನ್ನದ್ಧಳಾಗಿ ಧಾರ್ಚುಲಾ ಶಿಬಿರದಿಂದ ಹೊರಬಂದ ನನ್ನ ಮನದಲ್ಲಿ ಏನೆಲ್ಲ ಭಾವನೆಗಳ ತಾಕಲಾಟ! ಮೈಲಿಗಟ್ಟಲೆ ನಡೆಯುವ ಬಗೆಗೆ ಸಂದೇಹ, ಕುದುರೆಯನ್ನೇರಬೇಕಾಗಬಹುದೆಂಬ ಅಂಜಿಕೆ, ಬಿದ್ದು ಎದ್ದು ಎಡವಟ್ಟಾಗಿ ದೆಹಲಿಗೆ ವಾಪಸ್ಸು ಕಳಿಸಿದರೆ ಎಂಬ ಆತಂಕ, ಹಿಮಾಲಯದ ಪ್ರಕೃತಿಯನ್ನು ಒಂದು ತಿಂಗಳಕಾಲ ಆನಂದಿಸುವೆನೆಂಬ ಉತ್ಸಾಹ, ಕೈಲಾಸ ದರ್ಶನಕ್ಕೆ ಮತ್ತೊಂದು ದಿನ ಹತ್ತಿರವಾದೆನೆಂಬ ವಿಶ್ವಾಸ, ವರ್ಷ ವರ್ಷಗಳಿಂದ ಅನುಸರಿಸಿ ಜಡ್ಡುಹಿಡಿದ ದಿನಚರಿಯು ಬದಲಾಗಿ ಆರಂಭವಾದ ಹೊಚ್ಚ ಹೊಸ ದಿನಚರಿಯ ಸಂಭ್ರಮ, ಹುಟ್ಟಿದ ಮನೆ ಸೇರಿದ ಮನೆ ಎರಡೂ ಕಡೆಗಳಲ್ಲಿ ಯಾರೂ ನೋಡಿರದ ಕೈಲಾಸ-ಮಾನಸ ಸರೋವರವನ್ನು ನೋಡ ಹೊರಟಿರುವ ಮೊದಲಿಗಳೆಂಬ ಹೆಮ್ಮೆ-ಸಂತೋಷ. ಪಂಜರದಿಂದ ಹೊರ ಬಂದ ಹಕ್ಕಿ ರಕ್ಕೆ ಫಡಫಡಿಸುವಂತೆ ಮೈ ಮನದಲ್ಲಿ ಹೊಸ ಲವಲವಿಕೆ ಬಂದು ಹತ್ತು ವರ್ಷಗಳಷ್ಟು ಚಿಕ್ಕವಳಾಗಿ ಹೋಗಿದ್ದೆ.

*ಪ್ರಭಾವಾದದ್ಭುತಾತ್ ಭೂಮೇ ಸಲಿಲಸ್ಯಚ ತೇಜಸಃ।

ಪರಿಗ್ರಹಾನ್ಮುನೀನಾಂಚ ತೀರ್ಥಾನಾಂ ಪುಣ್ಯತಾ ಸ್ಮೃತಾ॥

ಧಾರ್ಚುಲಾದಿಂದ ತವಾಘಾಟ್‌ನವರೆಗೆ ೯ ಕಿ.ಮೀ.ಗಳ ಬಸ್ ಪ್ರಯಾಣ. ಫರ್ಲಾಂಗಿಗೊಂದರಂತೆ ದಾರಿಯ ಇಕ್ಕೆಲದಲ್ಲೂ ಧುಮ್ಮಿಕ್ಕುತ್ತಿದ್ದ ಚಿಕ್ಕ-ದೊಡ್ಡ ಜಲಪಾತಗಳು; ಅವುಗಳಲ್ಲಿ ನೊರೆನೊರೆಯಾಗಿ ಹರಿದಿದ್ದ ಮುಗ್ಧ ಧವಳ ಜಲ; ಜಲವು ಕುಣಿಕುಣಿದು ಕೆಳಗಿಳಿಯಲೆಂಬಂತೆ ಅಲ್ಲಲ್ಲಿ ಎದ್ದಿದ್ದ

ವಿವಿಧಾಕೃತಿಯ ಬಂಡೆಗಳು; ಬಂಡೆಗಳ ಮೇಲೆ ಬಿದ್ದು ಚಿಮ್ಮಿದಾಗ ತುಂತುರು ಹನಿಯಾಗಿ ಎದ್ದ ನೀರ ಕಣಗಳು ರಚಿಸಿದ ಕಾಮನ ಬಿಲ್ಲು; ಸನಿಹಕ್ಕೆ ಬಂದವರ ಮೈಮೇಲೆ ನೀರು ಹನಿಸುವ ತಡಸಲು; ಅಲ್ಲಲ್ಲಿ ಬೆಟ್ಟದ ಭಾಗ ಕುಸಿದು ಕೆಳಗೆ ಜರುಗಿದ್ದ ಹೊಸ ಮಣ್ಣಿನ ರಾಶಿ– ನಿಸರ್ಗದ ಈ ಚಿತ್ರಕ್ಕೆ ಪೂರಕವೆಂಬಂತೆ ಎದುರಿನ ಬೆಟ್ಟದ ಹಸುರಿನ ಮಧ್ಯೆ ಏರು ದಾರಿಯಲ್ಲಿ ಬಣ್ಣ ಬಣ್ಣದ ಬಟ್ಟೆ ಧರಿಸಿ ನಡೆದಿದ್ದ ಕುಮಾವ್ ಮಹಿಳೆಯರು; ಒಂದೆರಡು ಬೆಟ್ಟಗಳ ನೆತ್ತಿಯಲ್ಲಿ, ಮತ್ತೊಂದೆರಡು ಬೆಟ್ಟಗಳ ಮಗ್ಗುಲಿನಲ್ಲಿದ್ದ ಮಂದಿರಗಳು ಅವುಗಳ ಗೋಪುರದಲ್ಲಿ ಹಾರಾಡುತ್ತಿದ್ದ ಧ್ವಜಗಳು; ಹಸಿರು ಬೆಟ್ಟಗಳ ಮೇಲೆ ರಂಗೋಲಿಯಿಟ್ಟಂತೆ ಕಾಣುತ್ತಿದ್ದ ಕಾಲ್ದಾರಿಗಳು, ಹಸುರಿನ ನಡುವೆ ಮಲ್ಲಿಗೆಯಂತೆ ಅರಳಿದ್ದ ಪುಟ್ಟ ಪುಟ್ಟ ಬಿಳಿಯ ಮನೆಗಳು. ಮಾನವನ ಕೈಗೆಲಸವೂ ಪರಿಸರದ ಅಂದವನ್ನು ಹೆಚ್ಚಿಸಿತ್ತು. ಈ ಅಂದವನ್ನು ಕೆಡಿಸಲು ಹೊಗೆ ಕಾರುವ ಕಾರ್ಖಾನೆಗಳಾಗಲೀ, ಬೆಟ್ಟದ ಬಸಿರನ್ನು ಬಗೆದು ಹೊರಗೆ ಚೆಲ್ಲುವ ಕ್ವಾರಿಗಳಾಗಲಿ ಅಲ್ಲೆಲ್ಲೂ ಕಾಣ ಬರದಿದ್ದುದು ನಮ್ಮ ಪೂರ್ವ ಜನ್ಮದ ಸುಕೃತ. ಪ್ರಕೃತಿಯೊಂದಿಗೆ ಹೊಂದಾಣಿಕೆಯಲ್ಲಿ ಮಾನವ ನಿರ್ಮಿಸಿದ್ದ ಭೂಭಾಗದ ಒಂದು ತುಣುಕನ್ನು ರಾಜಕಾರಣ–ಭ್ರಷ್ಟಾಚಾರ ಪೀಡಿತ ಭಾರತದಲ್ಲೇ ಕಂಡಿದ್ದು ಪೂರ್ವ ಜನ್ಮದ ಸುಕೃತವೇ ಸರಿ! ಈ ದಾರಿಯನ್ನು ಬಸ್ಸಿನಲ್ಲಿ ಕುಳಿತು ಕ್ರಮಿಸುವುದಕ್ಕಿಂತಲೂ ನಡಿಗೆಯಲ್ಲಿ ಬೇಕೆಂದಲ್ಲಿ ನಿಂತು ನಿಂತು ಮಾಡುವಂತಿದ್ದರೆ ಇನ್ನೂ ಸೊಗಸಿರುತ್ತಿತ್ತು. ಯಾತ್ರಿ ತಂಡದವರಾಗಿದ್ದುದರಿಂದ ಈ ಸ್ವಾತಂತ್ರ್ಯ ಪ್ರವಾಸದ ಯಾವುದೇ ಕಾಲದಲ್ಲಿ ಸಿಗಲಾರದೆನ್ನುವುದು ಒಂದು ದೊಡ್ಡ ಕೊರತೆಯಾಗಿ ಉಳಿದು ಹೋಯಿತು.

ಚಾರಣಕ್ಕೆ ಆರಂಭಿಸುವ ತಾಣವಾದ ತವಾಘಾಟ್ ಹಳ್ಳಿಯ ಚೌಕಕ್ಕೆ ಬಸ್ಸು ಬಂದು ನಿಂತೊಡನೆಯೇ ಸುತ್ತಲೂ ಜನ ಘೇರಾಯಿಸಿಬಿಟ್ಟರು. ಬಹುಪಾಲು ಜನ ಭೋಟಿಯಾ ಜನಾಂಗದವರು. ಇವರು ಯಾತ್ರಿಕರಿಗೆ ಕುದುರೆಗಳನ್ನು ಬಾಡಿಗೆಗೆ ಕೊಟ್ಟು ಭಾರತದ ಗಡಿಯವರೆಗೆ ಕರೆದೊಯ್ಯುವವರು. ಯಾತ್ರಿಕರ ಸಾಮಾನುಗಳನ್ನು ಕುದುರೆ–ಕಚ್ಚರಗಳ ಮೇಲೆ ಹೇರಿಕೊಂಡು ಬರುವವರು. ಯಾತ್ರಿಗಳ ಕೈಚೀಲ, ನೀರಿನ ಬ್ಯಾಗ್, ಕ್ಯಾಮರಾ ಬ್ಯಾಗ್ ಇತ್ಯಾದಿಗಳನ್ನು ಹೊತ್ತು ಬರುವವರು. ಬಸ್ಸಿನ ಬಳಿಗೆ ಓಡಿ ಬಂದವರಿಗೆ ಹೇಗಾದರೂ ಮಾಡಿ ಲಿಪುಲೇಖ್‌ವರೆಗೆ ಬಾಡಿಗೆ ಗಿಟ್ಟಿಸುವ ತವಕ. ಈ ಭೋಟಿಯಾ ಜನ ತಮ್ಮ ಜಿಲ್ಲೆ(ಕುಮಾವ್)ಯ ಬೆಟ್ಟಗಳನ್ನು ಅಂಗೈನಂತೆ ಬಲ್ಲವರು. ಮಾರ್ಗದಲ್ಲಿ ಅಡಚಣೆಯುಂಟಾದರೆ ಬೇರೊಂದು ಮಾರ್ಗ ಹುಡುಕಿ ಮುಂದಕ್ಕೆ ಕರೆದೊಯ್ಯಬಲ್ಲವರು. ದಿನದ ಹವಾಮಾನವನ್ನು ಮುಂದಾಗಿ ತಿಳಿಯ ಬಲ್ಲ ಸ್ಥಳೀಕರು. ತೆಹರಿ ಘಡವಾಲ್ ಪ್ರದೇಶದಿಂದ ಹಿಡಿದು ನೇಪಾಳದ ಪೂರ್ವ ಸರಹದ್ದಿನವರೆಗೆ ಸೀಮಾಂತ ಪ್ರದೇಶದ ಉದ್ದಕ್ಕೂ ಇವರು ನೆಲೆಸಿರುವ ಭಾಗವೇ ಭೋಟ್ ಪ್ರದೇಶ.

ಭೋಟಿಯಾಗಳು ವಾಸ್ತವವಾಗಿ ಹಿಂದೂ ಕ್ಷತ್ರಿಯರು. ಇವರಲ್ಲಿ ಯಜ್ಞೋಪವೀತವನ್ನು ಹಾಕಿರುವವರು ಬಹಳ ಮಂದಿ ಇಂದಿಗೂ ಕಾಣಬರುತ್ತಾರೆ. ಶತಮಾನಗಳಿಂದ ಟಿಬೆಟೀಯರೊಡನೆ ವ್ಯಾಪಾರ ಸಂಬಂಧವಿಟ್ಟುಕೊಂಡವರಿವರು. ಟಿಬೆಟೀಯರೊಡನೆ ವ್ಯಾವಹಾರಿಕ ಸಲಿಗೆಯಿಂದ ಸಹ ಭೋಜನ–ಪಾನ ಮಾಡುವ ಭೋಟಿಯಾಗಳೊಂದಿಗೆ ಇತರ ಜನಾಂಗದವರು ವಿವಾಹ ಸಂಬಂಧ ಬೆಳೆಸುವುದು ಅಪರೂಪ. ಭೋಟಿಯಾ ಭಾಷೆಯಲ್ಲೂ ಅನೇಕ ಟಿಬೆಟಿ ಪದಗಳು ಸೇರಿದ್ದು

ಇವರ ಹಿಂದಿ ಬೇಗ ಅರ್ಥವಾಗದು. ಭಾರತ ಚೀನಾ ರಾಜಕೀಯ ಸಂಬಂಧ ಬಿಗಡಾಯಿಸಿದ ನಂತರ ಮೊದಲಿನಂತೆ ವ್ಯಾಪಾರಕ್ಕಾಗಿ ಟಿಬೆಟ್ಟಿಗೆ ಹೋಗಿಬರಲಾಗದೆ ಜೀವನೋಪಾಯಕ್ಕಾಗಿ ಪೋರ್ಟರ್ ಕೆಲಸ, ಕುದುರೆ ಬಾಡಿಗೆಗೆ ಓಡಿಸುವುದು, ಹಂಗಾಮಿ ಮಜದೂರಿ ಕೆಲಸ ಮಾಡುವ ಭೋಟಿಯಾಗಳು ಈಗೀಗ ದೊಡ್ಡ ಪಟ್ಟಣಗಳಿಗೆ ಬಂದು ನಾಲ್ಕಾರು ತಿಂಗಳು ಕೆಲಸ ಮಾಡಿ ಹಿಂದಿರುಗುವುದೂ ಉಂಟು. ಪಟ್ಟಣಗಳಲ್ಲಿ ಖಾಯಂ ಕೆಲಸ ಸಿಕ್ಕರೆ ವರ್ಷಕ್ಕೊಮ್ಮೆ ಮನೆಗೆ ಹೋಗಿ ಬರುವವರೂ ಇದ್ದಾರೆ. ವ್ಯಾಪಾರಕ್ಕಾಗಿಯೋ, ಕೆಲಸಕ್ಕಾಗಿಯೋ ತಿಂಗಳುಗಟ್ಟಲೆ ಹೊರಗಿರುವ ಪುರುಷರೇ ಹೆಚ್ಚಾಗಿರುವುದರಿಂದ ಈ ಜನಾಂಗದ ಮಹಿಳೆಯರೇ ಸಂಸಾರದ ಸಂಪೂರ್ಣ ಹೊಣೆ ಹೊತ್ತವರು. ಹೊಲದ ಕೆಲಸವೂ ಮಹಿಳೆಯರಿಗೇ ಬಿಟ್ಟಿದ್ದು. ಚೀನಾ ಭಾರತದ ಯುದ್ಧದಿಂದಾಗಿ ಭೋಟ್ ಪ್ರದೇಶವನ್ನು ಗಡಿ ಪ್ರದೇಶವೆಂದು ಘೋಷಿಸಿರುವುದು ಭೋಟಿಯಾಗಳಿಗೊಂದು ಶೋಚನೀಯ ಪರಿಸ್ಥಿತಿ. ಇಲ್ಲಿ ಯಾರೇ ಆದರೂ ಗುರುತಿನ ಚೀಟಿ ಪಡೆದಿರಬೇಕಲ್ಲದೆ ಗಡಿರಕ್ಷಣಾದಳದವರು ಕೇಳಿದಾಕ್ಷಣ ತೋರಿಸಬೇಕಾದುದು ಅತ್ಯಗತ್ಯ. ತಮ್ಮದೇ ನೆಲದಲ್ಲಿ ತಮ್ಮ ಗುರುತಿನ ಚೀಟಿ ಹಿಡಿದು ಓಡಾಡಬೇಕಾದ ಪರಿಸ್ಥಿತಿ. ಅದಿಲ್ಲದೇ ಹೋದರೆ ತಮ್ಮ ಊರಿಗೇ ಕಾಲಿಡಲಾಗದ ನಿರ್ಬಂಧವೆಂಬ ಕೊರಗು ಇವರದು. ಇವರ ಸ್ಥಿತಿಗತಿ, ವಸತಿ ಸೌಲಭ್ಯ, ವಿದ್ಯಾಭ್ಯಾಸದ ಪರಿಸ್ಥಿತಿ ನೋಡಿದರೆ ಸರಕಾರದ ಕೃಪಾದೃಷ್ಟಿ ಇವರಿಗಿನ್ನೂ ಲಭ್ಯವಾದಂತಿಲ್ಲ.

ಸಮುದ್ರ ಮಟ್ಟದಿಂದ ಸುಮಾರು ೩೯೬೦ ಅಡಿಗಳ ಎತ್ತರದಲ್ಲಿರುವ ತವಾಘಾಟ್‌ನ ಚೌಕದಲ್ಲಿ ಗುಂಪುಗೂಡಿದ್ದ ಕೂಲಿಯಾಳುಗಳ ಪ್ರಮಾಣ ಪತ್ರ ತಪಾಸಣೆ ಮಾಡಿದ ಕು.ಮಂ.ವಿ.ನಿ.ದ ಅಧಿಕಾರಿಗಳೇ ಯಾತ್ರಿಕರಿಗೆ ಕೂಲಿಯಾಳುಗಳನ್ನು ಮತ್ತು ಕುದುರೆಗಳನ್ನು ಗೊತ್ತು ಮಾಡಿಕೊಟ್ಟರು. ನಾವಿಬ್ಬರು ಕನ್ನಡತಿಯರು-ನಾನು ಮತ್ತು ನಿರ್ಮಲಾ ದೇವಿ ಒಂದು ಕುದುರೆಯನ್ನು ಬಾಡಿಗೆಗೆ ಪಡೆದೆವು. ಕುದುರೆಯ ಮಾಲಿಕ ೧೭-೧೮ರ ಯುವಕ ಭವಾನಿಸಿಂಗ್ ಲಿಪುಲೇಖ್‌ವರೆಗಿನ ಒಂಭತ್ತು ದಿನಗಳ ನಮ್ಮ ಚಾರಣದ ಸಹಚರ ಸಹಾಯಕ-ಮಾರ್ಗದರ್ಶಕ.

ಹದಿನೈದು ನಿಮಿಷದಲ್ಲಿ ಯಾತ್ರಿಗಳ ಮೂಟೆಗಳನ್ನು ಕುದುರೆಗಳ ಮೇಲೆ ಕಟ್ಟಿ, ಕೂಲಿಯಾಳುಗಳು ನೀರಿನ ಬಾಟಲಿ, ಕೈಚೀಲ, ರೈನ್ ಕೋಟ್ ಇತ್ಯಾದಿಗಳನ್ನು ಹೆಗಲಿಗೇರಿಸಿ, ಕೂರಬೇಕೆಂದ ಯಾತ್ರಿಗಳನ್ನು ಕುದುರೆಯ ಮೇಲೇರಿಸಿ ಎಲ್ಲರೂ ಕಾಲಿಗಂಗಾ ಸೇತುವೆಯನ್ನು ದಾಟಿದಾಗ ಗಂಟೆ ಎಂಟು. ತವಾ ಘಾಟ್ ಚೌಕದಿಂದ ಕೈಲಾಸ-ಮಾನಸ ಸರೋವರ ಯಾತ್ರೆಯ ಮೊದಲ ಚಾರಣದ ಮೊದಲ ದಿನದ ಚಾರಣಕ್ಕೆ ಶ್ರೀ ಗಣೇಶ ಮಾಡಿದ್ದೆವು-ಮನದಲ್ಲಿ ನೂರಾರು ಕನಸುಗಳ ಹೊತ್ತು. ಎದುರಿಗೆ ೨೭೫೦ ಅಡಿಗಳೆತ್ತರಕ್ಕೆ ಕಡಿದಾಗಿ ಏರಿದ್ದ ಥಾನೀಧಾರ್ ಬೋಳುಬೆಟ್ಟ ನಮ್ಮನ್ನು ಕೆಣಕಿ ಆಹ್ವಾನಿಸಿತ್ತು.

ಆರಂಭಶೂರತ್ವದಲ್ಲಿ ಎಲ್ಲರೂ ಸರಸರನೆ ಮೆಟ್ಟಿಲುಗಳನ್ನೇರಿದೆವು. ಅರ್ಧ ಗಂಟೆಯಲ್ಲಿ ಏದುಸಿರು, ಒಣಗಿದ ಗಂಟಲು, ಕಾಲ್ನಡುಕ, ಆದರೂ ಸೋಲಬಾರದೆಂಬ ಛಲ. ಐವತ್ತು ಅಡಿ ಮೇಲೇರಿದರೆ ಐದು ನಿಮಿಷ ನಿಲ್ಲುವುದು. ಮುಂದೆ ಹೋದವರನ್ನು ನೋಡುತ್ತಲೇ ಆವೇಶ ಬಂದವರಂತೆ ಮೇಲೇರುವುದು. ಒಬ್ಬೊಬ್ಬರಂತೆ ತಂಡದ ಸದಸ್ಯರು ನನ್ನನ್ನು ಹಿಂದೆ ಹಾಕಿ ಹೋದಾಗಲೆಲ್ಲ ಮತ್ತಷ್ಟು ಸಾಹಸ ಪಟ್ಟು ಇನ್ನೊಂದೈವತ್ತು ಅಡಿಗಳಿಗೆ ದೇಹವನ್ನು ಎಳೆದು

ಹಾಕುತ್ತಿದ್ದೆ. ಹತ್ತು ಗಂಟೆಯ ಹೊತ್ತಿಗೆ ಹತ್ತುವ ಶ್ರಮದ ಜೊತಗೆ ಬಿಸಿಲಿನ ತಾಪದಿಂದಲೂ ಮೈ ಬೆವರೊಡೆದಿತ್ತು. ಬಾಯಾರಿಕೆ ಹೇಳಲಾರದಷ್ಟು. ಅರ್ಧ ದಾರಿ ಮುಗಿದು ಸುಧಾರಿಸಿಕೊಳ್ಳಲು ನಿಂತು ಕೆಳಗೆ ನೋಡಿದರೆ ತಲೆ ಸುತ್ತಿ ಬಂದಂತೆ ಕೆಳಗುರುಳುತ್ತಿರುವಂತಹ ಭಾವನೆ. ಧೈರ್ಯ ವಹಿಸಿ ನಿಂತು ನೋಡಿದರೆ ತವಾಘಾಟ್‌ನ ಚೌಕದಲ್ಲಿ ಓಡಾಡುವ ಜನರು ಇರುವೆಗಳಂತೆ ಚಿಕ್ಕದಾಗಿ ಆದರೆ ಸ್ಪಷ್ಟವಾಗಿ ಕಾಣುತ್ತಿದ್ದರು. ಥಾನೀಧಾರ್ ಬೆಟ್ಟ ಅಷ್ಟು ಬೋಳಾಗಿದೆ ಕಡಿದಾಗಿದೆ ತವಾ ಘಾಟ್ ಕಡೆಗೆ. ಮಧ್ಯ ಒಂದೆರಡು ತಿರುವಿನಲ್ಲಿ ಚಹಾದಂಗಡಿಗಳಿದ್ದವು. ಹಣ್ಣು ಮಾರುವ ಮಹಿಳೆಯರೂ ದಾರಿಯಲ್ಲಿ ಸಿಕ್ಕರು. ಕುದುರೆ ಏರಿದ್ದ ನಿರ್ಮಲಾದೇವಿ ಆಗಲೇ ಬಹಳ ಮೇಲೇರಿದ್ದರು. ಅರ್ಧ ದಾರಿಗೆ ಬರುವಷ್ಟರಲ್ಲಿ ಯಾತ್ರಿಗಳೆಲ್ಲಾ ಮುಂದೆ ಹೋಗಿದ್ದು, ನನ್ನೊಂದಿಗೀಗ ಕು.ಮಂ.ವಿ.ನಿ.ದ ರೇಡಿಯೋ ಆಪರೇಟರ್, ಡಾಕ್ಟರ್ ಮತ್ತು ಎಲ್ಲಾ ಯಾತ್ರಿಗಳ ಹಿಂದೆ ಕಡೆಯಲ್ಲಿ ಬರಬೇಕೆಂದು ತಿಳಿಸಲಾಗಿದ್ದ ಸಹಾಯಕ ಲಯಸನ್ ಆಫೀಸರ್(ಸಂಪರ್ಕಾಧಿಕಾರಿ) ಸುಮೀತ್ ಕುಮಾರ್.

ಹಾದಿಯಲ್ಲಿ ಎದುರಾದವರು ನನ್ನ ಏದುಸಿರು ಮತ್ತು ಬೆವತು ಕೆಂಪು ಕೆಂಪಾಗಿದ್ದ ನನ್ನ ಮುಖವನ್ನು ನೋಡಿ ನಕ್ಕು 'ಓಂ ನಮಃ ಶಿವಾಯ' ಎಂದು ಕೈ ಜೋಡಿಸಿ ಅಥವಾ ಬಲಗೈ ಹಣೆಗೊತ್ತಿ ಮುಂದೆ ಸಾಗುತ್ತಿದ್ದರು. ಶಿವನಾಮ ಜಪ ಮಾಡಿದರೆ ದಣಿವಾಗುವುದಿಲ್ಲವೆಂದು ಇವರ ಸಲಹೆಯೇನೊ! ನಾನು ನಮಸ್ತೆ ಎಂದುಸುರಿ ನಡೆದೇ ನಡೆದೆ. ಹರಸಾಹಸ ಮಾಡಿ ಕೊನಗೂ ಬೆಟ್ಟದ ನೆತ್ತಿ ತಲುಪಿದಾಗ ಮಧ್ಯಾಹ್ನ ಹನ್ನೆರೆಡು ಗಂಟೆಯಾಗಿತ್ತು. ನಾಲ್ಕು ಗಂಟೆಗಳಲ್ಲಿ ಮೂರುವರೆ ಸಾವಿರ ಅಡಿಗಳಷ್ಟು ಐದು ಕಿ.ಮೀ. ನ ಏರು ದಾರಿಯಲ್ಲಿ ಏರಿದ್ದೇನೆಂದರೆ ನನಗೇ ನಂಬಿಕೆ ಬಾರದು. ಅಲ್ಲಲ್ಲಿ ಕಾಲು ನೀಡಿ ಕುಳಿತಿದ್ದ ಯಾತ್ರಿಗಳನ್ನು ನೋಡಿ ಸಮಾಧಾನ. ನನ್ನಂತೆಯೇ ಇವರಿಗೂ ಕಾಲು ನೋವಿದೆಯೆಂದ ಮೇಲೆ ನಾನು ಎಲ್ಲರಂತೆಯೇ ಎಂಬ ಸಮಾಧಾನ. ಕೆಲವರು ದಾರಿ ಬದಿಯ ಹುಲ್ಲಿನ ಮೇಲೆ ಅಂಗಾತ ಮಲಗಿಯೂ ಇದ್ದರು. ಶಿಬಿರ ತಲುಪಲು ಇನ್ನೂ ನಾಲ್ಕು ಕಿ.ಮೀ. ನಡೆಯಬೇಕಿತ್ತು. ಆದರದು ಸಮತಟ್ಟಿನ ದಾರಿ. ಕುಳಿತರೆ ಕಾಲು ಮುಷ್ಕರ ಹೂಡೀತೆಂದು ಹೆದರಿ ಆಮೆಯಂತೆ ನಡೆದೇ ಇದ್ದೆ. ಥಾನೀಧಾರ್ ಬೆಟ್ಟ ಹತ್ತಿದ ಅನುಭವದಿಂದ ಇಂದಿನ ಶಿಬಿರದ ಹಳ್ಳಿಯ ಹೆಸರು 'ಪಾಂಗು' (ಎಂದರೆ ಕುಂಟು) ಎನ್ನುವುದು ಅನ್ವರ್ಥನಾಮವೆನಿಸಿತು. ಇಲ್ಲಿಗೆ ತಲುಪುವಷ್ಟರಲ್ಲಿ ಎಲ್ಲರೂ ಕುಂಟರೇ ಆಗಿದ್ದೆವು. ಸೊಂಟಕ್ಕೆ ಕೈಯೂರಿ ಕಾಲೆಳೆದವರು, ಮಂಡಿನೀವಿಕೊಳ್ಳುತ್ತಾ ದಾರಿಯ ಬದಿಯಲ್ಲಿ ಕುಳಿತವರು, ಪೋರ್ಟರುಗಳ ಕೈ ಹಿಡಿದು ಬಂದವರು– ಪಾಂಗುಗಳೇ ಆಗಿದ್ದೆವು. ನನ್ನ ಕೆಂಪೇರಿದ ಮುಸುಡಿಯನ್ನು ನೋಡಿದ ಭವಾನಿಸಿಂಗ್ "ಇದು 'ಥಾಣೇದಾರ್' ಗೊತ್ತಾ?" ಎಂದು ನಕ್ಕ. ಹಿಂದಿಯಲ್ಲಿ ಥಾಣೇದಾರ್ ಎಂದರೆ ಪೋಲೀಸು ಠಾಣೆಯವರು ಕೊಡುವ ಕಠಿಣ ಶಿಕ್ಷೆ ಎಂದರ್ಥ. ಕೈಲಾಸ–ಮಾನಸ ಚಾರಣದ ರಿಹರ್ಸಲ್ ಇದಾಗಿತ್ತು. ಸುಮಾರು ೭೨೫೦ ಅಡಿಗಳಷ್ಟು ಎತ್ತರದಲ್ಲಿರುವ ಪಾಂಗು ಶಿಬಿರ ತಲುಪಿದಾಗ ದೇಹ ಸೋತಿದ್ದರೂ ಮನಸ್ಸು ಗೆದ್ದೆನೆಂದು ಹಿಗ್ಗಿತ್ತು. ಶಿಬಿರದ ಬಾಗಿಲಿನಲ್ಲೇ ಕೈಗೆ ಬಂದ ರಸನಾ ಪಾನಕ ಗಂಟಲಿಗಿಳಿದು ಹಾಯೆನಿಸಿತ್ತು. ಕೊಟ್ಟವರನ್ನು ಹರಸುವಂತಾಯಿತು.

ಕೊರೆಯುತ್ತಿದ್ದ ತಣ್ಣೀರಿನಿಲ್ಲಿ ಸ್ನಾನ ಮಾಡಿ ನಡುಗುತ್ತಾ ಹೊರ ಬಂದರೆ, ಅನೇಕರು ಆಗಲೇ ಅರ್ಧ ಊಟ ಮುಗಿಸಿದ್ದರು. ಮೇಜಿನ ಮೇಲೆ ಇಟ್ಟಿದ್ದ ಸಬ್ಜಿದಾಲ್, ಹಬೆಯಾಡುತ್ತಿದ್ದ

ಅನ್ನ ಮತ್ತು ಕಾವಲಿಯಿಂದ ನೇರ ತಟ್ಟೆಗೇ ಬರುತ್ತಿದ್ದ ಬಿಸಿಬಿಸಿ ರೊಟ್ಟಿ. ಪಸಿವು ಇಮ್ಮಡಿಯಾಯಿತು. ಇದೇ ರೀತಿ ತಿಂಗಳು ಪೂರ ತಿಂದರೆ ಗತಿ? ಬುದ್ಧಿಯೇನಾದರೂ ಯೋಚಿಸಲಿ, ಕೈ ಬಾಯಿ ತಮ್ಮ ಕೆಲಸವನ್ನು ನಡೆಸಿದವು. ಉಂಡು ಸುಧಾರಿಸಿಕೊಳ್ಳಲು ಮಲಗಿ ಕಣ್ಣುಚ್ಚಿದರೆ ಒಳಗಣ್ಣಿನ ಮುಂದೆ ಮೆಟ್ಟಿಲುಗಳು, ಮರಳು-ಕಲ್ಲುಗಳು ಬಹುವೇಗದಲ್ಲಿ ಓಂದಕ್ಕೊಂಡುತ್ತಿದ್ದವು. ಮೆಟ್ಟಿಲು ಏರುವಾಗ ಮುಗ್ಗರಿಸಿ ಬೀಳ ಬಾರದೆಂಬ ಎಚ್ಚರಿಕೆ ಮತ್ತು ಇತರರಿಗ ಬಲು ಹಿಂದೆ ಬೀಳಬಾರದೆಂಬ ಹಠ, ಎರಡೂ ಸೇರಿ ಏರುದಾರಿಯಲ್ಲೂ ಅತ್ತಿತ್ತ ನೋಡದೆ ನೆಲಕ್ಕೆ ದೃಷ್ಟಿಯಿಟ್ಟು ಧಡಧಡ ನಡೆದುದರ ಪರಿಣಾಮಪಿದು. ಪೆದ್ದೇ, ಅರ್ಧದಿನದ ಚಾರಣವನ್ನು ವ್ಯರ್ಥಮಾಡಿಕೊಂಡೆ. ಅವರಿವರ ಮೇಲೆ ಪೈಪೋಟಿ ಮಾಡಲು ಇದು ರನ್ನಿಂಗ್ ರೇಸ್ ಅಲ್ಲ. ಪ್ರಕೃತಿಯನ್ನು ನೋಡಿ ಆನಂದಿಸಲು ನೀನು ಕೈಗೊಂಡ ಚಾರಣ ಎಂದು ಬುದ್ಧಿ ಎಚ್ಚರಿಸಿತು. ಹತ್ತು ನಿಮಿಷದ ಮೇಲೆ ಮಲಗಲಾರದಾದೆ. ಕತ್ತಲಾದ ಮೇಲೆ ಮಲುಗುವುದಿದ್ದುದೇ ಬೆಳಕಿರುವವರೆಗೂ ಆದಷ್ಟೂ ಹೊರಗೇ ಇರಬೇಕೆಂದು ನಿರ್ಧರಿಸಿ ಶಿಬಿರದ ಹೊರ ಜಗಲಿಗೆ ಬಂದು ಕುಳಿತೆ. ನನ್ನಂತೆಯೇ ಮಹರಾಷ್ಟ್ರದ ಜೋಷಿ ಮತ್ತು ದೆಹಲಿಯ ಸುಧಾ ಮಹಾಲಿಂಗಂ ಕ್ಯಾಮರಾ ಹಿಡಿದು ಹೊರಬಂದಿದ್ದರು. ಪರಿಸರದ ಬಗೆಗೆ ಆರಂಭವಾದ ಮಾಮೂಲೀ ಮಾತುಕತೆ ಭಾರತೀಯ ಜನತೆಗೆ ಬ್ರಿಟಿಷರು ಕೊಟ್ಟುಹೋದದ್ದು (ಆಸ್ಪತ್ರೆ, ಇಂಗ್ಲಿಷ್ ವಿದ್ಯಾಭ್ಯಾಸ, ಕಾರ್ಖಾನೆಗಳು ಇತ್ಯಾದಿ) ಒಳಿತಾದುದೊ ಕೆಡುಕೊ ಎಂಬ ಚರ್ಚೆಗೆ ತಿರುಗಿ, ಮುಂದುವರಿದು ಆಸ್ತಿಕತೆ-ನಾಸ್ತಿಕತಗೆ, ದ್ವೈತ-ಅದ್ವೈತಕ್ಕೆ ಬಂದಿತು. ಇತರ ಯಾತ್ರಿಗಳು ಒಬ್ಬೊಬ್ಬರೇ ಅಂಗಳಕ್ಕೆ ಬಂದವರು ನಮ್ಮ ಚರ್ಚೆಗೆ ಆಗೊಮ್ಮೆ ಈಗೊಮ್ಮೆ ಮಾತನ್ನು ಸೇರಿಸುತ್ತಿದ್ದರು. ಲಯಸನ್ ಆಫೀಸರ್ ಸತೀಶ್ ಕುಮಾರ್ ಶಿಬಿರದ ಬಾಗಿಲಲ್ಲಿ ನಿಂತು ಚಪ್ಪಾಳೆಯಿಕ್ಕಿ ನಮ್ಮೆಲ್ಲರ ಗಮನ ಸೆಳೆದಾಗ ಸಮಯ ಸಂಜೆ ಆರು ಗಂಟೆಯಾಗಿದ್ದುದು ಅರಿವಿಗೆ ಬಂತು. ಮೊದಲ ದಿನವೇ ಅಯೋಜಿತವಾಗಿ ಈ ರೀತಿಯ ವಿಚಾರ ವಿನಿಮಯ ಆರಂಭವಾಗಿದೆ. ಒಳ್ಳೆಯದು. ಇದನ್ನು ಕಾಲ ನಿಗದಿ ಮಾಡಿ ದಿನವೂ ಸಾಯಂಗೋಷ್ಠಿಯಂತೆ ನಡೆಸೋಣ. ನಮ್ಮಲ್ಲೇ ಯಾರಾದರೂಬ್ಬರು ಪ್ರವಚನ ಕೊಟ್ಟರೂ ಸರಿ. ನಂತರ ಇಷ್ಟವಿದ್ದವರು ಸಾಮೂಹಿಕ ಭಜನೆಗೆ ಸೇರಬಹುದು ಎಂದು ಸಲಹೆಯಿತ್ತರು. ಆ ಕ್ಷಣವೇ ಗುಜರಾತಿ ಭಕ್ತಜನರು ಭಜನೆ ಆರಂಭಿಸಿಯೇ ಬಿಟ್ಟರು. ಅರ್ಧ ಗಂಟೆಕಾಲ ಒಂದಾದಮೇಲೊಂದರಂತೆ ಹಾಡಿದ ಭಜನೆಗಳಿಗೆ ಮಂಗಳ ಹಾಡಿಸಿದ್ದುದೆಂದರೆ ಕೈಗೆ ಬಂದ ಬಿಸಿಬಿಸಿ ಟೊಮೇಟೋ ಸೂಪ್. ಪ್ರವಾಸದ ಪ್ರತಿದಿನವೂ ಸಂಜೆಯ ಗೋಷ್ಠಿಯಲ್ಲಿ ವಿವಿಧ ವಿಷಯಗಳು ಚರ್ಚಿತವಾದವು. ಪುರಾಣ, ಕಥೆ, ಕವನವಾಚನ, ಜಾನಪದ ಗಾಯನ ನರ್ತನ, ಅಪರೂಪದ ವಿಷಯ ಪ್ರವಚನಗಳೂ ಇದರಲ್ಲಿ ಸೇರಿದ್ದವು. ಯಾತ್ರಿಗಳು ಒಟ್ಟಿಗೆ ಸೇರುತ್ತಿದ್ದ ಇದೇ ವೇಳೆಯಲ್ಲಿ ಮುಂದಿನ ದಿನದ ಕಾರ್ಯಕ್ರಮ ಮತ್ತು ಚಾರಣದ ಸ್ಥೂಲ ಪರಿಚಯವನ್ನು, ಮುನ್ಸೂಚನೆಯನ್ನು, ಅಗತ್ಯ ಸಲಹೆಗಳನ್ನು ಕೊಡಲು ಅನುಕೂಲವಾಗಿತ್ತು.

ಹೊರಗೆ ಅಂಗಳದಲ್ಲಿ ಕುಳಿತವರಿಗೆ ಮೇಲೆ ತಾರೆಗಳ ಮಕಮಲೀ ಆಗಸ, ಕೆಳಗೆ ಪಾಂಗು ಹಳ್ಳಿಯ ಮಿನುಗುಟ್ಟುತ್ತಿದ್ದ ದೀಪಗಳಿಂದ ಘಾಡವೆನಿಸಿದ್ದ ಕತ್ತಲೆಯ ರಾತ್ರಿ, ಕೈಯಲ್ಲಿ ರುಚಿಕಟ್ಟಿನ ಬಿಸಿ ಸೂಪ್. ಉಮರನ ಒಸಗೆಗಳೂ ಇಂತಹುದೇ ಸನ್ನಿವೇಶದಲ್ಲಿ ಪದಗಳಾಗಿ ಹೊರಹೊಮ್ಮಿರಬೇಕು. ಯಾವುದೇ ಕರ್ತವ್ಯದ ತುರ್ತು ಕಹಳೆಯಿಲ್ಲದೆ ನನ್ನ ಮನಸ್ಸು ಆರಾಮವಾಗಿತ್ತು.

ಜೀರುಂಡೆಗಳ ತಾನಕ್ಕೆ ಮಿಣುಕು ಹುಳಗಳ ನರ್ತನಕ್ಕೆ ತಕ್ಕಂತೆ ಕೇಳಿಯೂಕೇಳದಂತಿದ್ದ (ಯಾರದೋ ರೇಡಿಯೋದಲ್ಲಿ ಪ್ರಸಾರವಾಗುತ್ತಿದ್ದ) ಹಿಂದೀ ಹಾಡಿನ ರಾಗ-ಭಾವಕ್ಕೆ ಮಣಿಯುತ್ತ, ಭಾರತದ ಸಾಮಾನ್ಯ ಹಳ್ಳಿಯೊಂದರ ರಾತ್ರಿಯ ವಿಶಿಷ್ಟ ನೀರವತೆಯಲ್ಲಿ ತೂಗಿಕೊಳ್ಳುತ್ತಾ ಅದು ಎಚ್ಚರದ ಕನಸು ಕಾಣುತ್ತಿತ್ತು.

ಈ ಅಸಮಾನ್ಯ ತಂದ್ರಿಗೆ ಭಂಗ ತಂದದ್ದು ಯಾರದೋ ಕೈಯಿಂದ ಜಾರಿ ಬಿದ್ದ ಊಟದ ತಟ್ಟೆಯ ಸದ್ದು. ಇಂತಹ ನಿರಾಳದ ರಾತ್ರಿಯನ್ನು ಕಂಡಿದ್ದು ಯಾವ ಜನ್ಮಾಂತರದಲ್ಲೋ ಎನಿಸಿ, ಈ ಒಂದು ತಿಂಗಳ ಕ್ಷಣಗಳನ್ನು ನೂರು ಜನ್ಮಗಳಿಗಾಗುವಂತೆ ಸವಿದುಬಿಡಬೇಕೆಂದು ನಿರ್ಧರಿಸಿದೆ. ಶರೀರದ ಅಗತ್ಯಗಳಿಗೆ, ಊಟ ನಿದ್ರೆಗೆ ಮನಸ್ಸನ್ನು ಒಡಂಬಡಿಸಿ ಒಳನಡೆದ.

ಬೆಳಗಿನ ಜಾವ ಐದು ಗಂಟೆಗೆಲ್ಲಾ ಚಾಯ್ ಬೆಹನ್‌ಜೀ ಉಠೋ ಉಠೊ ಎಂದು ಕೈಗೆ ಬೆಡ್‌ಟೀ ಕೊಟ್ಟು ಎಬ್ಬಿಸಿದವರನ್ನು ಎಲ್ಲರೂ ಮನಸಾರೆ ಹರಸುವವರೇ. ಈ ಸುಖದ ಸುಪ್ರಭಾತ ಭಾರತದ ಗಡಿಯವರೆಗೂ! ಶಂಕರನ ಅತಿಥಿಗಳಲ್ಲವೇ ನಾವು? ಪಾರ್ವತಿಯ ತವರಿನವರು ತೋರಿದ ಮರ್ಯಾದೆ. ಈ ಬೆಳಗು ಗುಜರಾತಿ ಯಾತ್ರಿಗಳ ಸಂಭ್ರಮ ಹೆಚ್ಚಿ ಮಿಕ್ಕವರಲ್ಲೂ ಹರಡಿಕೊಂಡಿತ್ತು. ಕಾರಣ, ಪ್ರಸಿದ್ಧ ನಾರಾಯಣಾಶ್ರಮವನ್ನು ಇಂದು ಬೆಳಗ್ಗೆಯೇ ಭೇಟಿ ಮಾಡುವವರಿದ್ದೆವು. ಅದಕ್ಕಾಗಿ ಆರು ಕಿ.ಮೀ. ಹೆಚ್ಚಿನ ನಡಿಗೆ ಇಂದಿನ ಚಾರಣಕ್ಕೆ. ಬೆಳಗ್ಗೆ ಆರು ಗಂಟೆಗೆ, ಇನ್ನೂ ಮುಸುಕಿದ್ದ ಮಂಜಿನಲ್ಲೇ ನಡೆಯಲಾರಂಭಿಸಿದೆವು. ಮೂರು ಕಿ.ಮೀ.ನ ಏರು ದಾರಿಯನ್ನು ಕ್ರಮಿಸಿದೆವು. ಥಾನೀಧಾರ್ ಬೆಟ್ಟದ ಹತ್ತುವಿಕೆಗೆ ಹೋಲಿಸಿದರೆ ಇದು ಮಕ್ಕಳಾಟದಂತಿತ್ತು. ಇಂದಿನ ಒಟ್ಟು ನಡಿಗೆ ೧೪ ಕಿ.ಮೀ. ಇದ್ದು ಮಧ್ಯೆ ನಾರಾಯಣಾಶ್ರಮದಲ್ಲಿ ಎರಡು ಗಂಟೆ ಕಾಲ ನಿಲ್ಲುವುದೆಂದಿತ್ತಾಗಿ ಪರಿಸರವನ್ನು ವೀಕ್ಷಿಸುತ್ತಾ ನಿಧಾನದಲ್ಲಿ ಸಾಗಿತ್ತು ಸ್ಥೂಲಕಾಯರ ಗುಂಪು. ನಮ್ಮ ಜೊತೆಯಲ್ಲೇ ನಡೆದಿದ್ದ ಭವಾನಿಸಿಂಗ್ ಇಂದು ಕೇವಲ ಪೋನಿವಾಲಾನಾಗದೆ ಗೆಳೆಯನಾಗಿಹೋಗಿದ್ದ. ಹದಿನೆಂಟರ ಈ ಯುವಕ ಧಾರ್ಚುಲಾದ ಶಾಲೆಯಲ್ಲಿ ಹನ್ನೊಂದನೇ ಇಯತ್ತೆಯಲ್ಲಿದ್ದ ವಿದ್ಯಾರ್ಥಿ. ತಂದೆಯ ವರಮಾನ ಸಾಲದೆಂದು ಈ ಯಾತ್ರಾಕಾಲದ ನಾಲ್ಕು ತಿಂಗಳು ಕುದುರೆ ನಡೆಸುವ ಕಾಯಕಕ್ಕಿಳಿದಿದ್ದ. ಅವನ ರೀತಿ ನೀತಿ ಶಾಲೆಯಿಂದ ಖಾಯಂ ರಜೆಯಲ್ಲಿದ್ದಂತಿತ್ತು. ಚುರುಕಿನ ಭವಾನಿಸಿಂಗ್ ಹಳ್ಳಿಹಾಡುಗಳ ಸರದಾರನೇ! ಹರೆಯದ ಹುಡುಗಿಯರನ್ನು ಕುರಿತಾದ ಹಾಡುಗಳ ಖಜಾನೆಯೇ ಇವನಲ್ಲಿತ್ತು. ಸಾಲುಮುದಕ್ಕೆ ಸೊಗಸಾಗಿ ಡ್ಯಾನ್ಸ್ ಮಾಡುವನೆಂದು ಅವನ ಜೊತೆಗಾರರ ಶಿಫಾರಸು. ಮನಕ್ಕೊಪ್ಪುವ ಜಾನಪದ ನೃತ್ಯವೋ, ನಾವೂ ಸೇರಬಹುದಾದ ಹಳ್ಳಿ ಕುಣಿತವೋ ಅಥವಾ ಇಂದಿನ ಎಳೆಯರ ಪಾಶ್ಚಾತ್ಯ ರೀತಿಯ ಮೈಕೈಕಾಲಿನ ಒದರಾಟವೋ ಕಾದು ನೋಡಬೇಕಾಗಿತ್ತು. ನನ್ನ ಕೋರಿಕೆಯಂತೆ ಐದು ಹಳ್ಳಿ ಹಾಡುಗಳನ್ನು ಹೇಳಿಕೊಡುವನೆಂದು ಭಾಷೆಯಿತ್ತ. ಹಾಗೆಯೇ ನಾರಾಯಣಾಶ್ರಮವನ್ನು ತಲುಪುವ ವೇಳೆಗೆ ಒಂದು ಹಾಡಿನ ಪಲ್ಲವಿ, ಒಂದು ಚರಣದ ಸ್ವರಧಾಟಿಯನ್ನು ಕಲಿಸಿದ.

ನಾರಾಯಣಾಶ್ರಮದ ಹೊರಬಾಗಿಲಿನಲ್ಲೇ ಬಣ್ಣ ಬಣ್ಣದ ಹೂಗಳ ಕೈತೋಟ ನಮ್ಮನ್ನು ಸ್ವಾಗತಿಸಿತು. ಎರಡೂ ಕಡೆ ಸಮೃದ್ಧವಾಗಿ ಬೆಳೆದು ನಿಂತ ಪೈರು, ಹಣ್ಣಿನ ಗಿಡ ಮರಗಳು. ಅವುಗಳ ಮಧ್ಯೆ ನಡೆದು ಮೇಲಕ್ಕೆ ಹೋದರೆ ಗಾರೆಯ ನೆಲದ ಅಂಗಳ. ಅದರ ಅಂಚಿನ

ಜಗಲಿಯಲ್ಲಿ ಕೈಸಾಮಾನುಗಳನ್ನಿರಿಸಿ, ಕೈಕಾಲುಗಳನ್ನು ತೊಳೆದು ಮೇಲಿನ ಮಜಲಿಗೆ ಹತ್ತಿದೆವು. ಸುತ್ತಲೂ ತಲೆಬಾಗಿ ವಂದಿಸುತ್ತಿದ್ದ ಮತ್ತೊಂದು ಸುಂದರ ಹೂದೋಟ. ಇದರ ನಡುವೆ ಪೂರ್ವಾಭಿಮುಖವಾಗಿ, ಬೆಳಗಿನ ಬಿಸಿಲಿನಲ್ಲಿ ತಾನೂ ಒಂದು ದೊಡ್ಡ ಹೂವಿನಂತೆ ಶೋಭಿಸುತ್ತಿದ್ದ ಎರಡಂತಸ್ತಿನ ಭವನ. ಆಶ್ರಮದ ಸುತ್ತಲೂ ಬೆಳೆದು ನಿಂತ ವೃಕ್ಷರಾಜಿ. ಆಶ್ರಮದ ಮುಂಭಾಗ ಹೂಬಿಸಿಲಿನಲ್ಲಿ ಮಿಂದು ವಾತಾವರಣವೇ ಹೂಮನಸಿನದಾಗಿತ್ತು.

೯೦೦೦ ಅಡಿಗಳೆತ್ತರದ ಪರ್ವತದ ನೆತ್ತಿಯ ಮೇಲಿನ ಒಂದೆಕರೆ ವಿಸ್ತಾರದ ಬಯಲಿನಲ್ಲಿ ನಾರಾಯಣಾಶ್ರಮ. ಪರ್ವತವನ್ನು ಹಾವಿನಂತೆ ಅಂಕುಡೊಂಕಾಗಿ ಬಳಸಿ ಭೋರ್ಗರೆದು ಹರಿಯುವ ಕಾಳೀ ನದಿಯು ೫೦೦೦ ಅಡಿಗಳ ಪ್ರಪಾತವನ್ನು ನಿರ್ಮಿಸಿದೆ. ಆಶ್ರಮದ ಅಂಚಿನಿಂದ ಆರಂಭವಾಗುವ ಗದ್ದೆಯ ಮಜಲುಗಳು ಇಳಿದಿಳಿದು -೫೦೦೦ ಅಡಿಗಳಷ್ಟು ಇಳಿದು ಕಾಳೀ ನದಿಯ ತಟದಲ್ಲಿ ಮುಗಿಯುತ್ತವೆ. ಕಾಳೀ ನದಿಯ ಆಚಿನ ದಡದ ನೇಪಾಳದ ಸರಹದ್ದಿನಲ್ಲಿ ಮುಗಿಲಿಗೆದ್ದ ಹಿಮಚ್ಛಾದಿತ ಪರ್ವತ ಸಾಲು. ಬಲು ರಮ್ಯ ನೋಟ. ೧೯೩೬ ರಲ್ಲಿ ಕರ್ನಾಟಕದ ಸಂತ ನಾರಾಯಣಸ್ವಾಮಿಗಳಿಂದ ಸ್ಥಾಪಿತವಾದಾಗಿನಿಂದಲೂ ಕೈಲಾಸ ಯಾತ್ರಿಗಳು ಈ ಆಶ್ರಮಕ್ಕೆ ಅವಶ್ಯ ಭೇಟಿ ನೀಡುತ್ತಾರೆ. ೧೯೬೦ರಿಂದ ೧೯೮೧ರವರೆಗೆ ಭಾರತ-ಚೀನಾ ಗಡಿಯನ್ನು ಮುಚ್ಚಿದ್ದಾಗ ಯಾತ್ರಿಗಳು ಆಶ್ರಮದವರೆಗೆ ಬಂದು ಕೈಲಾಸ ಯಾತ್ರೆಯ ಫಲಪ್ರಾಪ್ತಿಯಾಯಿತೆಂದು ಮರಳುತ್ತಿದ್ದರಂತೆ. ಇಲ್ಲಿನ ನೋಟ, ಮಂಗಳಮಯ ವಾತಾವರಣ ನಿಜಕ್ಕೂ ಕೈಲಾಸಪ್ರಾಯ. ಇಲ್ಲಿನ ಅಂಚೆಯ ಮೊಹರಿನಲ್ಲೂ ಕೈಲಾಸ್ ಎಂದೇ ಹೆಸರಿದೆ. ಆಶ್ರಮದ ಪ್ರಮುಖ ಭವನದ ಕೆಳ ಅಂತಸ್ತಿನಲ್ಲಿ ಅತಿಥಿಗೃಹವಿದ್ದು ಮೇಲಂತಸ್ತಿನಲ್ಲಿ ಪೂಜಾಗೃಹ, ಅದಕ್ಕೆ ಸೇರಿದಂತೆ ಸಂಕೀರ್ತನಾ ಮಂದಿರದ ದೊಡ್ಡ ಹಜಾರ. ಹಿಂಬದಿಗೆ ಗ್ರಂಥಾಲಯ,ವಾಚನಲಾಯ. ಭವನದ ಎಡಕ್ಕೆ ಇರುವ ಒಂದು ಭಾಗದಲ್ಲಿ ಆಶ್ರಮದ ಅತಿಥಿಗಳು ಮಲಗುವ ಕೋಣೆಗಳು, ಇವುಗಳ ಹಿಂಬದಿಗೆ ಅಡುಗೆಯಕೋಣೆ ಊಟದ ಹಜಾರ, ಆಶ್ರಮ ವಾಸಿಗಳ ಕೋಣೆಗಳು. ಕೆಳಗಿನ ಮಜಲಿನಲ್ಲಿ ಸ್ನಾನಗೃಹಗಳು, ಶೌಚಾಲಯಗಳು. ಆಶ್ರಮ ಸ್ಥಾಪಕರಾದ ಸ್ವಾಮಿನಾರಾಯಣರು ಸುತ್ತಲಿನ ಹಳ್ಳಿಗಳಲ್ಲೂ ಅನೇಕ ಸುಧಾರಣೆಗಳನ್ನು ತಂದುದೇ ಅಲ್ಲದೆ ಹಲವು ವಿದ್ಯಾಲಯಗಳು, ಎರಡು ಆಸ್ಪತ್ರೆಗಳು, ಅನೇಕ ಪ್ರಾಥಮಿಕ ಶಾಲೆಗಳನ್ನು ಪ್ರಾರಂಭಿಸಿ ಹಳ್ಳಿಗರ ಉದ್ಧಾರಕ್ಕಾಗಿ ಹಗಲಿರುಳು ಶ್ರಮಿಸಿದರು. ಅವರ ಕಾರ್ಯಗಳನ್ನು ನಿಷ್ಠೆಯಿಂದ ಆಶ್ರಮದ ಜೀವಾಳದಂತಿರುವ ಶ್ರೀ ಗಂಗೋತ್ರಿಮಾತಾ ಮುಂದುವರಿಸಿರುವರು. ಆದರ್ಶ ಶಿಕ್ಷಕಿ ಎಂದು ರಾಷ್ಟ್ರಪತಿಯವರಿಂದ ಸನ್ಮಾನಿತರಾದ ಸಾಧ್ವಿ. ಇವರ ಸಮಕ್ಕೆ ದುಡಿಯುತ್ತಿರುವವರು ಈಗಿನ ಸ್ವಾಮಿಜೀ ತದ್ರೂಪಾನಂದರು. ಗುಜರಾತಿನವರಾದ ಈ ಸ್ವಾಮಿಜಿಯವರದು- ಕೈಲಾಸ ಮಾನಸ ಯಾತ್ರೆ ಕೇವಲ ಶ್ರೀಮಂತ ವರ್ಗಕ್ಕೆ ಮೀಸಲಾಗಿ ಸಾಮಾನ್ಯ ವರ್ಗದವರು ವಂಚಿತರಾಗಿದ್ದಾರೆ. ಅಲ್ಲದೆ, ಸರಕಾರದ ವೇಳಾಪಟ್ಟಿಯನುಸಾರ, ನಿಗದಿತ ಸ್ಥಳಗಳನ್ನು ಮಾತ್ರ ಸಂದರ್ಶಿಸಿ ಮರಳುವ ಈ ಯಾತ್ರೆಯಲ್ಲಿ ಯಾತ್ರಿಯು ಕುರಿಯಂತೆ. ಆದಷ್ಟು ಬೇಗನೇ ಗಡಿ ನಿಯಮಗಳನ್ನು ತೆಗೆದು ದಾರಿಯನ್ನು ಮುಕ್ತಗೊಳಿಸಿ ಸಕಲರಿಗೂ ಯಾತ್ರಾನುಕೂಲ ಮಾಡಿಕೊಡಬೇಕು. ಎಂಬ ಆಗ್ರಹ.

ಗಂಗೋತ್ರಿ ಮಾತಾ ಮತ್ತು ಸ್ವಾಮಿ ತದ್ರೂಪಾನಂದರ ಭೇಟಿ ಮಾಡಿ, ಸಜ್ಜಿಗೆಯ ಪ್ರಸಾದವನ್ನು ಪಡೆದು, ಕಂತೆಬೊಂತೆಗಳನ್ನೇರಿಸಿ 'ಸಿರ್ಖಾ ಪಾಯಿಂಟ್' ಕಡೆಗೆ ಹೊರಟೆವು.

೬೦೦೦ ಅಡಿಗಳಿಂದ ೧೨೪೪೦ ಅಡಿಗಳಷ್ಟು ಏರು ದಾರಿಯಲ್ಲಿ ತಲೆಯ ಮೇಲೆ ಹಸಿರು ಚಪ್ಪರದಂತೆ ಬೆಳೆದಿದ್ದ ವೃಕ್ಷ ಸಮೂಹ. ಅವುಗಳ ಕೆಳಗೆ, ಪುಟ್ಟ ಗಿಡಗಳಲ್ಲಿ, ಹುಲ್ಲಿನ ಮೇಲೆ, ಮರಗಳಿಗೆ ಹಬ್ಬಿದ್ದ ಬಳ್ಳಿಗಳಲ್ಲಿ ಅರಳಿದ ವಿವಿಧ ವರ್ಣಗಳ ವಿವಿಧ ಹೂವುಗಳು. ದಾರಿ ಸವೆದುದೇ ತಿಳಿಯದಂತೆ ಮೂರುವರೆ ಸಾವಿರ ಅಡಿಗಳಷ್ಟು ಮೇಲೇರಿದ್ದೆವು. ನಮ್ಮ ಕಣ್ಣಿಗೆ ದಾರಿಯ ದೂರ ಎತ್ತರ ಕಾಣಲಿಲ್ಲವಾದರೂ ಕಾಲಿನ ಮೀನಖಂಡಗಳಿಗೆ, ಎದೆಯ ಪಕ್ಕೆಗಳಿಗೆ, ಎಲ್ಲಕ್ಕಿಂತ ಮಿಗಿಲಾಗಿ ಎರಡೂ ಕಪಾಲಗಳಿಗೆ ಕಬ್ಬಿಣದ ಪಟ್ಟಿಯಿಂದ ಬಿಗಿದ ಅನುಭವ, ಸಹಿಸಲಾಗದ ತಲೆನೋವು. ಆದರೆ, ಸಿರ್ಖಾ ಪಾಯಿಂಟ್‌ನ ದಿಬ್ಬದ ಮೇಲೆ ಅಂಗಾತ ಮಲಗಿದ ಐದೇ ನಿಮಿಷದಲ್ಲಿ ಕಾಲುಗಳ ಮತ್ತು ಎದೆಯ ಬಿಗಿತ ಹೋಯಿತಾದರೂ ಎರಡೂ ಕಪಾಲಗಳಲ್ಲಿನ ನರಗಳ ಮಿಡಿತ ಹಾಗೆಯೆ ಇತ್ತು. ನಿಜವಾಗಿಯೂ ಸಿರ್ ಖಾ ನೇ ವಾಲೀ ತಲೆ ತಿನ್ನತೊಡಗಿದ ಏರು.

ಸಿರ್ಖಾ ಪಾಯಿಂಟ್ ಸುತ್ತಲಿನ ರಮ್ಯ ನೋಟವನ್ನು ತಿರುತಿರುಗಿ ನೆನಪಿನ ಗೋಡೆಯಲ್ಲಿ ಚಿತ್ರಿಸಿಕೊಂಡೆ. ಕಾಲಡಿಯಿಂದಿಳಿದು ಹೋಗಿದ್ದ ಬೆಟ್ಟಗಳ ಮೇಲೆಲ್ಲಾ ದೃಷ್ಟಿ ಹರಿಸುತ್ತಾ ಬಹುದೂರದ ದಿಗಂತದವರೆಗೆ ಬಾನಾಡಿಯಂತೆ ಹಾರಾಡಿ ಬಂದೆ. ಲಘು ಹಿಮಾಲಯ ಶ್ರೇಣಿಯ ಈ ಭಾಗದ ಬೆಟ್ಟಗಳೆಲ್ಲವೂ ಸರಿ ಸುಮಾರು ಒಂದೇ ಮಟ್ಟಸವಾಗಿದ್ದು ಮೇಲಿನಿಂದ ನೋಡಿದರೆ ಸಣ್ಣ ಸಣ್ಣದಾಗಿ ವಿಭಾಗವಾದ ಪ್ರಸ್ಥಭೂಮಿಯೆನಿಸುವುದು.

ನಿರ್ಮಲಾರೊಂದಿಗೆ ಭವಾನಿಸಿಂಗ್ ಬಹು ಮುಂದೆ ಹೊರಟು ಹೋಗಿದ್ದ. ಪಾಯಿಂಟ್‌ನಿಂದ ಐದಾರು ಜನ ಒಟ್ಟಿಗೆ ಇಳಿಯಲು ಮೊದಲಿಟ್ಟರೂ ಅರ್ಧ ಗಂಟೆಯಲ್ಲೇ ನನ್ನ ನಿಧಾನದ ನಡಿಗೆಯಿಂದಾಗಿ ನಾನು ಮತ್ತೆ ಒಬ್ಬಂಟಿ. ಎರಡೂ ಕಡೆ ಹಬ್ಬಿದ್ದ ಕಾಡು. ಹಕ್ಕಿಗಳ ಚಿಲಿಪಿಲಿ ವಿಭಿನ್ನ ಕೂಗುಗಳು.ನನ್ನ ಬೂಟು ಕಾಲಿನ ಥಪ್ ಥಪ್ ಸದ್ದಿನಡಿ ಒಣಗಿದೆಲೆಗಳ ಪರಪರ. ಹಠಾತ್ತನೆ ನನ್ನ ಕೈಯಿಂದ ಊರುಗೋಲನ್ನು ಸೆಳೆದುಕೊಂಡ ಕೈ. ಕಿಟ್ಟನೆ ಕಿರುಚಿದೆ. ಎಲ್ಲಿಡೆ ಗಹಗಹಿಸಿ ನಗುವ ಸದ್ದು. ಕಿವಿಯ ಬಳಿಯೇ ಹೂಹೂ ಎಂದು ವಿಕಾರವಾಗಿ ಕಿರುಚಿದ ಮುಖ. "ಡರ್‌ಗಯೀ ಬೆಹನ್‌ಜೀ" ಎಂದು ದಾರಿಗಡ್ಡವಾಗಿ ಹಾರಿ ಬಂದ ಭವಾನಿಸಿಂಗ್. ಕುಕ್ಕರಿಸಿ ಕುಳಿತೆ. ಆಗ ಗೋಚರಿಸಿದರು ಪಕ್ಕದ ಪುಟ್ಟ ಬಯಲಿನಲ್ಲಿ ಕುಳಿತು ಮಲಗಿ ವಿರಮಿಸುತ್ತಿದ್ದ ಕೆಲವು ಪೋರ್ಟರ್, ಪೋನೀವಾಲಾಗಳು. "ಇನ್ನೊಮ್ಮೆ ಈ ರೀತಿ ಹೆದರಿಸಿದರೆ ಜ್ಞಾನತಪ್ಪಿ ಬೀಳುವವಳೇ. ಆಗ ನೀನೇ ನನ್ನನ್ನು ಹೊತ್ತು ಒಯ್ಯಬೇಕಾಗುವುದು ಎಚ್ಚರ." ಎಂದೆ. "ನೀನೇನೂ ಜ್ಞಾನ ತಪ್ಪಿ ಬೀಳಬೇಕಿಲ್ಲ, ಈಗಲೇ ಹೇಳು ಎತ್ತಿ ಒಯ್ಯುತ್ತೇನೆ. ಇಲ್ಲಾ ನನ್ನ ಕುದುರೆ ತರುತ್ತೇನೆ." ಎಂದ. 'ಹೌದಪ್ಪ ಹನುಮಂತ' ಎಂದು ನಕ್ಕು ಅವರಿದ್ದ ಜಾಗಕ್ಕೆ ಹೋಗಿ ಕುಳಿತೆ-ಕಾಲಿನ ನಡುಕ ಹೋಗಲೆಂದು. ಆ ಕ್ಷಣದಿಂದ ಭವಾನಿಸಿಂಗ್‌ನಂತೆ ಇತರ ಸಿಂಗ್‌ಗಳೂ ನನ್ನ ಬಂಟರೇ ಆಗಿಹೋದರು.(ಭೋಟಿಯಾ ಗಂಡಸರೆಲ್ಲರ ಹೆಸರೂ ಸಿಂಗ್ ಎಂದೇ ಕೊನೆಗೊಳ್ಳುತ್ತದೆ.) ನಗೆಚಾಟಿಕೆಯಲ್ಲಿ ಮಾಡಿದ ಒಂದು ತಮಾಷೆ, ಅದಕ್ಕೆ ನಕ್ಕು ಹಾಸ್ಯದಲ್ಲೇ ಉತ್ತರಿಸಿದ ಪ್ರತಿಕ್ರಿಯೆ-ಅವರೆಲ್ಲಾ ಕೂಲಿಯಾಳುಗಳಾಗಿ ಉಳಿಯದೆ ನನ್ನ ಹಿಂದೆಮುಂದೆ ನಡೆದಾಡುವ ಗೆಳೆಯರ ಬಳಗವೇ ಆಗಿದ್ದರು.

ತಣ್ಣಗಿನ ಕಾಡಿನಲ್ಲಿ ನುಸುಳುತ್ತ ಸುಮಾರು ೪೦೦೦ ಅಡಿಗಳಷ್ಟು ಕೆಳಗಿಳಿದು, ೮೪೫೦

ಅಡಿಗಳೆತ್ತರದಲ್ಲಿರುವ ಸಿರ್ಖಾ ಶಿಬಿರವನ್ನು ತಲುಪಿದ ಕಡೆಯ ನಾಲ್ಕು ಯಾತ್ರಿಗಳಲ್ಲಿ ಒಬ್ಬಳಾಗಿದ್ದೆ. ಪಾಂಗುಪಿನಲ್ಲಾದಂತೆ ಸುಸ್ತಾಗಿ ಕೂರದೆ, ದೇಹ ಮನಸ್ಸು ಆರಾಮವಾಗಿತ್ತು. ಬಿಸಿಯೂಟವಾದ ಮೇಲೆ ಸಣ್ಣಗಿದ್ದ ತಲೆನೋವೂ ಮಂಗಮಾಯ. ಸರತಿಯಲ್ಲಿ ನಿಂತು ಬಚ್ಚೆಯೊಗೆದು ಸ್ನಾನ ಮಾಡಿ ಹೊರ ಬಂದಾಗ ಗಂಟೆ ನಾಲ್ಕು. ಸಂಜೆ ಬಿಸಿಲು ತಣ್ಣೀರಿನಲ್ಲಿ ಮಿಂದ ಮೈಗೆ ಆಪ್ಯಾಯಮಾನವಾಗಿತ್ತು. ಎದುರಿನ ಪರ್ವತಗಳ ಮೇಲೂ ಬಿಸಿಲಿನಾಟ ನಡೆದಿತ್ತು. ಬಿಸಿಲು ಎಲ್ಲರನ್ನೂ ಹೊರಗಿನ ಅಂಗಳದಲ್ಲೇ ಕುಳಿತಿರುವಂತೆ ಮಾಡಿತ್ತು. ಐದು ಗಂಟೆಯ ಹೊತ್ತಿಗೆ, ಯಾವ ಮುನ್ಸೂಚನೆಯನ್ನೂ ಕೊಡದೆ ಎದುರಿನ ದಿಬ್ಬದ ಓಂದೆ ಎದ್ದಿತು ಕಾಮನ ಬಿಲ್ಲು. ಅದು ಬಿಲ್ಲಾಗಿ ಬಾನಿನಲ್ಲಿ ಬಾಗದೆ ಸಪ್ತ ವರ್ಣಗಳ ಸ್ತಂಭವಾಗಿಯೇ ನಿಂತಿತು–ಒಂದು ಕೊನೆಯಲ್ಲಿ ಮಾತ್ರ ಮೂಡಿ. ಕಾಮನಿಗೆ ಇಂದು ಬಿಲ್ಲು ಬೇಡವಾಗಿ ತನ್ನ ಜೊನ್ನ ದಂಡವನ್ನು ಮಾತ್ರ ತೋರಿಸಿದ್ದನು. ಏಳು ಬಣ್ಣಗಳೂ ಸ್ಫುಟವಾಗಿದ್ದು, ದಟ್ಟವಾಗಿದ್ದ ಕಂಭದ ಚಿತ್ರವನ್ನಿಳಿಸಲು ಎಲ್ಲರ ಕೈಯಲ್ಲೂ ಕ್ಯಾಮರಾ. ಈ ದೃಶ್ಯವನ್ನು ಸರಿಯಾಗಿ ತೋರಿಸುವ ಚಿತ್ರ ಒಂದಾದರೂ ಬರಲೆಂದು ಐದಾರು ಸಲ ತೆಗೆದವರೂ ಇದ್ದರು. ಸರಿಯಾದ ಕೋನ ಅರಸುತ್ತ ಕುದುರೆಗಳನ್ನು ಕಟ್ಟಿದ್ದ ದಿಬ್ಬಕ್ಕೆ ನಡೆದವರು ಕೆಲವರು.

ಸೂರ್ಯ ಮುಳುಗುತ್ತಿದ್ದಂತ ಸಂಜೆಯ ಹೊನ್ನ ಕಾಂತಿ ದೂರದ ಧವಳಗಿರಿ, ಅನ್ನಪೂರ್ಣಾ ಶಿಖರಗಳ ಮೇಲಿದ್ದ ಮಂಜಿನ ಮುಸುಕನ್ನು ಸರಿಸಿ ಒಂದೊಂದೇ ಶಿಖರಕ್ಕೆ ಒಕುಳಿಯೆರಚಿತು. ನಾಲ್ಕೈದು ನಿಮಿಷಗಳಲ್ಲಿ ಆ ದಿಕ್ಕಿನಲ್ಲಿದ್ದ ಎಲ್ಲ ಶಿಖರಗಳೂ ಅರುಣಕಾಂತಿಯಲ್ಲಿ ಬೆಳಗಿದವು. ಹತ್ತೇ ನಿಮಿಷದ ರಸಘಳಿಗೆಗಳು. ನಂತರ ನಿಧಾನವಾಗಿ, ಕತ್ತಲಾವರಿಸಿದಂತೆ ಒಂದೊಂದಾಗಿ ಶಿಖರಗಳು ಆಕಾಶದ ಬೂದು ಬಣ್ಣದಲ್ಲಿ ಐಕ್ಯವಾಗಿ ಹೋದವು.

ನೇಪಾಳಿಗಳು ಅದೆಷ್ಟು ಭಾಗ್ಯವಂತರು! ಇಂತಹ ಅಮೋಘ ದೃಶ್ಯಗಳನ್ನು ಕೊಡುವ ಎತ್ತರೆತ್ತರದ ಶಿಖರಗಳನ್ನೆಲ್ಲಾ ತಬ್ಬಿಕೊಂಡವರು. ಪೂರ್ವದಕ್ಷಿಣ ದಿಕ್ಕಿಗೆ ಹಿಮಾಲಯದ ಬೆನ್ನೆಲುಬಿನಂತೆ ಬೆಳೆದಿರುವ ಮೂರನೇ ಶ್ರೇಣಿ 'ಬೃಹತ್ ಹಿಮಾಲಯ' ನೇಪಾಳದಲ್ಲಿ ಅತ್ಯಂತ ಎತ್ತರಕ್ಕೆ ಏರಿದ್ದು, ಪ್ರಪಂಚದ ಹದಿನಾಲ್ಕು ಅತ್ಯುನ್ನತ ಶಿಖರಗಳಲ್ಲಿನ ಒಂಭತ್ತು ಶಿಖರಗಳು ಇಲ್ಲೇ ಇವೆ. (ಮ್ಯಾಪ್–೨) ವಿದೇಶಿಯರು ಆಗಾಗ್ಗ ನಡೆಸುವ ಪರ್ವತಾರೋಹಣಗಳಿಗೆ ನೇಪಾಳವೇ ಮೊದಲ ಆಯ್ಕೆ. ನೇಪಾಳಿಗಳಿಗೆ ವಿದೇಶೀ ಹಣದ ಗಂಟು. ಪ್ರವಾಸೋದ್ಯಮ ಇಲ್ಲಿಯ ಜೀವಾಳ.

ನಿಸರ್ಗದಾಟವನ್ನು ಮೊದಲಬಾರಿಗೆ ಕಂಡವರಂತೆ ಅರ್ಧ ಫಿಲ್ಮ್ ರೀಲು ಮುಗಿಸಿದೆವು. ಸಂಜೆಯ ಕಾರ್ಯಕ್ರಮ ಮುಗಿದು, ಶಿಬಿರದ ವರಾಂಡದಲ್ಲಿ ಕುಳಿತದ್ದಾಗಲೇ ಧಾರ್ಚುಲಾದಿಂದ ಕುದುರೆ ತಂದವನೊಬ್ಬ ಅಳುತ್ತಾ ಬಂದು ೬೫ ವರ್ಷದ ಗುಜರಾತಿ ಯಾತ್ರಿ ಶಾಸ್ತ್ರಿಯವರನ್ನು ಕಾಣಬೇಕೆಂದ. ಎರಡು ದಿನದ ಕೂಲಿಯನ್ನು ಚುಕ್ತಾ ಮಾಡಿದರೆ ಮರಳಿ ಹೋಗುವೆನೆಂದ. ಕಾರಣ, ಶಾಸ್ತ್ರಿಯವರನ್ನು ತಂದ ಕುದುರೆ ಹುಲ್ಲು ಮೇಯುವಾಗ ಕಾಲು ಜಾರಿ ಪರ್ವತದ ಬಗಲಿನಿಂದ ಕಳಗೆ ಉರುಳಿ ಹೋಯಿತಂತೆ–ಪಾತಾಳ ಲೋಕಕ್ಕೇ! ನಮ್ಮೆಲ್ಲರಲ್ಲೂ ಒಮ್ಮೆ ಮೈಚಳಿ ಬಂದು ದೇಹ ನಡುಗಿತು. ನಾವು ಕುಳಿತಾಗ ಕಾಲು ಜಾರಿದರೆ? ಕಲ್ಪನೆಯಿಂದಲೇ ಮತ್ತೊಮ್ಮೆ ಮೈ ಬೆವರಿತು. ಮಾತಿಲ್ಲದೆ ಒಬ್ಬೊಬ್ಬರೇ ಒಳ ನಡೆದೆವು. ಪ್ರಾಣಿಗಳೆಂದರೇ ಭಯ ಬೀಳುತ್ತಿದ್ದ ನನಗ ಸುದ್ದಿ ಕೇಳಿ ರಾತ್ರಿಯೆಲ್ಲಾ ಕುದುರೆಯ ಕೆನೆತವೇ ಕೇಳಿಸುತ್ತಿತ್ತು. ನಿದ್ದೆಯಲ್ಲಿ ಅದೆಷ್ಟು ಬಾರಿ

ಕುದುರೆಯೊಂದಿಗೆ ನಾನು ಪ್ರಪಾತಕ್ಕೆ ಬಿದ್ದೆನೋ ಲೆಕ್ಕವಿಲ್ಲ.

ನಿನ್ನೆ ಸಂಜೆ, ಕುದುರೆ ಕಾಲುಜಾರಿ ಸತ್ತ ಕಾರಣವೋ ಅಥವಾ ಎಲ್ಲರೂ ಶಿಬಿರವನ್ನು ಏಕಕಾಲದಲ್ಲಿ ಒಮ್ಮುಖವಾಗಿ ಬಿಡುವುದೊಳ್ಳೆಯದೆಂದೋ, ಇಲ್ಲವ ಕೈಲಾಸ ಯಾತ್ರೆಯೆಂದು ಭಕ್ತಿಪೂರ್ವಕವಾಗಿ ದಿನವನ್ನು ಆರಂಭಿಸುವುದಕ್ಕೊ ಹೊಸ ಕಾರ್ಯಕ್ರಮವೊಂದು ಆರಂಭವಾಯಿತು. ಇಂದು ಬೆಳಗ್ಗೆ ಎಲ್ಲ ಯಾತ್ರಿಗಳನ್ನೂ ಸಿರ್ಖಾ ಶಿಬಿರದಂಗಳದಲ್ಲಿ ಸಾಲಾಗಿ ನಿಲ್ಲಿಸಿ, ಮೃತ್ಯುಂಜಯ ಜಪ ಮಾಡಿ ನಂತರ ಒಂದೆರೆಡು ಸ್ತೋತ್ರಗಳನ್ನು ಹೇಳಿ ಮಹಾದೇವನ ಜಯಘೋಷದೊಂದಿಗ ಪ್ರಾತಃಕಾಲದ ಸಾಮೂಹಿಕ ಪ್ರಾರ್ಥನೆಯನ್ನು ಮುಗಿಸಿದ ನಂತರ ಚಾರಣಕ್ಕೆ ಆರಂಭಿಸಿದೆವು. ಈ ಕ್ರಮ ಮರಳಿ ದೆಹಲಿ ತಲುಪುವವರೆಗೂ ಒಂದು ದಿನವೂ ಬಿಡದೆ ನಡೆಸಿಕೊಂಡು ಬಂದ ಕಾರ್ಯಕ್ರಮವಾಯಿತು. ಚಿಕ್ಕವಳಿದ್ದಾಗ ಸ್ಕೂಲ್ ಟ್ರಿಪ್ ಹೊರಟ ದಿನಗಳನ್ನು ನೆನಪಿಸಿದ ಕಾರ್ಯಕ್ರಮವಿದು.

ನಿನ್ನೆಯ ಹಾಗೆ ನಡಿಗೆಯಲ್ಲಿ ಹಿಂದೆ ಬೀಳಬಾರದೆಂದು ಬೇಗನೆದ್ದು ಅವಸರಿಸಿ ತಯಾರಾಗಿ ಹೊರಬಂದು ನಿಂತವಳಿಗೆ ಸಿಕ್ಕ ಮೊದಲ ಸೂಚನೆ– "ನಿರ್ಮಲಾದೇವಿಯವರಿಗೇ ಭವಾನಿಸಿಂಗ್‌ನ ಕುದುರೆಯಿರಲಿ. ಅಭ್ಯಾಸವಾಗಿದೆ. ನಿನ್ನದೊಂದು ಬೇರೆಯೇ ಕುದುರೆ ಗೊತ್ತು ಮಾಡಿಕೊಳ್ಳುವುದು ಒಳ್ಳೆಯದು. ಇಲ್ಲಿನ ಚಾರಣದಲ್ಲಿಯೇ ನಿನ್ನ ಶಕ್ತಿಯೆಲ್ಲಾ ಖರ್ಚು ಮಾಡಿಬಿಟ್ಟರೆ ಕೈಲಾಸ–ಮಾನಸ ತಲಪುವಲ್ಲಿ ನಿತ್ರಾಣವಾಗುತ್ತದೆ. ಅಲ್ಲೇನೂ ನೋಡಲಾಗದೆ ಹೋದರೇ? ಅಲ್ಲದೆ, ಕುದುರೆ ಬಾಡಿಗೆಗೆ ಪಡೆಯಲು ಇದೇ (ಸಿರ್ಖಾ) ಕಡೆಯ ಹಳ್ಳಿ. ಮುಂದೆ ಬೇಕೆಂದರೂ ಸಿಗುವುದಿಲ್ಲ." ಎಂದು ಬಲವಂತದಲ್ಲಿ ಕುದುರೆಯೊಂದನ್ನು ಗೊತ್ತು ಮಾಡಿದವರು ಸಂಬಂಧ ನಿರ್ವಹಣಾಧಿಕಾರಿ ಸತೀಶ್ ಕುಮಾರ್. ಸಿರ್ಖಾ ಹಳ್ಳಿಯ ಯುವಕ ದಿವಾನ್‌ಸಿಂಗ್ ತನ್ನ ಕುದುರೆಯನ್ನು ತಂದು ನಿಲ್ಲಿಸಿದ. ಹಿಂದಿನ ರಾತ್ರಿಯ ಭಯವೇ ಇನ್ನೂ ಬಿಟ್ಟಿಲ್ಲದಾಗ ಇದೇನು ಒತ್ತಾಯವೆನಿಸಿತು. ಆದರೆ ಎರಡು ದಿನದ ಚಾರಣ ಪ್ರಯೋಗದಲ್ಲಿ ನನ್ನ ವೇಗದ ಮಿತಿಯೂ ಅರಿವಿಗೆ ಬಂದಿತ್ತು. ಮೊದಲ ಬಾರಿಗೆ ಕೈಹಿಡಿದವರು ಜೊತೆಗಿರಬೇಕೆನಿಸಿತು.

"ಈಗಲೇ ಕುದುರೆ ಹತ್ತುವ ಅಗತ್ಯವಿಲ್ಲ. ಒಂದೆರಡು ಕಿ.ಮೀ. ನಡೆದ ಮೇಲೆ ನೋಡೋಣ" ಎಂದವಳೇ ಹಿಂತಿರುಗಿ ನೋಡದೆ ನಡೆಯಲಾರಂಭಿಸಿದೆ. ಬಹು ಇಳಿಜಾರಿನ ಬೆಟ್ಟದ ಕಡಿದಾದ ಮಗ್ಗುಲಿನಲ್ಲಿ ಬೈತಲೆಯಂತೆ ಸೀಳಿ ಹೋದ ಕಾಲುದಾರಿಯೇ ಕೈಲಾಸಕ್ಕೆ ದಾರಿ! ದಾರಿ ಹಿಡಿದು ಹೋದರೆ ಹದಿನೈದು ದಿನದಲ್ಲಿ ಕೈಲಾಸ ದರ್ಶನ. ಕಾಲು ಜಾರಿದರೆ, ಎಡುವಿದರೆ ಮಂಜಿನ ತೆರೆ ಬಿದ್ದು ಕಾಣದಾಗಿ ದಾರಿ ತಪ್ಪಿದರೆ ಹದಿನೈದು ಸೆಕೆಂಡಿನಲ್ಲಿ ಕೈಲಾಸ ದರ್ಶನ! ಜೀವನದಲ್ಲಿಯೂ ಹೀಗೆಯೇ ತಾನೆ. ಮೂರು ಕಿ.ಮೀ ನಡೆದ ನಂತರ ಪರ್ವತದ ಮಗ್ಗುಲಿನಿಂದ ಸರಿದು ನೆತ್ತಿಗೆ ಬಂದುದ್ದರಿಂದ ಎಡಗಡೆಯ ಪ್ರಪಾತವೂ ಇಲ್ಲವಾಯಿತು. ದಿವಾನ್‌ಸಿಂಗ್ ಮತ್ತೊಮ್ಮೆ ನನ್ನ ಬಳಿ ಬಂದ. ಬೆಹನ್‌ಜೀ, ಈಗಲಾದರೂ ಕುದುರೆಯನ್ನು ಹತ್ತಿ. ಇಲ್ಲಿ ಕೆಳಗುರುಳುವ ಚಿಂತೆಯಿಲ್ಲ. ಇಂತಹ ಜಾಗದಲ್ಲಿ ಅಭ್ಯಾಸವಾದರೆ ಒಳಿತಲ್ಲವೇ? ದಿನಪೂರ ನಡೆದೇ ಹೋದರೆ ಕಾಲು ಊದಿಕೊಂಡು ಆಮೇಲೆ ಇಳಿಜಾರೋ ಪ್ರಪಾತವೋ ಏನಿದ್ದರೂ ಕುದುರೆಯಮೇಲೇ ಕುಕ್ಕರಿಸಬೇಕಾಗುತ್ತದೆ. ನೋಡಿ ಎಂದ. ನೀವು ಕುದುರೆಯನ್ನು ನೋಡಲೇ ಬೇಡಿ. ಸುತ್ತಲೂ

ನೋಡುತ್ತಿರಿ. ನನ್ನ ಬೆನ್ನಮೇಲಿದ್ದೇನೆಂದುಕೊಳ್ಳಿ. ಎಂಬ ಸಮಜಾಯಿಷಿ ಬೇರೆ! ಧೈರ್ಯ ಮಾಡಿ ಹತ್ತಿ ಕುಳಿತ ಹತ್ತೇ ನಿಮಿಷದಲ್ಲಿ ಇಳಿದದ್ದೂ ಆಯಿತು. ಮತ್ತೊಂದು ಕಿ.ಮೀ. ನಡೆದೆ. ನಂತರ ಕುದುರೆಯನ್ನು ಹತ್ತಿದವಳು ಜೀವ ಬಿಗಿಹಿಡಿದು ಅರ್ಧ ಗಂಟೆ ಬಿಡದೆ ಪಯಣಿಸಿ ರುಂಗ್‌ಲಿಂಗ್ ಪಾಯಿಂಟ್ ತಲುಪಿಯೇ ಬಿಟ್ಟೆ. ಕುದುರೆಯಿಂದಿಳಿದ ಮೇಲೆಯೇ ಇಹದ ಗಮನ. ರುಂಗ್‌ಲಿಂಗ್ ಪಾಯಿಂಟ್ ನಾಕಂಡ ಇಹವಂತಿರಲಿಲ್ಲ. ಸ್ವರ್ಗ ಲೋಕದ ತುಣುಕೇ ಇರಬೇಕೆನಿಸಿತು. ದೂರದೂರದವರೆಗೆ ಅಲೆಅಲೆಯಾಗಿ ಹಬ್ಬಿದ ಮಲೆಗಳು. ಅವುಗಳನ್ನು ಸೀಳುತ್ತಾ ಕೆಳಗಿಳಿದಿದ್ದ ಅಸಿಧಾರೆಯಂತಿದ್ದ ಜಲಧಾರೆಗಳು. ಈ ಜಲಧಾರೆಗಳಿಲ್ಲದೇ ಹೋಗಿದ್ದರೆ ಹಿಮಾಲಯ ಒಂದೇ ಒಂದು ಭಾರಿ ಪರ್ವತಾಕಾರದ ಅಡ್ಡಗೋಡೆಯಾಗಿರುತ್ತಿತ್ತೇನೋ. ಝರಿ, ನದಿ, ಜಲಪಾತಗಳಿಂದಾಗಿ ಈ ಭೂಭಾಗ ಅನೇಕ ಬೆಟ್ಟ ಪರ್ವತಗಳಾಗಿ ಬೆಳೆದು ನಿಂತಿವೆಯೆನಿಸಿತು. ನಮ್ಮ ಸಂಗಡ ಭೂವಿಜ್ಞಾನಿಯೊಬ್ಬರಿದ್ದಿದ್ದರೆ ಪ್ರತ್ಯಕ್ಷ ನೋಡಿದ ಸಂಗತಿಗೆ ವೈಜ್ಞಾನಿಕ ವಿವರಣೆಯೂ ದೊರೆತು, ಚಾರಣದ ಆನಂದ ದ್ವಿಗುಣವಾಗುತ್ತಿತ್ತು. ಇದರ ಬಗ್ಗೆ ಈ ಮೊದಲೇ ಓದಿದ್ದರೂ ಸಹಾಯವಾಗುತ್ತಿತ್ತೇನೋ. ಸಾಕಷ್ಟು ತಯಾರಿಯಿಲ್ಲದೆ ಹೊರಟ ಪರಿಣಾಮವಾಗಿ ಈ ಊಹೆ-ಕಲ್ಪನೆಗಳು.

ಸಿಂಖೋಲಾ ಹಳ್ಳಿಗಭಿಮುಖವಾಗಿ ಇಳಿಯುವದಾರಿ ಹಿಡಿದು ನಡೆಯ ತೊಡಗಿದವಳ ಪಕ್ಕದಲ್ಲೇ ಭವಾನಿಸಿಂಗ್ ನೋಡಿಯೂ ನೋಡದಂತೆ ಬಿಗುಮಾನದಿಂದ ನಡೆದು ಹೋದ. ಏನಾಯಿತೆಂದು ಕೂಗಿ ಕರೆದರೂ ಉತ್ತರಿಸದೆ ಬಿರಬಿರನೆ ನಡೆದಿದ್ದ. ಬಹಳ ಕೋಪ ಬಂದಂತಿತ್ತು. ಅವನ ಜೊತೆಗೆ ನಡೆದಿದ್ದ ಮತ್ತೊಬ್ಬ ಕುದುರೆಯವ ತಿವಿದು 'ಮಾತಾಡಿಲಿಕ್ಕೇನು ಸೊಕ್ಕು' ಎಂದಾಗ ಗತ್ಯಂತರವಿಲ್ಲದೆ ನಿಂತ. ಅವನ ಕೋಪಕ್ಕೆ ಕಾರಣ ನಾನು ದಿವಾನ್‌ಸಿಂಗ್‌ನ ಕುದುರೆಯೇರಿದ್ದು. ನಿರ್ಮಲಾ ದೇವಿಯವರೇ ಹೊಸ ಕುದುರೆಯನ್ನೇರಬೇಕಿತ್ತಂತೆ. ಭವಾನಿಸಿಂಗ್‌ನನ್ನು ಗೊತ್ತು ಮಾಡಿಕೊಂಡವಳು ನಾನಂತೆ. ಸಮಸ್ಯೆ ಅರ್ಥವಾಗಲಿಲ್ಲ. "ಅವರು ನಿನಗೆ ಪೂರಾ ಹಣ ಕೊಡುತ್ತಾರಲ್ಲವೇ? ನಾ ಕೊಟ್ಟರೇನು ಅವರು ಕೊಟ್ಟರೇನು? ನೀನಂತೂ ಲಿಪುಲೇಖ್‌ವರೆಗೆ ಕುದುರೆಯೋಡಿಸಲೇ ಬೇಕಲ್ಲವೇ?" ಎಂದೆ. "ನಿನಗೆ ಹಿಂದಿ ಬರುತ್ತದೆ. ನೀ ಹೇಳಿದ್ದು ನನಗೆ ನಾ ಹೇಳಿದ್ದು ನಿನಗೆ ಅರ್ಥವಾಗುತ್ತದೆ. ಆ ಮೇಡಮ್ಮಿನ್ನೊಂದಿಗೆ ಹೇಗೆ ಸಾಧ್ಯ?" ಎಂದುತ್ತರಿಸಿದ. ಓಹೊ ಇದೊ ಸಮಸ್ಯೆ! ಅದೇ ಹಳೆಯ ಸಮಸ್ಯೆ. ಇಲ್ಲಿ ಈ ರೀತಿ ತಲೆಯೆತ್ತಿದ ಭಾಷಾ ಸಮಸ್ಯೆ. "ಭವಾನೀ, ನೀನು ಹೇಳುವುದು ಸರಿಯಲ್ಲ. ನಾನಲ್ಲದೆ ಅವರೇ ನಿನ್ನನ್ನು ಗೊತ್ತುಮಾಡಿಕೊಂಡಿದ್ದರೆ ಮರುಮಾತಿಲ್ಲದೆ ಹೊಗುತ್ತಿದ್ದೆಯೋ ಇಲ್ಲವೊ? ಭಾಷೆ ಬರದ ಮಾತ್ರಕ್ಕೆ ಅವರು ಯಾತ್ರಿಕರಲ್ಲವೇನು? ಪ್ರತಿವರ್ಷವೂ ಎಲ್ಲೆಲ್ಲಿಂದಲೋ ಬರುವ ಯಾತ್ರಿಗಳನ್ನು ಕರೆದೊಯ್ಯುವವ ನೀನೇಕೆ ಇಂಗ್ಲೀಷ್ ಕಲಿತಿಲ್ಲ? ಅದು ಹೇಗೆ ನಿನ್ನ ಭಾಷೆಯಲ್ಲವೋ ಹಾಗೆಯೇ ಹಿಂದಿ ನಮ್ಮ ಭಾಷೆಯಲ್ಲ. ಕಲಿತರೆ ಸೌಕರ್ಯ ನಿಜ ಆದರೆ ಕಲಿತಿಲ್ಲವೆಂದು ನೀನು ಈ ರೀತಿ ಮಾಡುವುದು ಸರಿಯಲ್ಲ." ಎಂದು ನನಗೆ ಗೊತ್ತಿದ್ದ ರೀತಿಯಲ್ಲಿ ಸಮಾಧಾನ, ವಿವರಣೆ ನೀಡಿದೆ. ಎಷ್ಟು ಅರ್ಥವಾಯಿತೋ ಏನೋ- 'ನೀನೇ ಬಂದಿದ್ದರೆ ಚೆನ್ನಾಗಿತ್ತು.' ಎಂದು ಗೊಣಗಿದ. ಐದು ನಿಮಿಷದ ನಂತರ ನನ್ನೆದುರಿಗೇ ಬಂದು ನಿಂತು 'ನೀನು ಹಾಡು ಕಲಿಯುವುದೇನಾಯಿತು? ಆಗಲಾದರೂ ಮಾತನಾಡಲು ಸಿಗುವಿಯಲ್ಲವೇ?' ಎಂದು ಕೇಳಿ ಸ್ವಲ್ಪ ಗೆಲುವಾದ. ಅವನ ಕೋಪದ ಹಿನ್ನಲೆ ನಂತರ ತಿಳಿಯಿತು. ಓದಿನ ಬಗೆಗೆ ಅಪ್ಪನೊಡನೆ ಜಗಳವಾಡಿ, ಒಂದೇ ತಿಂಗಳಲ್ಲಿ ಏಳು ಸಾವಿರ

ರೂಪಾಯಿ(ಎರಡು ಟ್ರಿಪ್‌ನಿಂದ) ಕೈಗೆ ಬರುವ ಅವಕಾಶ ಬಿಡಲಾರದೆ ಲಿಪುಲೇಖ್‌ವರಗೆ ಹೊರಟಿದ್ದ. ನಾಲಮುದಕ್ಕೆ ಇವನು ನೋಡಿಟ್ಟುಕೊಂಡಿದ್ದ ಹುಡುಗಿಯನ್ನು ಬೇರೆಯವರಿ ಗೆ ಮದುವೆ ಮಾಡುವ ಸನ್ನಾಹವಿತ್ತಂತೆ. ಇವನ ಅಳಲನ್ನು ಕೇಳುವವರೊಬ್ಬರು ಅಥವಾ ಮಂಕು ಕವಿದ ಮನಕ್ಕೆ ಬದಲಾವಣೆಗೊಬ್ಬರು ಬೇಕಿದ್ದ ಮುಜುಗರದ ಸಮಯವಾಗಿತ್ತದು. ಅವನೊಡನೆ ಮಾತಿಗಿಳಿದು, ಗೊತ್ತಿಲ್ಲದೆಯೇ ಆ ವ್ಯಕ್ತಿ ನಾನಗಿದ್ದೆ. ಯಾರಾರ ಒಳಗಿನ ನೋವು ನಲಿವು ಹೇಗೆ ಪರಿಹಾರ ಕಂಡುಕೊಳ್ಳುವುದೋ ಬಲ್ಲವರಾರು?

ಈ ಪ್ರಸಂಗದ ಬಾಲಂಗೋಚಿಯಂತೆ ತಲೆಯಲ್ಲಿ ನೂರಾರು ವಿಚಾರಗಳು ಪರಿದಾಡಿದ್ದವು. ಒಂದು ಸಂಗತಿ ಖಚಿತವಾಗಿತ್ತು. ಹಿಂದಿನ ದಶಕಗಳಲ್ಲಿ ದಿನವೂ ಬೆಳಗ್ಗೆ ವಾರ್ತಾಪತ್ರಿಕೆಯಲ್ಲಿ ಓದಿ ಪಕ್ಕಕ್ಕಿಡುತ್ತಿದ್ದ ಸಮಸ್ಯೆಗಳನ್ನು ಈ ತಿಂಗಳ ಪ್ರವಾಸದಲ್ಲಿ (ಅದರ ತಯಾರಿಯಲ್ಲಿಯೂ) ಸ್ವಯಂ ಅನುಭವಿಸಬೇಕಾಗಿತ್ತು. ಅವುಗಳಿಗೆ ವ್ಯಕ್ತಿಗತ ಹಂತದಲ್ಲಿ ಪರಿಹಾರ ಕಂಡುಕೊಳ್ಳಬೇಕಾಗಿತ್ತು. ಇಂದಿನ ಭಾಷಾ ಸಮಸ್ಯೆ ಇದಕ್ಕೆ ಒಂದು ಉದಾಹರಣೆಯಷ್ಟೆ. ವೈದ್ಯಕೀಯ ತಪಾಸಣೆಯ ಬವಣೆಯಿಂದ ಹಿಡಿದು ಚೀನಾ-ಭಾರತ-ಟಿಬೆಟ್ ಗಡಿ ವಿವಾದದವರೆಗೆ ಏನೇನು ಸಮಸ್ಯೆಗಳನ್ನೆದುರಿಸಬೇಕೋ ಶಿವನೇ ಬಲ್ಲ! ಸೇತುವೆ ಬಂದಾಗ ದಾಟಿದರಾಯಿತೆಂಬ ತಾಳ್ಮೆ ತಂದುಕೊಂಡೆ ಇಂದಿನ ನನ್ನ ಕುದುರೆಸವಾರಿಯ ಸಮಸ್ಯೆಯನ್ನಾಗಲೇ ಪರಿಹರಿಸಿಕೊಂಡಿದ್ದೆ. 'ಏರುದಾರಿ ಮುಗಿದು ಇಳಿತ ಮಾತ್ರ. ಆಮೇಲೆ ಗಾಲಾ ಶಿಖರದವರೆಗೆ ನಾಲ್ಕೈದು ಕಿ.ಮೀನ ಸಮತಲದ ನಡಿಗೆ ತಾನೆ? ಈಗಿನ್ನೂ ಹನ್ನೊಂದು ಗಂಟೆ. ನಾನು ನಡೆದೇ ಬರುವೆ. ನೀನು ಮುಂದೆ ನಡೆ.' ಎಂದು ದಿವಾನ್‌ಸಿಂಗ್‌ನನ್ನು ಮುಂದೆ ಸಾಗ ಹಾಕಿದೆ. ಸಿಂಖೋಲಾ ಕಾಡಿನ ಸೊಬಗನ್ನು ಆಸ್ವಾಧಿಸುತ್ತಾ ನನ್ನ ಕಾಲಮೇಲೆಯೇ ನಡೆವ ನಿಶ್ಚಿಂತೆಯ ವಾಯು ವಿಹಾರ. ಆಗೊಮ್ಮೆ ಈಗೊಮ್ಮೆ ಎದುರಾದವರ ಓಂ ನಮಃ ಶಿವಾಯ.

ಈ ಓಂ ನಮಃ ಶಿವಾಯದ ವಂದನಾರೀತಿ ವಿಚಿತ್ರವಾದರೂ ಬಲು ಆತ್ಮೀಯವೆನಿಸಿತು ಥಾಣೇಧಾರ್ ಬೆಟ್ಟ ಏರುವಾಗ ಈ ರೀತಿವಂದಿಸುವ ಪರಿಚಯವಾಯಿತು. ಅಪರಿಚಿತರೆಂಬ ಸಂಕೋಚ ಬೇಧಭಾವವಿಲ್ಲದೆ ಎದುರಾದವರೆಲ್ಲರೂ ಓಂ ನಮಃ ಶಿವಾಯ ಎಂದು ನುಡಿದು ಬಲಗೈ ತಮ್ಮೆದೆಗೊತ್ತಿ ಕಿರುನಗೆ ಬೀರಿ ಮುಂದೆ ಸಾಗುತ್ತಿದ್ದರು. ನಮ್ಮನ್ನು ಹಿಂದೆ ಹಾಕಿ ನಮ್ಮ ದಿಕ್ಕಿನಲ್ಲೇ ಮುಂದೆ ಸಾಗಿದವರೂ ಕೂಡ ನಮ್ಮೆಡೆ ನೋಡಿ ವಂದಿಸುತ್ತಿದ್ದರು. ಹಳ್ಳಿಗರು, ಸರಕಾರಿ ಕರ್ಮಚಾರಿಗಳು, ಕೂಲಿಯಾಳುಗಳು, ಶಾಲಾ ಕಿರಿಯರು, ಮನೆಬಾಗಿಲಿನಲ್ಲಿ ನಿಂತ ತಾಯಂದಿರು, ವಾಪಸಾಗುತ್ತಿದ್ದ ಯಾತ್ರಿಗಳು – ಎಲ್ಲರ ಬಾಯಲ್ಲೂ ಮೊದಲ ಮಾತೆಂದರೆ ಓಂ ನಮಃ ಶಿವಾಯ. ಗಳಿಗೆಗೊಮ್ಮೆ ಈ ನುಡಿಯನ್ನು ಕೇಳಿ ಕೇಳಿ ಮನಸ್ಸು ಶುಚಿಯಾಗುತ್ತಿತ್ತು. ಹಾದಿ ಸವೆದಂತೆ ದಕ್ಷಿಣದವರ ನಮಸ್ತೆಯ ಬದಲಿಗೆ ಓಂ ನಮಃ ಶಿವಾಯ ಎಂದು ಸಹಜವಾಗಿ ನಮ್ಮ ನಾಲಿಗೆಯೂ ನುಡಿಯಲಾರಂಭಿಸಿತು. ಸಿರ್ಖಾ ಶಿಬಿರ ಬಿಟ್ಟು ಗಾಲಾ ಹಳ್ಳಿಯ ದಾರಿ ಹಿಡಿದ ನಮಗೆ ಈ ಮಂತ್ರದ ಮತ್ತೊಂದು ಮುಖದ ಪರಿಚಯವಾಯಿತು. ಕಾಡಿನ ಕಾಲುದಾರಿಯಲ್ಲಿ ಎಲ್ಲಿಂದಲೋ ಪ್ರತ್ಯಕ್ಷವಾಗುತ್ತಿದ್ದ ಮಕ್ಕಳ ಗುಂಪು ಅಲ್ಲಲ್ಲಿ ನಿಂತು ಓಂ ನಮಃ ಶಿವಾಯ ಎಂದು ಕೂಗಿ ನಮಿಸಿ ಕೈಯೊಡ್ಡುತ್ತಿದ್ದವು. ಮೊದಮೊದಲು ಕೈ ಒಡ್ಡಿದ ಈ ಮಕ್ಕಳಲ್ಲಿ ಭಿಕ್ಷುಕರನ್ನು ಕಂಡೆವು. ಕೊಡಲು

ಕಿಸೆಯಲ್ಲಿರುವವರೆಗೆ ಕೊಟ್ಟೆವು. ಕೊಟ್ಟನೆಂದು ಬೀಗಿದೆವು ನಂತರ ಇಲ್ಲವೆಂದು ತಾರಮ್ಯ್ರ ಆಡಬೇಕಾಯಿತು. ನಮ್ಮ ಇತಿಮಿತಿಯ ಅರಿವಾಯಿತು. ಈ ಅರಿವು ಮೂಡಿಸಲೆಂದೇ ಶಿವ ಕಾಡಿನ ಮಧ್ಯೆ ಮಕ್ಕಳ ರೂಪದಲ್ಲಿ ಬಂದು ನಮ್ಮ ಖಾಲಿತನವನ್ನು ಬಯಲಿಗೆಳೆದ ಹಾಗಿತ್ತು. ದಣಿವಾರಿಸಿಕೊಳ್ಳಲು ಹಾದಿಯ ಬದಿಯಲ್ಲಿ ಕುಳಿತಾಗ ನಾನೂ ಮಕ್ಕಳಂತೆಯೇ ಓಂ ನಮಃ ಶಿವಾಯ ಎಂದು ಕೈಯೊಡ್ಡಿದೆ. ಹಳ್ಳಿಗರು ನಕ್ಕು ಮುಂದೆ ಸಾಗಿದರೆ ಸಹ ಯಾತ್ರಿಗಳು ನಕ್ಕು ಬೊಗಸೆ ತುಂಬಿದರು. ಮಕ್ಕಳು ಬೆನ್ನ ಹಿಂದೆ ನಿಂತು ಚಪ್ಪಾಳೆಯಿಕ್ಕಿದರು. ಮನತುಂಬಿ ಬಂದಿತ್ತು. ಮೊದಲಲ್ಲಿ ಈ ರೀತಿ ಕೈಯೊಡ್ಡುವ ಮಕ್ಕಳ ಅಭ್ಯಾಸ ಕೋಪತಂದಿತ್ತು. ಶಾಲೆಯ ಸಮವಸ್ತ್ರಧರಿಸಿ ಅದೇ ಹುಡುಗರು ನಮ್ಮ ಹಿಂದಿನಿಂದ ಬಂದು ಮುಂದೆ ಸಾಗಿದಾಗ ನಮಗೆ ಅಚ್ಚರಿ. ಇದು ಮಕ್ಕಳು ಮೋಜಿಗಾಗಿ ಕೈಯೊಡ್ಡುವ ಪರಿಯೆಂದು ಆಗ ಹೊಳೆಯಿತು. ಇಂತಹದೇ ಗುಂಪಿನಲ್ಲಿದ್ದ ಎರಡು ಮಕ್ಕಳನ್ನು ಕರೆದು ತನ್ನ ಮಕ್ಕಳೆಂದು ದಿವಾನಸಿಂಗ್ ಪರಿಚಯಿಸಿದ. ನೋಡಲು ದಷ್ಟಪುಷ್ಟವಾಗಿ ಆರೋಗ್ಯದಿಂದ ನಳನಳಿಸುತ್ತಿದ್ದ ಮಕ್ಕಳು ತಂದೆಯನ್ನು ಕಂಡು ನಾಚಿದ್ದವು. ನಾವು ಮಾತನಾಡಿಸಿದಾಗ ನಕ್ಕು ತಂದೆಯ ಬೆನ್ನ ಹಿಂದೆ ಅವಿತು ಕೊಂಡರು. ಏಕೆ ಹೀಗೆ ಕೈಯೊಡ್ಡುವುದನ್ನು ತಪ್ಪಿಸಿಲ್ಲವೆಂದು ಕೇಳಿದೆ. ಅವನ ಉತ್ತರ ನನ್ನನ್ನು ನಾನೇ ಪ್ರಶ್ನಿಸಿಕೊಳ್ಳುವಂತೆ ಮಾಡಿತು. ಶಿವನ ಈ ನೆಲದಲ್ಲಿ ಯಾರೂ ಕೊಟ್ಟು ದೊಡ್ಡವರಾಗುವುದಿಲ್ಲ ಪಡೆದು ಬಡವರಾದವರಿಲ್ಲ. ಶಿವಕೊಟ್ಟಿದ್ದು ಶಿವನಿಗೆ ಸೇರಿತು ಎನ್ನುತ್ತೇವೆ. ಭಿಕ್ಷೆ ದಾನ ಎಂಬೆಲ್ಲ ಮಾತು ಈ ಗಿರಿಯೊಡಲಲ್ಲಿ ಬೆಳೆದವರಿಗೆ ಅರ್ಥವಾಗದು ಎಂದಿದ್ದನವ.

ಒಂದಲ್ಲ ಒಂದು ರೀತಿಯಲ್ಲಿ ನಾವೆಲ್ಲರೂ ಓಂ ನಮಃ ಶಿವಾಯ ಎನ್ನುವವರೇ! ಊಟಕ್ಕಾಗಿ, ಮತ್ತೊಬ್ಬರ ಹೆಗಲಿನಲ್ಲಿರುವ ನೀರಿಗಾಗಿ, ಮೇಲೇರಲು ಸಹಾಯಕ್ಕಾಗಿ, ನಮ್ಮ ಹೊರೆಯನ್ನು ಸಾಗಿಸಲು ಬೇರೆಯವರ ಹೆಗಲಿಗಾಗಿ, ಆ ಕ್ಷಣಕ್ಕೆ ನಮ್ಮದಲ್ಲದ ತಿಂಡಿ ತಿನಿಸಿಗಾಗಿ, ಔಷಧಿಗಾಗಿ, ಬಾಚಣಿಗೆ ಸಾಸಿವೆ ಎಣ್ಣೆ, ಕ್ರೀಮ್ ಇತ್ಯಾದಿ ಇತ್ಯಾದಿಗಾಗಿ ಕೈಯೊಡ್ಡುವವರೇ. ಇದೇ ರೀತಿ ಬಾಳಿನುದ್ದಕ್ಕೂ ದಿನ ನಿತ್ಯ ಎಷ್ಟೆಷ್ಟು ರೀತಿಯಲ್ಲಿ ಯಾರಾರಮುಂದೆ ಕೈಯೊಡ್ಡಿರುವೆವೋ, ಇನ್ನೂ ಬೇಡಲಿರುವೆವೊ ನಾವು? ಹಿರಿಯ ಕಿರಿಯ, ಉಳ್ಳವ ಇಲ್ಲದವ ಎಂಬ ಭೇದವಿಲ್ಲದೆ ನಮ್ಮದನ್ನು ಕೊಟ್ಟು ಓಂ ನಮಃ ಶಿವಾಯ ಎಂದರೆ ಇನ್ನೊಬ್ಬರದನ್ನು ಪಡೆದೂ ಓಂ ನಮಃ ಶಿವಾಯ ಎನ್ನುವ ಈ ಪರಿ ಕೊಡುವುದರಲ್ಲೆಷ್ಟೋ ಪಡೆಯುವುದರಲ್ಲೂ ಅಷ್ಟೇ ಆನಂದ ಕೊಟ್ಟ ಮಂತ್ರ. ಎಲ್ಲರನ್ನೂ ಒಂದೇ ಸ್ತರಕ್ಕೆ ತಂದು ನಿಲ್ಲಿಸಿದ ಮಂತ್ರ. ಎಲ್ಲವನ್ನೂ ಹೊಚ್ಚಿರುವ, ವಿಶ್ವಜೀವಜಾಲವನ್ನು ಪೋಣಿಸಿರುವ ಮಂತ್ರ. ಶ್ರಾವಣ ಶನಿವಾರದ 'ಶ್ರೀರಮಣ ಗೋವಿಂದ ಗೋವಿಂದಾ' ವೂ ಇದೇ ಭಾವನೆಯಲ್ಲಿ ರೂಪಗೊಂಡ ರೂಢಿಯಿರಬೇಕು.

ನಾವು ಮೂವರೂ-ಗೀತಾಂಜಲಿ, ನಿರ್ಮಲಾ ದೇವಿ ಮತ್ತು ನಾನು ಕಾಡಿನಂಚಿಗೆ ಬಂದಿದ್ದೆವು. ಕೆಳಗೆ ಸಿಂಪೋಲಾ ಹಳ್ಳಿಯ ಪಕ್ಕದಲ್ಲಿ ಹರಿದಿದ್ದ ದೊಡ್ಡ ಹೊಳೆ. ಮಾತನಾಡುತ್ತಲೇ ಬೆಟ್ಟವನ್ನು ಇಳಿದಿದ್ದೆವು. ಹಿಂದಿನಿಂದ ಇಬ್ಬರು ಮಕ್ಕಳು ಓಡೋಡಿ ಬಂದು ಎಡಕ್ಕೆ ಮೇಲಿನ ದಾರಿ ಹಿಡಿದರೆ ಹಳ್ಳಿ ದಾಟಿ ಶಿಬಿರಕ್ಕೆ ಸೇರುವಿರಿ ಎಂದರು. ನಾವಿಳಿದಿದ್ದ ದಾರಿ ಮುಂದೆ ಹೋಗಿ ಹೊಳೆಯ ಬಲಗಡೆಗೆ ತಿರುಗುವುದೆಂದು. ನಂಬಲಸಾಧ್ಯವೆಂಬಂತಿತ್ತು ದಾರಿಗಳು ಹೋಗುತ್ತಿದ್ದ ದಿಕ್ಕು. ಮಾರ್ಗಸೂಚಿ ಇಲ್ಲೆಲ್ಲೂ ಇರಲಿಲ್ಲ. ಹಿಮಾಲಯದ ಪರ್ವತ ಸೀಮೆಯಲ್ಲಿ ಸಂಚರಿಸಬೇಕಾದರೆ

ಪ್ರದೇಶದ ನಿಕಟ ಪರಿಚಯವಿರಬೇಕು ಇಲ್ಲವೇ, ಪರಿಚಯವಿದ್ದವರ ಜೊತೆಯಿರಬೇಕು. ತಪ್ಪು ದಾರಿ ಹಿಡಿದರೆ ಅನವಶ್ಯ ನಡಿಗೆ ಕಟ್ಟಿಟ್ಟಿದ್ದು. ಇಲ್ಲಿನ ಇನ್ನೊಂದು ಅಪಾಯವೆಂದರೆ ಅನಿರೀಕ್ಷಿತವಾಗಿ ಹರಡಿ ಬಿಡುವ ಮಂಜಿನ ಮುಸುಕು. ಮಂಜು ಕವಿದರೆ ಸ್ಥಳೀಕರೂ ದಾರಿ ತಪ್ಪುವುದುಂಟು.

ಸರಿದಾರಿ ಹಿಡಿದು, ಹೊಳೆಯನ್ನು ದಾಟಿ ಎಡದಂಡೆಗೆ ಬರುವಷ್ಟರಲ್ಲಿ ಸುಸ್ತು. ಸಾಲದೆಂದು ಮುಖವನ್ನು ಬೇಯಿಸುತ್ತಿದ್ದ ಎದುರು ಬಿಸಿಲು. ಎದುರಿನಿಂದ ಮೂವರು ಹದಿಹರೆಯದ ಹುಡುಗಿಯರು ಮಂಡಿಯವರೆಗೆ ಜೋತುಬಿದ್ದ ಹುಲ್ಲಿನ ಹೊರೆಗಳನ್ನು ಹೊತ್ತು ಬಂದರು. ಮುಖ ಬೆವರಿ ಕೆಂಪಾದರೂ ಅನಾಯಾಸವಾಗಿ ನಡೆದೇ ಇದ್ದರು. ಸಮೀಪಕ್ಕೆ ಬಂದವರನ್ನು ಫೋಟೋ ತೆಗೆದು ಕೊಳ್ಳಲೇ ಎಂದು ಪ್ರಶ್ನಿಸಿದಾಗ ನಕ್ಕರು. 'ನೀವು ಯಾತ್ರಿಗಳು ಫೋಟೊ ತೆಗೆಯುತ್ತೀರಿ. ಒಬ್ಬರಾದರೂ ನಮ್ಮ ವಿಳಾಸ ಪಡೆದು ನಮ್ಮ ಫೋಟೋ ಕಳಿಸುತ್ತೀರಾ? ನಿಮಗೆಲ್ಲಾ ನಾವು ದರ್ಶನಕ್ಕಿಟ್ಟ ಬೊಂಬೆಗಳು. ಅಷ್ಟೆ. ನಮ್ಮ ಕಷ್ಟ ಸುಖಗಳನ್ನು ವಿಚಾರಿಸಲು ಯಾರಿಗೂ ಪುರುಸೊತ್ತೇ ಇಲ್ಲವಾಗಿದೆ.' ಎಂದಳು ಹುಡುಗಿ ಮೀನಾ. 'ನಮ್ಮ ಪ್ರಾಂತದ ನೇತಾಗಳೇ ಮುಖ ತಿರುವಿ ಹೋಗುವಾಗ ಇವರೇನು ಮಾಡಿಯಾರು? ನಮ್ಮ ದುಃಖ ನಮಗೆ.' ಮತ್ತೊಂದು ಹುಡುಗಿ ವೀಣಾಳ ಅಸಮಧಾನ.

ಮೀನಾ ವಿವರಿಸಿದಂತೆ ಹಳ್ಳಿ ಹೆಂಗಸರ ಸಮಸ್ಯೆಗಳು ನೂರೆಂಟು. ದುಡಿಯಲು ಹೊರಟ ಗಂಡಸರು ದಿನಗಟ್ಟಲೆ ಮನೆಗೆ ಬರಲಾರದುದರಿಂದ ಸಂಸಾರದ ಹೊಣೆ ಇವರದೇ. ಬೇಕಾದ ಅಗತ್ಯ ವಸ್ತುಗಳನ್ನು ಕೊಂಡು ತರಲು ಬೆಟ್ಟಗಳನ್ನು ಏರಿ ಇಳಿದು ಪಟ್ಟಣಗಳಿಗೇ ಹೋಗಿ ಬರಬೇಕು. ತುರ್ತು ವೈದ್ಯಕೀಯ ಸಹಾಯ ಕನಸಿನ ಮಾತು. ಹೆರಿಗೆಯ ನೋವು ಬಂದವರೂ ನಡಿಗೆಯಲ್ಲೇ ಕಾಡು ಬೆಟ್ಟಗಳನ್ನು ಹಾದು ದೂರದ ಆಸ್ಪತ್ರೆಗೆ ಸೇರಬೇಕು. ಅದೃಷ್ಟವಿದ್ದರೆ ದಾದಿಯರ ಸಹಾಯ ಸಿಗಬಹುದು. ಮೀನಾಳ ಮತ್ತೊಂದು ದೂರೆಂದರೆ ಹುಡುಗಿಯರ ವಿದ್ಯಾಭ್ಯಾಸಕ್ಕಿರುವ ತೊಂದರೆ. ಪಾಠಶಾಲೆಗಳ ಕೊರತೆ. ದೂರದೂರಕ್ಕೆ ಇರುವ ಪಾಠಶಾಲೆಗಳ ಪರಿಸ್ಥಿತಿ ಶೋಚನೀಯ. ಮನೆಗೆಲಸಕ್ಕೆ ಸಹಕರಿಸಿದ ನಂತರ ದೂರದ ಶಾಲೆಗೆ ಹೋಗಿ ಬರುವುದು ಅಸಾಧ್ಯ. ಅತ್ತ ಕಡೆ(ದೆಹಲಿಯತ್ತ) ಮುಖವಿಟ್ಟಿರುವ ನೇತಾಗಳಿಗೆ ಈ ಸಮಸ್ಯೆಗಳಾವುವೂ ಕಣ್ಣಿಗೇ ಬೀಳುವುದಿಲ್ಲ. ಇವರೂ ಸ್ವತಂತ್ರ ಭಾರತದ ಪ್ರಜೆಗಳು! ಪರ್ವತ ಪ್ರಾಂತದ ಮಹಿಳೆಯರ ಬದುಕಿಗೆ ಹೋಲಿಸಿದರೆ ನಮ್ಮ ಕಡೆಯ ಹಳ್ಳಿಗಾಡಿನ ಹೆಂಗಸರದ್ದು ಹೆಚ್ಚು ಅನುಕೂಲದ ಬದುಕು ಎನಿಸಿತು.

ಬೆಟ್ಟದ ಮಗ್ಗುಲಿನ ದಾರಿಯಲ್ಲಿ ಒಮ್ಮೆ ಕಂಡು ಒಮ್ಮೆ ಕಾಣದಾಗುತ್ತಿದ್ದ ಗಾಲಾ ಶಿಬಿರ ಬಹಳ ಹತ್ತಿರವಿದ್ದಂತಿದ್ದರೂ ಅದನ್ನು ಸೇರುವ ನಾಲ್ಕು ಕಿ.ಮೀನ ದಾರಿ ನಲವತ್ತು ಕಿ.ಮೀ.ಗೆ ಎಲಾಸ್ಟಿಕ್‌ನಂತೆ ಎಳೆಯಕೊಂಡತೆನಿಸಿತ್ತು. ಕೊನೆಗೂ ತಲುಪಿದೆವೆಂದು ಗಾಲಾ ಎಂದು ಬರೆದಿದ್ದ ಫಲಕದ ಹತ್ತಿರ ನಿಂತರೆ ಅಲ್ಲೇ ದಿಬ್ಬದ ಮೇಲೆ ಕುಳಿತಿದ್ದ ಮಕ್ಕಳು ಇದು ಗಾಲಾ ಹಳ್ಳಿ. ಯಾತ್ರಿಗಳ ಶಿಬಿರ ಇನ್ನೊಂದು ಕಿ.ಮೀ. ದೂರದಲ್ಲಿದೆ ಎಂದರು. ಹಳ್ಳಿ ಮನೆಗಳ ಹಿಂಭಾಗ, ಅಂಗಳ, ಮುಂಭಾಗ ಎಂದು ನುಸುಳಿಕೊಂಡು ಹೆದ್ದಾರಿಗೆ ಬರುವಷ್ಟರಲ್ಲಿ ಕಾಲುಗಳು ಮೊಂಡು ಹಿಡಿದು ನಿಂತವು. ನಡೆಯಲಾರೆನೆಂದರೆ ಅಪಹಾಸ್ಯಕ್ಕೆ ಗುರಿಯಾಗಬೇಕು. ಒಂಟಿ ಕುಳಿತಿರಬೇಕು. ಬುದ್ಧಿ ಚುರುಕಾಯಿತು. 'ಇಲ್ಲಿಯ ಮನೆಗಳನ್ನೊಮ್ಮೆ ಹೊಕ್ಕು ಬರೋಣ. ಹೇಗೆ ಸಜ್ಜು ಗೊಳಿಸಿರುವರೋ ನೋಡಬಹುದು' ಎಂದು ಗೆಳತಿಯರನ್ನು ತಡೆಹಿಡಿಯಲು ನೋಡಿದೆ. ' ನಿನ್ನ ಬಾತ್ಮೀದಾರ

ಕೆಲಸವನ್ನು ನೀನೊಬ್ಬಳೇ ಮಾಡು ನಮ್ಮನ್ನು ಬಿಟ್ಟು ಬಿಡು.' ಎಂದು ಹೇಳಿ ನಡೆಯಲು ಆರಂಭಿಸಿಯೇ ಬಿಟ್ಟರು. 'ನಮ್ಮ ಹಿಂದೆಯೇ ಬರುತ್ತಿದ್ದ ಆಂಧ್ರದ ಸುಬ್ರಹ್ಮಣ್ಯಂ- ಅವರು ಹೋಗುತ್ತಿರಲಿ ನಾನು ನಿಮ್ಮೊಡನೆ ಬರುವೆ ನಡೆಯಿರಿ.' ಎಂದಾಗ ಮನಸ್ಸಿಗೆ ನೆಮ್ಮದಿಯಾಯಿತು.

ಅಂಗಳದಲ್ಲಿ ಬಿಸಿಲಿಗೆ ಬೆನ್ನು ಮಾಡಿ ಹರಟುತ್ತ ಕುಳಿತಿದ್ದ ಇಬ್ಬರು ಮಹಿಳೆಯರನ್ನು ಅವರ ಮನೆಯನ್ನು ತೋರಿಸಲು ಕೇಳಿಕೊಂಡೆವು. ಹಿರಿಯಳು ಅಂಗಳದಲ್ಲಿ ಕಸಗುಡಿಸುತ್ತಿದ್ದ ತನ್ನ ಸೊಸೆಯನ್ನು ಕರೆದು ಮನೆಯೊಳಗೆ ನಮ್ಮನ್ನು ಕರೆದೊಯ್ಯಲು ಹೇಳಿದಳು. ೧೫ : ೧೫ ಅಡಿ ಚದರದ ಕೆಳಮನೆಯಲ್ಲಿ ಧಾನ್ಯ ಹಸುಗಳ ಮೇವು ಮತ್ತು ಕಟ್ಟಿಗೆಯನ್ನು ಒಟ್ಟಿದ್ದರು. ಮೇಲಿನ ಅಂತಸ್ತಿನ ಮಲಗುವ ಕೋಣೆಯಲ್ಲಿ ಬಟ್ಟೆ ಬರೆ, ಚಳಿಗಾಲದ ಹೊದಿಕೆ ಉಡುಪುಗಳು. ಅದಕ್ಕೂ ಮೇಲಿನ ಅಟ್ಟಕ್ಕೆ ಹೊದರೆ, ಅಲ್ಲಿ, ಮಧ್ಯದಲ್ಲಿ ಅಡುಗೆ ಒಲೆ, ಸುತ್ತಲೂ ಕೂತು ಉಣ್ಣುವ ಜಾಗ. ಅಲ್ಲಿಯೇ ಚಾಪೆಯೊಂದನ್ನು ಹಾಸಿ ನಮ್ಮನ್ನು ಕೂರಿಸಿದಳು. ನಮ್ಮ ಹಿಂದೆಯೇ ಮೇಲೆ ಬಂದ ಹನ್ನೆರಡು ವರ್ಷದ ಹುಡುಗಿ ನಾದಿನಿಯೂ ಕುಳಿತಳು. ನಾವು ಕುಳಿತಮೇಲೆ ತಲೆಯೆತ್ತಿ ನೋಡಿದಾಗ ಕಂಡಿದ್ದು ಕಟ್ಟಿಗೆಯ ಹಂದರದ ಮೇಲೆ ಹೊದೆಸಿದ್ದ ಹುಲ್ಲಿನ ಛಾವಣಿ. ಇಡೀ ಮನೆ ಕಟ್ಟಿಗೆ ಮಣ್ಣು ಮೆತ್ತಿದ ಗೊಡೆಯಿಂದಾದುದು. ಹಿಮ ಬಿದ್ದಾಗ ಕೆಳಗಿನ ಮನೆಯಲ್ಲಿ ಆಕಳು ಕುರಿಗಳನ್ನು ಭದ್ರ ಪಡಿಸುತ್ತಾರೆ. ಹಿಮ ಕರಗಿ ರಸ್ತೆ ತೆರೆಯುವವರೆಗೆ ಅವುಗಳೂ ಮನೆಯೊಳಗೇ. ಆರ್ಥಿಕ ಅನಕೂಲವಿದ್ದವರು ಕಲ್ಲು ಚಪ್ಪಡಿಗಳ ಗೋಡೆಯನ್ನು ಕಟ್ಟುವರು.

ಸೊಸೆಯನ್ನು ಪತಿಯ ಬಗೆಗೆ ಕೇಳಿದಾಗ ತಲೆ ತಗ್ಗಿಸಿ 'ಬೇಸಿಗೆಯಲ್ಲಿ ಅವರು ಕೂಲಿ ಕೆಲಸ ಮಾಡಲು ಹೋಗುತ್ತಾರೆ. ಬಿಡುವಾದಾಗ ಒಂದೆರೆಡು ರಾತ್ರಿಗಳ ಮಟ್ಟಿಗೆ ಇಲ್ಲಿಗೆ ಬರುತ್ತಾರೆ.' ಎಂದಳು. ಮೀನಾಳ ಇನ್ನೊಂದು ಗೋಳನ್ನೂ ಇವಳಲ್ಲಿ ಕಂಡೆ. ಆಗಲೇ ಮೇಲಕ್ಕೆ ಬಂದ ಮನೆಯೊಡೆಯ ಮಾವ ನಮಗೆ ತಿನ್ನಲು ಏನಾದರೂ ಕೊಡೆಂದು ಹೇಳಿ ಮಾತಿಗಿಳಿದ.

ರಾಜಕೀಯ ಪರಿಸ್ಥಿತಿಯಿಂದ ಉದ್ಭವಿಸಿದ ತೊಂದರೆಗಳೊಂದಿಗೆ, ಈ ಪ್ರಾಂತ್ಯಕ್ಕೆ ವಿಶಿಷ್ಟವಾದ ಪ್ರಾಕೃತಿಕ ತೊಂದರೆಗಳೂ ಇವರ ಪಾಲಿಗುಂಟು. ಆಗಾಗ ಸಂಭವಿಸುವ ಭೂಕಂಪ, ಭೂಕುಸಿತ ಹಿಮಪಾತ, ಪ್ರವಾಹಗಳಿಂದ ಹೊರ ಜಗತ್ತಿನ ಸಂಪರ್ಕ ಇಲ್ಲದಂತಾಗುವುದು. ಪ್ರಾಣಹಾನಿಯೂ ಸರ್ವೇ ಸಾಮಾನ್ಯ. ಈ ರೀತಿಯ ಅನಿಶ್ಚಿತ ಜೀವನದಿಂದಾಗಿ ಇಲ್ಲಿನವರಲ್ಲಿ ಅಲ್ಪತೃಪ್ತಿ, ಒಗ್ಗಟ್ಟು, ಅನುಕಂಪ, ಪರಸ್ಪರ ಸಹಕಾರ-ಸೌಹಾರ್ದ ಎದ್ದು ಕಾಣುವ ಗುಣಗಳು. ಇವರ ಬದುಕಿಗೆ ಹೋಲಿಸಿದರೆ ನಮ್ಮದು ನಿಶ್ಚಿಂತೆಯ ಸುಖದ ಬದುಕೇ. ಆದರೆ ಇವರಲ್ಲಿ ಕಾಣುವ ತೃಪ್ತಿ ಸಮಾಧಾನ ನಮ್ಮಲ್ಲೇಕಿಲ್ಲ? ಬಾಳು ಸುಗಮವಾದಷ್ಟು ಆ ಬಾಳಿಗೆ ಬೆಲೆಯಿಲ್ಲದಾಗುವುದೇನೋ!

ಸೊಸೆಕೊಟ್ಟ ಖಿಚಡಿ ತಿಂದು, ಕೈಚೀಲದಲ್ಲಿ ಸಿಕ್ಕಿದ ಚಿಕ್ಕ ಬಾಚಣಿಗೆ, ಶಾಂಪೂ ಸಾಶೆ ಮತ್ತು ಬಿಂದಿ ಪ್ಯಾಕೆಟ್ಟನ್ನು ಅವಳ ಕೈಗಿಟ್ಟು ಹೊರಬಂದಾಗ ಯಾವುದೋ ವೃತ್ತಿ ಚಿತ್ರ ನೋಡಿದಂತೆ ವಿಚಾರ ಮಂಥನಕ್ಕೆ ಮೊದಲಾಗಿತ್ತು. ಮೊದಲಿನಂತೆಯೇ ಟಿಬೆಟ್ ಭಾರತ ನಡುವಿನ ವ್ಯವಹಾರ ಆರಂಭವಾದರೆ ಸಾಕು ನಮ್ಮ ಸ್ಥಿತಿಯೂ ಕೊಂಚ ಉತ್ತಮವಾದೀತು ಎಂಬದು ಇಲ್ಲಿನವರ ಬಯಕೆ. ಇದು ರಾಜಕಾರಣಿಗಳಿಗೆ ತಿಳಿದೀತೇ?

ಸುಮಾರು ಮುಕ್ಕಾಲು ಗಂಟೆ ತಡವಾಗಿ ಸುಬ್ರಹ್ಮಣ್ಯಂ ಮತ್ತು ನಾನು ೮೦೫೦ ಅಡಿಗಳೆತ್ತರದಲ್ಲಿರುವ ಗಾಲಾ ಶಿಬಿರವನ್ನು ತಲುಪಿದಾಗ ಯಾತ್ರಿಗಳೆಲ್ಲರೂ ಆಗಲೇ ಭೋಜನದ ಕಡೆಯ ಹಂತದಲ್ಲಿದ್ದರು.. ಕೆಲವರಾಗಲೇ ಸ್ನಾನಕ್ಕೆ ಸರತಿ ನಿಂತಿದ್ದರು. ಕಳೆದ ನಾಲ್ಕು ದಿನಗಳಲ್ಲಿ, ನಾವು ಬಹು ಚೊಕ್ಕವಾಗಿ, ಶೀಘ್ರವಾಗಿ ಮಾಡಲು ಕಲಿತದ್ದೇನೆಂದರೆ ರಕ್‌ಸ್ಯಾಕ್-ಪ್ರವಾಸದ ಸಾಮಾನಿನ ಮೂಟೆಯನ್ನು ಯಾರ ಸಹಾಯವಿಲ್ಲದೇ ಬಿಚ್ಚುವುದು ಮತ್ತು ಕಟ್ಟುವುದು. ಆದಷ್ಟು ಕಡಿಮೆ ವೇಳೆಯಲ್ಲಿ ಬೇಕಾಗಿದ್ದ ಸಾಮಾನನ್ನು ಮೂಟೆಯೊಳಗೇ ಗುರುತಿಸಿ, ಇತರ ವಸ್ತುಗಳನ್ನು ಕಿತ್ತಾಡದೆ ಹೊರಗೆಳೆಯದೆ, ಬೇಕಾದ್ದನ್ನು ಮಾತ್ರ ಹೊರತೆಗೆಯಲು ಕಲಿತಿದ್ದೆವು. ನನ್ನ ಮಟ್ಟಿಗೆ ಇದೇನೂ ಕಡಿಮೆ ಸಾಧನೆಯಾಗಿರಲಿಲ್ಲ. ಇಷ್ಟು ಚಿಕ್ಕ ಮೂಟೆಯಲ್ಲಿರುವ ವಸ್ತುಗಳಿಂದಲೇ ಒಂದು ತಿಂಗಳು ಪೂರಾ ಜೀವಿಸುವೆವು ಎಂಬ ವಿಚಾರವೇ ವಿಸ್ಮಯ ತರುವುದಾಗಿತ್ತು. ಆ ವಸ್ತುಗಳಲ್ಲೂ ಎಷ್ಟೊ ಇನ್ನೂ ಹೊರಬಂದಿರಲಿಲ್ಲ. ಮನೆಯಲ್ಲಿ ಬೇಕಿಲ್ಲದ ವಸ್ತುಗಳನ್ನೇ ತುಂಬಿಕೊಳ್ಳುತ್ತೇವೆ ಎನ್ನುವಷ್ಟು ಸರಳವಾಗಿತ್ತು ನಮ್ಮ ಅವಶ್ಯಕ ಗಳ ರಕ್‌ಸ್ಯಾಕ್.

"ಇವತ್ತಿನದು ಗಾಲಾಯಿಂದ ಮಾಲ್ಪಾಗೆ ಬಹಳ ಬಹಳ ಕಷ್ಟದ ನಡಿಗೆ ಗೊತ್ತಾ?" "..೪೪೪೫ ಮೆಟ್ಟಿಲುಗಳನ್ನಿಳಿಯಬೇಕು. ಅದೂ ಕೂಡ ನೀರು ಹರಿದು ಹರಿದು ಪಾಚಿಕಟ್ಟಿ ಜಾರುವ ಮೆಟ್ಟಿಲುಗಳು. ಗೊತ್ತಾ?" "ದಾರಿಯಲ್ಲಿ ಅನೇಕ ತಡಸಲುಗಳು ತಲೆಯ ಮೇಲೇ ಬೀಳುತ್ತವೆ. ಮೈ ನೆನೆಯುತ್ತದೆ. ಖಂಡಿತ! ಗೊತ್ತಾ?" "ನೀನು ಕಾಲು ಜಾರಿ ಬಿದ್ದರೆ ಸೀದಾ ಕಾಳೀ ನದಿಯ ಹೊಟ್ಟೆಗೇ .. .. ಗೊತ್ತಾ?" ". . . .ಮಾಲ್ಪಾ ತಲುಪುವಲ್ಲಿಗೆ ಹತ್ತು ಝರಿಗಳನ್ನು, ಬೆಟ್ಟದಿಂದಳಿದು ಬರುವ ತೊರೆಗಳನ್ನು ಇಳಿದು ದಾಟಬೇಕು. ಗೊತ್ತಾ?" .. .. .. .. ಭವಾನಿಸಿಂಗ್ ಒಂದೊಂದು ಗೊತ್ತಾ ಪ್ರಶ್ನೆಯ ನಂತರವೂ ಹಿಂತಿರುಗಿ ನನ್ನ ಮುಖ ನೋಡಿ ಭಯ ಎಲ್ಲಿಯವರಗೇರಿದೆ ಎಂದು ನಿರುಕಿಸುತ್ತ, "ನಾನು ಸುಳ್ಳು ಹೇಳುತ್ತಿಲ್ಲ. ದಿವಾನ್‌ಸಿಂಗ್‌ನನ್ನೇ ಕೇಳು. ನಂಬಿಕೆಯಿಲ್ಲದಿದ್ದರೆ ಪ್ರಾದೇಶಿಕ ವಿಕಾಸ ದಳದ ಸ್ಕೌಟ್ ಈ ಗಣೇಶನನ್ನೇ ಕೇಳು." ಎಂದು ಸಾಕ್ಷಿಗಳನ್ನೂ ಒದಗಿಸಿದ. ಇವರೆಲ್ಲರೂ ಸೇರಿ ನನ್ನನ್ನು ಬೇವಕೂಫ ಮಾಡುತ್ತಿದ್ದಾರೆನಿಸಿದರೂ ನಂಬದಿರಲೂ ಆಗಲಿಲ್ಲ. ನಿನ್ನೆ ಸಂಜೆ ಮಾಲ್ಪಾ ಮಾರ್ಗದ ಬಗೆಗೆ ವಿವರಿಸುತ್ತಾ ಕಟ್ಟೆಚ್ಚರದ ನಡಿಗೆ ಅವಶ್ಯವೆಂದು ಹೇಳಿ, ಆದಷ್ಟು ನಿಧಾನವಾಗಿ, ಭಯವಾದರೆ ಸಹಾಯಕರ ಕೈಹಿಡಿದು ನಡೆಯಬೇಕೆಂದಿದ್ದರು. ಭವಾನಿಸಿಂಗ್‌ನಂತೆ ವಿವರಗಳ ಪಟ್ಟಿ ಮಾಡಿರಲಿಲ್ಲ ಅಷ್ಟೆ.

''ಬೆಹನ್‌ಜಿ .. ಇವನು ಹೇಳಿದ್ದೆಲ್ಲ ನಿಜ. ಆದರೆ ಭಯ ಪಡುವ ಅಗತ್ಯವಿಲ್ಲ. ಹಣೆಯಲ್ಲಿ ಬರೆದಿದ್ದಂತಾಗುತ್ತದೆ. ಯಾವಾಗಲೂ ಒಳ್ಳೆಯದನ್ನೇ ಚಿಂತಿಸುವುದೊಳ್ಳೆಯದು. ಪ್ರತಿ ವರ್ಷ ಯಾತ್ರಿಗಳೆಲ್ಲರೂ ಇದೇ ದಾರಿಯಲ್ಲಿ ಹೋಗುವುದಿಲ್ಲವೇ? ಜಾಗರೂಕರಾಗಿದ್ದರಾಯಿತು. ಈ ಭವಾನಿಸಿಂಗ್ ಕೀಟಲೆ ಮಾಡಿಯಾನು. ಹೆದರಬೇಡ ನಿನ್ನ ಜೊತೆಯಲ್ಲಿ ನಾನಿರುತ್ತೇನೆ." – ಸ್ಕೌಟ್ ಗಣೇಶನ ಒತ್ತಾಸೆ. ಪ್ರಾತಃಪ್ರಾರ್ಥನೆಯನ್ನು ಮುಗಿಸಿ ಶಿಬಿರದ ಅಂಗಳದಿಂದಿಳಿಯುತ್ತಿರುವಾಗಲೇ ಇಷ್ಟೆಲ್ಲ ಬೆದರಿಕೆ ಸಾಂತ್ವನ. ಮುಂಜಾನೆಯ ಚಳಿಗಾಗಿಯೋ ಅಥವಾ ಅವನ ನಗು ನನಗೆ ಕಾಣದಿರಲೆಂದೋ ಬಾಯಿ ಮುಚ್ಚುವಂತೆ ಮಫ್ಲರ್ ಸುತ್ತಿದ್ದ ದಿವಾನ್‌ಸಿಂಗ್ ಕುದುರೆಯ ಜೀನು

ಓಡಿದು ಪಕ್ಕದಲ್ಲೇ ನಡೆದಿದ್ದ. ಉತ್ತರಿಸಲು ಬಾಯಿ ಬಿಟ್ಟರೆ ಬಣ್ಣಗೇಡಾದೀತೆಂದು ನಾನೂ ಮಾತಿಲ್ಲದೆ ಸುತ್ತಲೂ ನೋಡುತ್ತ ನಡೆದೆ . . . ಎರಡು ಕಿ.ಮೀ.ನಷ್ಟು. ನಿರ್ಮಲಾ ದೇವಿಯವರನ್ನು ಕುದುರೆಯೇರಿಸಿ ಭವಾನಿಸಿಂಗ್ ಬಹು ಮುಂದೆ ಹೋಗಿದ್ದ. ಹನುಮ ಯೋಗಿ ಗಣೇಶ ಬಂದಿದ್ದ ನನ್ನ ಬಗಲಿಗೆ. ದಾರಿಯುದ್ದಕ್ಕೂ ಬಿಟ್ಟು ಬಿಟ್ಟು ನಡೆಯುತ್ತಿದ್ದ ವೀಕ್ಷಕ ವಿವರಣೆ ಅವನಿಂದ. ಚಾರಣಿಗಳಾಗಿ ಪ್ರಕೃತಿಯನ್ನು ನೋಡುವುದರ ಜೊತೆಗೆ ಅಲ್ಲಿಯವನೇ ಆದ ಆ ಯುವಕನ ದೃಷ್ಟಿಯಲ್ಲಿ ಅವನ ಪರಿಸರದ ವಿವರಣೆಯನ್ನು ಕೇಳುತ್ತ ಸಾಗಿದ್ದೆ. ಇದೊಂದು ಅಪೂರ್ವ ಅನುಭವ.

ದೈತ್ಯ ಕೈಯೊಂದು ಪಚ್ಚ ಹಸುರಿಗೆ ಹಾಸಿದ್ದ ಹುಲ್ಲಿನ ವಿಶಾಲ ಹಾಸನ್ನು ಜಮಖಾನೆಯಂತೆ ನೂಕಿ ನೆರಿಗೆ ನೆರಿಗೆಯಾಗಿಸಿದಂತೆ ಸುತ್ತಲಿನ ಬೆಟ್ಟಗಳು ದೂರದಿಂದ ನುಣ್ಣಗೆ ಕಾಣುತ್ತಿದ್ದವು. ಅಲೆ ಅಲೆಯಾಗಿದ್ದ ಹಸುರಿನ ಮೇಲೆ ಅಲ್ಲಲ್ಲಿ ಹಿಂಜಿದರಳೆಯಂತೆ ಬಿಳಿ ಮೋಡಗಳು ಅಂಟಿಕೊಂಡಿದ್ದವು. ಕೆಲವು ಮೇಲಕ್ಕೇಳುತ್ತಿದ್ದವು. ಕೆಲವು ಬಹು ದೂರದ ಶಿಖರಗಳ ಮೇಲೆ ಸಿಲುಕಿಕೊಂಡಿದ್ದವು. ಬಿಳಿ ಹಸಿರು! ಎರಡೇ ಬಣ್ಣಗಳಲ್ಲಿ ಪರಿಸರಕ್ಕೆ ಅದೇನು ಮೋಡಿ ತುಂಬಿದ್ದಳು ಮಾಯಾವತಿ ಉಷಾದೇವಿ. ಕ್ಷಣಗಳಲ್ಲೇ ಅದಕ್ಕೆ ಕಿತ್ತಳೆ ಬಣ್ಣವನ್ನೂ ಸೇರಿಸಿ ಮತ್ತೊಂದು ಸೊಬಗಿನ ಸೆರಗನ್ನು ಬೀಸಿದ್ದಳು. ಅಲ್ಲೇ ನಿಂತು ರವಿಯು ಮೇಲೇರುವವರೆಗೆ ನಿಂತು ನೋಡುವಾಸೆ. ಆಸೆಯನ್ನನುಸರಿಸಿ ಕಾಲುಗಳು ನಿಧಾನವಾದುವು. ಈಗ ನನ್ನ ವೇಗ ಯಾರ ತಾಳ್ಮೆಯನ್ನಾದರೂ ಕೆಣಕುವಂತಿತ್ತು.

''ಬನ್ನಿ, ಇನ್ನೆರಡು ಕಿ.ಮೀ ನಂತರದ ಇಳಿತಕ್ಕೆ ಯಾರನ್ನೂ ಕುದುರೆಯ ಮೇಲೆ ಕೂರಿಸಲಾಗುವುದಿಲ್ಲ. ಈಗಲೇ ಕುಳಿತುಕೊಂಡರೆ ಬೇಗನೇ ಎಲ್ಲರನ್ನು ಸೇರಿ ಅವರೊಂದಿಗೆ ಇಳಿಯುವಿರಂತೆ." ಎಂದು ನನ್ನ ಉತ್ತರಕ್ಕೂ ಕಾಯದೆ ಕೈಹಿಡಿದು ಕುದುರೆಯ ಮೇಲೇರಿಸಿದ ದಿವಾನ್‌ಸಿಂಗ್.

ಕಡೆಯ ನೂರು ಅಡಿಗಳನ್ನು ನಡೆದು ಬೆಟ್ಟದ ತುದಿಗೆ ಬಂದಾಗ ಅದುವರೆವಿಗೂ ಮುಂದೆ ಮೇಲೆ ಇದ್ದ ಆಕಾಶ ಎರಡೇ ಹೆಜ್ಜೆಯಲ್ಲಿ ಕಾಲಿನ ಕೆಳಗೂ ಇಳಿದು ಹೋಗಿತ್ತು. ಬೆಟ್ಟದ ತುದಿಯ ಮೇಲೆ ನಾನೂ ಒಂದು ಕೋಡುಗಲ್ಲಿನಂತೆ ನಿಂತು ಬೀಸಿ ಬಂದ ಗಾಳಿಯ ರಭಸವನ್ನು ಅನುಭವಿಸಿದೆ. ಗರುಡನಂತೆ ಸುತ್ತಲೂ ತಿರುಗಿ ನೋಡುತ್ತ ಚಿತ್ರವನ್ನು ಚಿತ್ತದಲ್ಲಿ ಪ್ರತಿಯಿಳಿಸಿದೆ. ಎದುರಿಗೆ ೩-೪ ಅಡಿ ಅಗಲದ ಹಾದಿ. ಇಳಿಯುತ್ತಾ ಹೋದಂತೆ ಎಡಬದಿಗೆ ಕಡಿದಾದ ಬಂಡೆಗಲ್ಲಿನ ಬೆಟ್ಟ ಏರುತ್ತಾ ಹೋಗಿತ್ತು. ಬಲಬದಿಗೆ ಶೂನ್ಯ! ಪಾತಾಳದಲ್ಲಿ ಬೆಳ್ಳಿಯ ದಾರದಂತೆ ಮಿಂಚಿದ್ದ ಕಾಳೀ ನದಿ. ಮೊದಲ ಒಂದೆರಡು ಫರ್ಲಾಂಗ್ ದಾರಿಗೆ ಬಲಗೈಗೆ ಹಿಡಿಯಲು ಅನುವಾಗಿ, ಈಗಲೋ ಆಗಲೋ ಬೀಳುವಂತಿದ್ದ ಕಂಬಿಗಳಿದ್ದವು. ನಂತರ ಅದೂ ಕಾಣದಾಯಿತು. ಸಾರ್ವಜನಿಕ ನಿರ್ಮಾಣದವರು ಬಂಡೆಗಳನ್ನೊಡೆದು ಚಪ್ಪಡಿ ಹಾಸಿ ಮಾಡಿದ್ದ ಏರುಪೇರಿನ ಮೆಟ್ಟಿಲುಗಳು. ನಡುನಡುವೆ ೫೦-೧೦೦ ಅಡಿಗಳವರೆಗೆ ಮೆಕ್ಕಲು ಮಣ್ಣಿನ ದಾರಿ. ಮತ್ತೆ ಓರೆ ಕೋರೆ ಮೆಟ್ಟಿಲು. ಕಳಚಿ ಬಂದ ಕಲ್ಲು ಹೆಂಟೆ ಕೆಳಗುರುಳಿದಾಗ ಸದ್ದೇ ಕೇಳಿಸದಂತಹ ಆಳದ ಪ್ರಪಾತ. ನಾವೇನಾದರೂ ಬಿದ್ದರೆ ಕಾಳೀ ನದಿಯನ್ನು ಸೇರುವ ಮೊದಲೇ ಪುಡಿ ಪುಡಿಯಾಗಿ ಬೆಟ್ಟದ ಮಗ್ಗುಲಲ್ಲೇ ಚೆಲ್ಲಾಪಿಲ್ಲಿ. ೧೦-೧೫ ನಿಮಿಷಗಳ ಇಳಿತದಲ್ಲಿ ದಿಗಿಲನ್ನು ಹಿಂದಿಕ್ಕಿದ ಮುಷ್ಟಿ ಧೈರ್ಯ ಮನದೊಳಗೆ. ಇಳಿಯುವಾಗ ತಂತಾನೇ ಬಂದ ಒಟದ ನಡಿಗೆ ಕಾಲಿಗೆ. ಎರಡೂ

ಅಪಾಯಕಾರಿ ಅಂಶಗಳೇ. ಹಿಂದೆಯೇ ಬರುತ್ತಿದ್ದ ರಮೇಶ್ ಮೆಹ್ತಾ "ತಾರಾ ಬೆಹೆನ್ - ನಿಧಾನ, ನಿಧಾನ! ಇನ್ನೂ ಒಂದು ತಿಂಗಳು ಕಾಲು ಸೊಂಟ ನೆಟ್ಟಗಿರಬೇಡವೇ? ನಿಧಾನಿಸು." ಎಂದು ಎಚ್ಚರಿಕೆಯ ಕೂಗು ಹಾಕಿದರು. ಕಾಲಿಗೆ ಯಾವ ವೇಗ ಬಂದಿತ್ತೆನ್ನುವುದು ನಂತಾಗಲೇ ತಿಳಿದದ್ದು.

ಇಳಿಯುವವರಿಗೆ ಅನುಕೂಲವಾಗಲೆಂದು ಕುದುರೆಗಳನ್ನೆಲ್ಲಾ ಆಗಲೇ ಮುಂದೆ ಕಳುಹಿಸಿಯಾಗಿತ್ತು. ನಾವು ಮಹಿಳೆಯರೊಂದಿಗೆ ಸ್ಕೌಟ್ ಅಥವಾ ಪೋರ್ಟರ್ ಒಬ್ಬರು ಇದ್ದರು. ವಚನವಿತ್ತಂತೆ ಗಣೇಶ ನನ್ನ ಎಸ್ಕಾರ್ಟ್ ಆಗಿದ್ದ. ಮುಂದೆ ಸುಧಾರಿಸಿಕೊಳ್ಳುತ್ತಾ ನಿಂತಿದ್ದ ಅಹಮದಾಬಾದ್‌ನ ಸರಸ್ವತಿ ಪರಮಾರ್ ಹಿಂತಿರುಗಿ ಮೇಲೆ ನೂಡಲು ಹೇಳಿದರು. ಮರಳಿ ಬರುವಾಗ ಆ ತುದಿಗೇರಬೇಕು. ಎಂದರು. "ಆಗ ಕೈಲಾಸ ನೋಡಿ ಬಂದ ಶಕ್ತಿ ಅವರ ಮೈಯಲ್ಲಿರುತ್ತದೆ. ಶಂಕರ ಕೃಪೆ ದೊಡ್ಡದು. ಈಗೇಕೆ ಅದರ ಚಿಂತೆ ಮಾಡಬೇಕು?" ಗಣೇಶನ ಈ ಉತ್ತೇಜಕ ಮಾತುಗಳನ್ನು ಕೇಳಿದವಳಿಗೆ ಯೌವನದ ಉತ್ಸಾಹದ ಮರು ಪರಿಚಯವಾಯಿತು. ಜೀವನದುದ್ದಕ್ಕೂ ಇದೇ ಉತ್ಸಾಹ-ಮನೋಭಾವವಿದ್ದರೆಷ್ಟು ಚೆನ್ನ ಎನಿಸಿತು.

೪೪೦೦ ಮೆಟ್ಟಿಲುಗಳೋ ಅಥವಾ ನಾಲ್ಕು ಕಿ.ಮೀನ ಹೆಜ್ಜೆಗಳೋ ಅಂತೂ ಇಳಿದಿಳಿದು ಕಾಳೀ ನದಿಯ ದಡಕ್ಕೆ ಬಂದಾಗ ಕಾಲುಗಳಲ್ಲಿ ನಡುಕ. ಹಲ್ಕಿರಿದ ಬಾಯಲ್ಲಿ ಹಿಜ್ಜು ನಗು. ಕಣ್ಣಲ್ಲಿ ಬೆಳ್ನೊರೆಯನ್ನೆರಚುತ್ತಿದ್ದ ಕಾಳಿಯ ರಭಸ. ಕಿವಿಯಲ್ಲಿ ಕಾಳಿಯ ಮೊರೆತ ಮತ್ತು ಪಾದಗಳ ತುದಿಯಲ್ಲಿ ಬೆಂಕಿಯ ಉಂಡೆಗಳಿಟ್ಟಂತೆ ಉರಿ. ಅಭ್ಯಾಸವಿಲ್ಲದ ಬೂಟುಗಳಲ್ಲಿ ನಡೆನಡೆದು ಮೂರುದಿನಗಳಲ್ಲಿ ಎರಡೂ ಪಾದಗಳಲ್ಲಿ ಬೊಬ್ಬೆಗಳೆದ್ದಿದ್ದವು. ನಾವು ಬಂದಿದ್ದುದು ಲಖನ್‌ಪುರಕ್ಕೆ. ಪುರವೆಂದರೆ ಕಡಿದಾದ ಬಂಡೆಗಲ್ಲಿಗೆ ಆನಿಸಿ ನಿಂತಿದ್ದ ಚಹಾ ಅಂಗಡಿಯ ಎರಡು ಮನೆಗಳಷ್ಟೆ. ಅವುಗಳ ಪಕ್ಕದಲ್ಲಿ ಬೆಟ್ಟದ ತೀವ್ರ ತಿರುವಿನಲ್ಲಿ ಮೇಲಿನಿಂದ ಧುಮ್ಮಿಕ್ಕಿ ಹರಿಯುತ್ತಿದ್ದ ಹೆದ್ದೊರೆ. ತೊರೆಯನ್ನು ದಾಟಿದರೆ ಮನೆಗಳ ಮುಂದಿನ ೧೦/೧೦ ಅಡಿಗಳ ಚೌಕ. ಆ ಕಿರಿದಾದ ಚೌಕದಲ್ಲಿ ಹತ್ತು ಕುದುರೆ ನಿಂತರೆ ಮತ್ತೊಂದು ಕುದುರೆ ಅಥವಾ ಮಾನವ ಅವುಗಳ ಕಾಲಡಿಯಲ್ಲಿ ನುಸುಳಿ ಹೋಗಬೇಕಷ್ಟೆ. ಅಷ್ಟರಲ್ಲೇ ಹಾಗೂ ಹೀಗೂ ಸಿಲ್ಲಿಸಿ ಹದಿನೈದು ಕುದುರೆಗಳನ್ನು ತುರುಕಿ, ಹುಲ್ಲು ಹಾಕಿದ್ದರು. ಮೇಯುತ್ತಿದ್ದವು. ಅವುಗಳ ಗುಡಾಣದ ಹೊಟ್ಟೆಗಳನ್ನು ದಬ್ಬಿಕೊಂಡು ನನ್ನ ಸ್ಥೂಲಕಾಯವನ್ನು ತೂರಿಸಿ ಆ ಕಡೆಗೆ ಹೋಗಿಯೇ ಬಿಟ್ಟೆ. ಕಾಲು ಜಾರಿದರೆ ೧೦ ಅಡಿ ಕೆಳಗುರುಳಿ ಕಾಳೀ ನದಿಗೆ ಬೀಳುವುದಕ್ಕಿಂತ ಇದು ಲೇಸೆನಿಸಿತು. ಕುದುರೆಯ ಬಗೆಗಿದ್ದ ಭಯವೆಲ್ಲ ಹಾರಿ ಹೋಯಿತು.

ಮಾಲ್ಪಾಗೆ ಇನ್ನುಳಿದಿದ್ದ ದಾರಿಯಂತೂ ಭೂಗರ್ಭದಲ್ಲಿ ಹೊಕ್ಕಂತಿತ್ತು. ಬೆಟ್ಟದ ಬಂಡೆಯನ್ನು ಕೊರೆದು ಸಾಗಿದ್ದ ದಾರಿ. ಕೆಲವೆಡೆ ಬಂಡೆಯಿಂದ ಬಂಡೆಗೆ ಹಾಕಿದ್ದ ಕಟ್ಟಿಗೆಯ ಸೇತುವೆಯ ಕೆಳಗೆ ಭೋರ್ಗರೆವ ಜಲಧಾರೆ, ಕೆಲವೆಡೆ ಮಣ್ಣು ಕುಸಿದು ಮುಚ್ಚಿಹೋಗಿದ್ದ ದಾರಿಯ ಇಳಿಜಾರಿನಲ್ಲಿ ನೆಪ್ಪಿನ ಮೇಲೆ ನಡೆದಿದ್ದ ಕುದುರೆ. ಅದರ ಮೇಲೆ ನಾನು, ನನ್ನ ಹಿಂದೆ ದಿವಾನಸಿಂಗ್, ಅವನ ಹಿಂದೆ ಮೈಸೂರಿನ ರಘುಪತಿಯವರು ಕುಳಿತಿದ್ದ ಕುದುರೆ. ಇನ್ನಾರೂ ಕಾಣದಿದ್ದ ಕಾಡುದಾರಿ. ೨೫೦೦ ಅಡಿಗಳಷ್ಟು ಇಳಿದು ಕಾಳೀ ನದಿಯ ದಂಡೆಯಲ್ಲಿ ಸಾಗಿದ್ದೆವು. ಕೆಲವೆಡೆ ತಲೆಯಮೇಲೆ ಹೆಮ್ಮರಗಳ ಹಸಿರು ಚಪ್ಪರವಾದರೆ ಕೆಲವೆಡೆ ಕೆಳಗಿಳಿದು ಬಂದಿದ್ದ ಬೆಟ್ಟದ ಬಯಲು, ಮೇಲೆ

ನೀಲಾಗಸದ ಛಾವಣಿ. ಬಲಭಾಗದುದ್ದಕ್ಕೂ ನದಿಯ ಆ ದಂಡೆಯಲ್ಲಿ ಸಾಗಿದ್ದ ದಾರಿ. ಕೂಗಳತೆಯಲ್ಲಿದ್ದ ನೇಪಾಳದ ದಾರಿ. ಬ್ರಿಟಿಷರ ಸಹಕಾರದಲ್ಲಿ ನಿರ್ಮಿಸಿದ್ದ ಹೆಚ್ಚು ಸಮತಲವಾಗಿದ್ದ ದಾರಿ.

ಗಾಲಾ- ಮಾಲ್ಪಾ ದಾರಿಯುದ್ದಕ್ಕೂ ವಿವಿಧ ಆಕೃತಿ, ವಿಭಿನ್ನ ಎತ್ತರ ಬಳುಕಿನ, ವಿವಿಧ ಗಾತ್ರದ ಅನೇಕ ಜಲಪಾತಗಳು ಕಣ್ಣನ್ನ ತಣಿಸಿದ್ದವು. ಈ ಮಾರ್ಗವಂತೂ ಚಾರಣಿಗರ ಸ್ವರ್ಗ. ಛಾತಾ ಫಾಲ್(ಬಿಚ್ಚು ಕೊಡೆ) ಎಲ್ಲರ ಮೆಚ್ಚಿನ ಜಲಪಾತ. ಮೇಲಿನಿಂದ ಧುಮ್ಮಿಕ್ಕುವಾಗ ಬಿಚ್ಚಿಕೊಂಡ ಛತ್ರಿಯಂತೆ ಅಗಲಕ್ಕೆ ಚಿಮ್ಮಿ ಬರುವುದು. ಇದನ್ನು ದಾಟುವಾಗ ನಮ್ಮ ಛತ್ರಿಯೂ ಬಿಚ್ಚಿರಬೇಕು. ಇಲ್ಲವಾದರೆ ಬಲವಂತ ಸ್ನಾನವಾದೀತು. ಮತ್ತೊಂದು ಕಡೆ ಮೇಲಿನ ಬೆಟ್ಟದ ಬಂಡೆ ದಾರಿಯ ಇನ್ನೊಂದು ಪಕ್ಕಕ್ಕೂ ಚಾಚಿಕೊಂಡಿದ್ದು ಅದರ ಮೇಲೆ ಬೀಳುವ ಜಲಪಾತವು ನೀರಿನ ಘಾಡ ಪರದೆಯಂತೆ ಬೀಳುವುದು ತಲೆಯ ಮೇಲಿನ ಬಂಡೆಗಳ ಸಂದಿನಲ್ಲಿ ಹಲವಾರು ಕಡೆ ಜಿನುಗುತ್ತಿದ್ದ ನೀರಿನ ತೆಳುವಾದ ಪರದೆ ಮೈ ಮನ ತಣಿಸುವುದು. ಭವಾನಿಸಿಂಗ್ ಹೇಳಿದ್ದುದೆಲ್ಲವೂ ಅಡ್ಡಿ ಆತಂಕಗಳ ಬರಿಯ ಪಟ್ಟಿಯಾಗಿದ್ದುದು ಈಗ ರೋಮಾಂಚನ ತಂದ ಅನುಭವಗಳಾಗಿದ್ದವು. ಆದರೆ ನನ್ನ ರೋಮಾಂಚನವನ್ನು ಹಂಚಿಕೊಂಡವನು ಭವಾನಿಸಿಂಗ್ ಆಗದೆ ಗಣೇಶನಾಗಿದ್ದ. ದಿವಾನ್‌ಸಿಂಗ್ ಕುದುರೆಯ ಸಂಗಡ ಮುಂದೆ ನಡೆದಿದ್ದ. ನಾನು, ನನ್ನ ಜೊತೆಯಿದ್ದುದರಿಂದ ಗಣೇಶ, ಇಬ್ಬರೂ ನೆನೆದೆವು. ಅಂತೆಯೇ ನನ್ನ ನಡುಪಟ್ಟಿಯಲ್ಲಿದ್ದ ಕ್ಯಾಮರಾ ಕೂಡ.

ನಮ್ಮ ಎಡಗಡೆಗೆ, ಮೇಲೆ ಸುಮಾರು ೧೫೦೦-೩೦೦೦ ಅಡಿಗಳೆತ್ತರದಲ್ಲಿ ಬೆಟ್ಟದ ಮೇಲ್ತುದಿಯ ಮಗ್ಗುಲಲ್ಲಿ ಕೊಚ್ಚಿದಂತೆ ೭೮ ಆಕಾರದ ಮಾರ್ಗ ಭಾಗವನ್ನು ತೋರಿಸಿ 'ಅದು ಹಿಂದೆ ಉಪಯೋಗಿಸುತ್ತಿದ್ದ ದಾರಿ. ನಾವು ಹೋಗುತ್ತಿರುವ ಮಾರ್ಗಕ್ಕಿಂತ ಬಹಳ ಕಠಿಣವಾದ ಮಾರ್ಗ ಅದು. ಅದರಲ್ಲಿಯೇ ನಿಮ್ಮ ಕಡೆಯ (ದಕ್ಷಿಣದ) ಮಹಾರಾಜರು ಹೋಗಿದ್ದರು.' ಎಂದು ಗಣೇಶ ವಿವರಿಸಿದ. ಮೈಸೂರು ಮಹಾರಾಜರಾಗಿದ್ದ ಕೃಷ್ಣರಾಜ ಒಡೆಯರು ಹಾದು ಹೋಗಿದ್ದ ಆ ದಾರಿಯನ್ನು ನೋಡಿ ಆ ಕ್ಷಣಕೆ ಬಲು ಹೆಮ್ಮೆಯಾಗಿತ್ತು.

ಬೆಟ್ಟದ ಕಿಬ್ಬಿಯನ್ನು ಬಿಟ್ಟು, ಬಲ ಬದಿಯ ಮೈದಾನಕ್ಕೆ ಹೊರಳಿದ ಹಾದಿಯಲ್ಲಿ ೩೦೦-೪೦೦ ಅಡಿಗಳು ಬಂದರೆ ಚಹಾದಂಗಡಿಯ ಮತ್ತೊಂದು ಹಳ್ಳಿ-ಅಂಗಡಿಯ ಕಟ್ಟೆ. ಅದಾಗಲೇ ನಾಲ್ಕೈದು ಯಾತ್ರಿಗಳು ಕುಳಿತು ಚಹಾ ಕುಡಿಯುತ್ತಿರುವುದು ದೂರದಿಂದಲೇ ಕಾಣುತ್ತಿತ್ತು. ಜೊತೆಯಲ್ಲಿ ಬರುತ್ತಿದ್ದ ಗಣೇಶ ನಮಗೆ ಕೇಳಿಸಿಯೂ ಗೊತ್ತಾಗದಿದ್ದ ಯಾವುದೋ ಸದ್ದನ್ನು ಕೇಳಿ ಹಿಂತಿರುಗಿದವನೇ, ಹಿಂದಕ್ಕೋಡಿದ. ಚಹದಂಗಡಿಯ ಕಟ್ಟೆಯ ಮೇಲೆ ಕುಳಿತಿದ್ದ ಜೈಪುರದ ಮೋಹಿನಿ ದೇವಿ, ಬಡಾಯಿಯಾ ಮತ್ತಿತರರು 'ನೋಡಿ! ನೋಡಿ! ಕಲ್ಲು ಬಂಡೆ ಉರುಳುತ್ತಿದೆ!' ಎಂದು ಕೂಗಿಕೊಂಡರು. ಹಿಂತಿರುಗಿ ಬೆಟ್ಟದ ಮೇಲೆ ನೋಡಿದಾಗ ಕಂಡ ದೃಶ್ಯ-ಭಯಾನಕ! ಸುಮಾರು ೧ ೧/.೨ ಮೀಟರ್ ಅಗಲದ ಬಂಡೆಗಳ ಜೊತೆ ಪುಡಿಗಲ್ಲುಗಳು ಬೆಟ್ಟದ ಮೇಲಿಂದ ಉರುಳಿ ಬೀಳುತ್ತಿದ್ದವು. ಅದೇ ಜಾಗದಲ್ಲಿ ಹದಿನೈದು ನಿಮಿಷಗಳ ಹಿಂದೆ ನಾವಿದ್ದೆವು. ನಮ್ಮ ಹಿಂದೆ ಬರುತ್ತಿದ್ದ ಆರೇಳು ಯಾತ್ರಿಗಳು, ಸಂಗಡಿಗರು ಈಗಲೂ ಅಲ್ಲಿಯೇ ಹತ್ತಿರದಲ್ಲಿದ್ದರು. ದಿಙ್ಮೂಢರಾಗಿ ನಿಂತು ನೋಡುತ್ತಿದ್ದ ನಮ್ಮ ಬಳಿಗೆ ಹತ್ತು ನಿಮಿಷಗಳಲ್ಲಿಯೇ ಹಣೆಯಿಂದ ಬೆವರೊರೆಸಿಕೊಳ್ಳುತ್ತಾ ಬಂದ ಗಣೇಶ. ಲಯಸನ್ ಆಫೀಸರ್ ಸತೀಶ್ ಕುಮಾರ್, ಮಂದಾಕಿನಿ ಮತ್ತು ಇತರ ಐದಾರು

ಮಂದಿ ಅರ್ಧ ಗಂಟೆಯ ನಂತರ ನಮ್ಮ ಬಳಿಗೆ ಬಂದಾಗಲೇ ನಮಗೆ ಈ ಶಿಲಾಪಾತದ ವಿವಿರ ಸಿಕ್ಕಿದ್ದು. ಸತೀಶ್ ಕುಮಾರರ ಕುದುರೆ ಹಿಂದಕ್ಕೆ ಜಿಗಿದು ನಿಂತು ಇದರ ಬಗ್ಗೆ ಮೊದಲ ಸಂಜ್ಞೆ ನೀಡಿತಂತೆ. ಆ ಕ್ಷಣವೇ ಪೋರ್ಟರ್‌ಗಳು ಯಾತ್ರಿಗಳನ್ನು ತಡೆದು ಹಿಂದೆ ಸರಿಸಿದರಂತೆ. ಬಂಡೆಗಳು ಉರುಳುವುದು ನಿಂತ ಒಂದೆರಡು ನಿಮಿಷಗಳ ನಂತರ ಯಾತ್ರಿಗಳು ಓಡುತ್ತ ಬೆಟ್ಟದ ಕಿಬ್ಬದಿಯನ್ನು ಬಿಟ್ಟು ಬಯಲಿಗೆ ಬಂದರು. ಒಮ್ಮೆ ಕುಸಿತ ಉಂಟಾದ ಸ್ಥಳದಲ್ಲಿ ಮಣ್ಣಿನ ಹಿಡಿತ ಸಡಿಲಗೊಳ್ಳುವುದರಿಂದ ಮತ್ತೆ ಕಲ್ಲು ಉರುಳುವುದು ಸಾಮಾನ್ಯ. ಜಲಪಾತವನ್ನು ನೋಡಿ ರೋಮಾಂಚನಗೊಂಡಿದ್ದ ನಮ್ಮ ಮನಸ್ಸು ಶಿಲಾಪಾತವನ್ನು ನೋಡಿದಾಗ ನಡುಗಿತ್ತು. ಹೃದಯ ಬಾಯಿಗೇ ಬಂದಿತ್ತು. ಬಿಸಿಲು ಏರಿದಂತೆ ರಾತ್ರಿ ಗಟ್ಟಿಕೊಂಡ ಹಿಮ ಕರಗಿ ಮಣ್ಣು ಸಡಿಲಗೊಂಡಾಗ ಈ ರೀತಿ ಶಿಲೆಗಳು ಕಳಚಿಕೊಂಡು ಉರುಳುವುದು. ಈ ಕಾರಣಕ್ಕಾಗಿಯೇ ಬೆಳಗ್ಗೆ ಎಂಟು ಗಂಟೆಗೆ ಮೊದಲೇ ಇಂತಹ ಸ್ಥಳಗಳನ್ನು ದಾಟಿರಬೇಕೆಂದು ಸ್ಥಳೀಕರ ಒತ್ತಾಯ. ಅದಕ್ಕಾಗಿ ಆರು ಗಂಟೆಗೇ ಚಾರಣಕ್ಕೆ ಆರಂಭಿಸಿರುತ್ತಿದ್ದೆವು. ಎಲ್ಲರೂ ಚಹಾಂದಗಡಿಯ ಜಗುಲಿಯಲ್ಲಿ ಕುಳಿತು ಬಿಸಿ ಬಿಸಿ ಚಹಾ ಹೀರುತ್ತಾ ಶಿಲಾಪಾತವನ್ನು ಹದಿನೈದು ನಿಮಿಷ ವಿಶ್ಲೇಷಿಸಿದ ನಂತರವೇ ದೇಹ ಮನಸ್ಸುಗಳೆರಡೂ ಸಮಸ್ಥಿತಿಗೆ ಬಂದದ್ದು.

ಗಾಲಾ–ಮಾಲ್ಪಾ ಮಾರ್ಗದಲ್ಲಿ ನೀರಹೊಳೆ, ಕಲ್ಲ ಹೊಳೆ, ಮರಳು ಮಣ್ಣ ಹೊಳೆ, ಹಿಮದ ಹೊಳೆ ಎಂದು ಪ್ರಕೃತಿ ಎಲ್ಲವನ್ನೂ ಬಿಚ್ಚುಗೈಯಲ್ಲಿ ಸುರಿಸುತ್ತಾ ಹೋಗಿದ್ದಾಳೆ.ಸೋಜಿಗವೆಂದರೆ ಇಲ್ಲಿನ ಹೂವಿನ ಹೊಳೆ, ಬೆಟ್ಟಗಳ ಮೇಲಿನಿಂದ ಕಳಗಿನವರೆಗೆ ಹರಡಿಕೊಂಡಿರುವ ಹುಲ್ಲಿನ ಹಾಸಿನ ಮೇಲೆ ಚಿಕ್ಕ ಚಿಕ್ಕ ಬಣ್ಣ ಬಣ್ಣದ ಹುಲ್ಲು ಹೂಗಳು ಅರಳಿ ನಿಂತು, ಹಸಿರು ಪಡಗಳ ನಡುವೆ ಬಣ್ಣದ ಹೂವಿನ ಹೊಳೆ. ಈ ಹೂವಿನ ಹೊಳೆಗೆ ಹಿಮ್ಮೇಳವಾಗಿ ಕಾಳಿ ನದಿಯ ಭೋರಿಡುವ ಸದ್ದು. ರಮಣೀಯತೆಗೆ ರೌದ್ರತೆಯನ್ನು ಸೇರಿಸುವ ಪ್ರಕೃತಿಯ ಹುನ್ನಾರವಿದು. ಮಾಲ್ಪಾ ಸಮೀಪಿಸಿದಂತೆ ಎರಡೂಕಡೆ ೧೫೦೦–೨೦೦೦ ಅಡಿಗಳವರೆಗೆ ಏರಿರುವ ಪರ್ವತಗಳ ನಡುವೆ ಕೆಳಗೆ ಇಕ್ಕಟ್ಟಾದ ಕಣಿವೆಯಲ್ಲಿ ಹರಿಯುವ ಕಾಳೀ ನದಿಯ ಸದ್ದು ಸುತ್ತಲೂ ಹರಡಿಕೊಳ್ಳಲಾಗದೆ, ಅಲ್ಲಲ್ಲೇ ಪ್ರತಿಧ್ವನಿಸಿ ಗುಂಭ ಮೊರತವಾಗಿ ನೆಲದೊಳಗಿನಿಂದ ಬಂದ ಗುಡುಗಿನಂತೆ ವಿಶಿಷ್ಟ ಸದ್ದು. ಈ ಮೊರೆತವನ್ನು ಇಮ್ಮಡಿಗೊಳಸಲೆಂಬಂತೆ ನದಿಯು ತನ್ನ ಪಾತ್ರದಲ್ಲೇ ಕೊರೆದು ನಿಲ್ಲಿಸಿದ ಹೆಬ್ಬಂಡೆಗಳು. ಹರಿಯುವ ನೀರಿನ ಅಗಾಧ ಶಕ್ತಿಯ ಅರಿವು ಇಲ್ಲಿ ಆಗುವುದು.

ಗಾಲಾದವರೆಗೆ ನೋಡಿದ ಪ್ರಕೃತಿ, ನಮ್ಮಳವಿನಲ್ಲೇ ಬೆಳೆಯುತ್ತಾ ಬಂದವಳು, ಮಾಲ್ಪಾ ದಾರಿಯಲ್ಲಿ ನಮ್ಮನ್ನೇ ನುಂಗುತ್ತಾಳೆ. ಇಲ್ಲಿ ಹಿಮಾಲಯದ ಬೃಹನ್ನತೆ, ಅಗಾಧತೆಯ ಸುಳಿವು ಸಿಕ್ಕು, ನಮ್ಮಲ್ಲಿ ಅದರ ಬಗೆಗಿರುವ ಗೌರವದ ಜೊತೆಗೆ ಭಕ್ತಿಯ ಭಯವೂ ಸೇರಿತ್ತು. ಇಂದಿನ ಚಾರಣವು ನಿಜವಾದ ಚಾರಣ. ದೈಹಿಕ ಶ್ರಮ, ಮಾನಸಿಕ ಉಲ್ಲಾಸ, ಬೌದ್ಧಿಕ ಉತ್ತೇಜನಗಳ ಜೊತೆಯಲ್ಲಿ ಪ್ರಾಕೃತಿಕ ಗಂಭೀರತೆಯನ್ನೂ ಅನುಭವಿಸುವ ಮಂಗಳಮಯ ಪಥವಿದು. ಮರಳಿ ಮರಳಿ ಹೋಗುವಂತೆ ಮಾಡುವ ಹಾದಿಯದು. ಮಾಲ್ಪಾ ಶಿಬಿರವನ್ನು ಸೇರಿದಾಗಿನ ನಮ್ಮ ಸ್ಥಿತಿ ನವಜಾತ ಶಿಶುವಿನಂತೆ. ಹಲವು ರೀತಿಯಲ್ಲಿ ಮರು ಹುಟ್ಟು ಪಡೆದಂತಿತ್ತು.

೬೭೭೦ ಅಡಿಗಳ ಮಟ್ಟದಲ್ಲಿರುವ ಮಾಲ್ಪಾ ಶಿಬಿರವನ್ನು ಸೇರಿದ ಕೂಡಲೇ ಬೂಟು ಬಿಚ್ಚಿ, ನಮ್ಮ ಜೊತೆಯಲ್ಲಿದ್ದ ಮೆಡಿಕಲ್ ಅಸಿಸ್ಟೆಂಟ್ ಅವರ ಬಳಿಗೆ ಓಡಿದೆ. ಎರಡೂ ಹೆಬ್ಬೆರಳುಗಳ

ಒಳಬದಿಗೆ ಒಂದಿಂಚು ಉದ್ದದ ಕಡಲೆಕಾಳು ಗಾತ್ರದ ಹೊಪ್ಪಳೆಗಳು ಕೆಂಪಾಗಿ ಕೋಪಗೊಂಡಿದ್ದವು. ಅವನ್ನು ನೋಡಿದ ವೈದ್ಯರಿಗೆ ಅನಿವಾರ್ಯವಾಗಿ ಸಲಹೆಕೊಡುವ ಪರಿಸ್ಥಿತಿ. 'ಇವನ್ನು ನಿನ್ನೆಯೆ ತೋರಿಸಿ ಮುಲಾಮು ಪಚ್ಚಿದ್ದರೆ ಇಂದಿನ ನಡಿಗೆ ಸುಲಭವಾಗುತ್ತಿತ್ತು ಅಲ್ಲವೇ? ದೇಹಕ್ಕೇನೇ ತೊಂದರೆ ಬಂದರೂ ಕಡೆಗಣಿಸದಿರಿ. ಹೇಳಲು ಹಿಂಜರಿಯದಿರಿ. ನಿಮ್ಮ ಸ್ವಾಸ್ಥ್ಯಕ್ಕಾಗಿ ತಾನೆ ನಾವೂ ಕಷ್ಟ ಬಿದ್ದು ನಿಮ್ಮೊಡನೆ ನಡೆದಿರುವುದು.' ಎಂದರು. ಹೊಪ್ಪಳೆಗಳನ್ನೊಡೆದು, ಮೇಲಿನ ಚರ್ಮ ಕಿತ್ತುಹಾಕಿ ಮುಲಾಮನ್ನು ಮೆತ್ತಿ ಬ್ಯಾಂಡೇಜು ಸುತ್ತಿದ ಮೇಲೆ ಇಬ್ಬರಿಗೂ ನೆಮ್ಮದಿ.

ಇಳಿ ಬಿಸಿಲಿನ ಹಿತವಾದ ಕಾವಿನಲ್ಲಿ ಶಿಬಿರದ ಹಿತ್ತಲಿನ ಏಕಾಂತದಲ್ಲಿ, ಕಾಳೀ ನದಿಯನ್ನು ನೋಡುತ್ತ ಕಾಲುಚಾಚಿ ಕುಳಿತವಳು ನೆಮ್ಮದಿಯ ನಾವೆಯನ್ನೇರಿ ಕಾಳೀ ನದಿಯ ಪ್ರವಾಹದಲ್ಲಿ ತೇಲಿದೆ. ಹಗಲುಗನಸಿನ ಕುದುರೆಯೇರಿ ನೇಪಾಳದ ಪರ್ವತವನ್ನೇರಿದೆ. ಇಂದ್ರಾಣಿ-ಶಚೀ ದೇವಿಯಂತೆ ನನ್ನೆದುರಿನ ಜಗತ್ತನ್ನು ವೀಕ್ಷಿಸುತ್ತ ಕುಳಿತ ಆ ಕ್ಷಣಗಳು ಅಲೌಕಿಕ.

ಮಾಲ್ಪಾ ಶಿಬಿರದ ಹಿತ್ತಲ ೨೫-೩೦ ಅಡಿ ಅಗಲದ ನೆಲದಲ್ಲಿ ಬೆಳೆದು ನಿಂತಿದ್ದ ಆಲೂಗಡ್ಡೆಯ ಕೈ ತೋಟ. ಅದರ ಅಂಚಿಗೆ ೩೫-೪೦ಅಡಿ ಆಳದಲ್ಲಿ ಕಾಳೀ ನದಿಯ ಕುಣಿತದ ಹರಿವು. ಸಮುದ್ರ ದಂಡೆಯಲ್ಲಿಯಂತೆ ನದಿಯ ಏಕನಾದ, ಪರಿಸರದಲ್ಲಿ ನದಿಯ ರಭಸದ ಕಂಪನ ಇಂದ್ರಿಯ ಗೋಚರವಾಗಿತ್ತು.

ನೇಸರು ಕಂತುತ್ತಿದ್ದಂತೆ, ಸಂಜೆಯ ಕಾರ್ಯಕ್ರಮಕ್ಕೆ ಕಂಬಳಿ ಹಾಸಿ ಕುಳಿತೆವು. ಇಂದು ಸಂಜೆ, ಮೊದಲ ಬಾರಿಗೆ ತವಾಘಾಟ್‌ನಿಂದಲೂ ನಮ್ಮೊಡನಿದ್ದ ಪೋರ್ಟರ್ ಪೋನಿವಾಲಾಗಳೂ ಕಾರ್ಯಕ್ರಮದಲ್ಲಿ ಭಾಗವಹಿಸಿದರು. ಮೊದಲೆರೆಡು ಘಳಿಗೆ ನಾಚಿದರೂ ಪಾಲ್ಗೊಳ್ಳುವ ಉತ್ಸಾಹ ಹತ್ತಿಕ್ಕಲಾರದೆ ತಮ್ಮ ಹಾಡುಗಾರಿಕೆಯನ್ನು ಮೆರೆದರು. ಜಾನಪದ ಗೀತೆಗಳು, ಗಜಲ್, ಭಜನೆ ಹಾಡುಗಳು ಒಂದರ ಮೇಲೊಂದು. ಹೇಳಿ ಕೇಳಿ ಪರ್ವತದ ಗಂಧರ್ವರಿವರು. ಅವರ ಗಾನಕ್ಕೆ ಶ್ರುತಿಯಿಟ್ಟವಳು ಕಾಳೀ ನದಿ. ಕುಳಿತಿದ್ದ ಸ್ಥಳದ ಮಹಿಮೆ. ಇಂದಿನದು ದಿವ್ಯಗಾನವಾಗಿತ್ತು.

ಹಿಂದಿನ ದಿನಗಳಂತೆ ಇಂದೂ ಯಾತ್ರಿಗಳೆಲ್ಲರೂ ಒಟ್ಟಿಗೆ ಶಿಬಿರದಿಂದ ಹೊರಟರೂ ಅರ್ಧಗಂಟೆಯೊಳಗೇ ಯಥಾಶಕ್ತಿ ಯಥಾರೀತಿಯಾಗಿ ನಾವು ಬಿಡಿಬಿಡಿಯಾಗಿದ್ದೆವು. ಇವತ್ತು ನಾನು ಮತ್ತು ನಿರ್ಮಲಾರೊಂದಿಗೆ ಮುಂಬಯಿಯ ಮಂದಾಕಿನಿ ಮೇಘಾನಿಯೂ ನಡೆದಿದ್ದರು. ಸಂಗಡ ಕುದುರೆ ಹಿಡಿದ ಭವಾನಿಸಿಂಗ್, ದಿವಾನಸಿಂಗ್ ಮತ್ತು ಗಣೇಶ. ಗುಂಪು ಸಾಕಷ್ಟು ದೊಡ್ಡದಿತ್ತು. ಉತ್ಸಾಹದಲ್ಲಿ ಹರಟುತ್ತಾ ನಡೆದಿದ್ದೆವು. ಬೆಳಗಿನ ಪರಾಠಾ ಉಪಹಾರದ ಬಲದಿಂದ ಬಿಸಿಲೇರಿದ್ದರೂ ಸಾಕಷ್ಟು ವೇಗದಲ್ಲೇ ನಾನೂ ನಡೆದಿದ್ದೆ.

'ಇದೀಗ ನೀನು ಕುಮಾವ್‌ನಲ್ಲೂ ನಡೆಯಬಲ್ಲೆಯೆಂದಾಯಿತು.' ಎಂಬ ಭವಾನಿಯ ಎಡಚು ಮೆಚ್ಚುಗೆಯ ಹೇಳಿಕೆ ಒಗಟಿನಂತಿತ್ತು. "ಹೌದು. ಈಗ ನಿನ್ನ ನಡಿಗೆ ಬಹಳ ಸುಧಾರಿಸಿದೆ. ಮೊದಲ ದಿನ ನಿನ್ನ ಬಳಿಗೆ ಬಂದರೆ ಬುಸುಗುಡುವ ಸದ್ದು ಬಹು ಜೋರಿತ್ತು. ಮಾತಿಲ್ಲ ಕತೆಯಿಲ್ಲ. ಪಾಂಗುಯಿಂದ ಗಾಲಾವರೆಗೆ ಬರುವಾಗ ಮಾತನಾಡಿಸಿದರೆ ಉತ್ತರಿಸಲು ನೀನು ನಿಂತು ಬಿಡುತ್ತಿದ್ದೆ. ನಡಿಗೆ ಇಲ್ಲವೇ ಮಾತು. ಯಾವುದಾದರೂ ಒಂದು ಮಾತ್ರ. ಆದರೆ ಇಂದು ನೀನು ಮಾತನಾಡುತ್ತಲೇ

ನಡೆದಿದ್ದೀಯ. ನಿನ್ನ ಉಸಿರಾಟ ಒಂದು ರೀತಿಗೆ ಬಂದಿದೆ ಎಂದಾಯಿತು. ಬೆಟ್ಟ ಹತ್ತಿ ಇಳಿಯುವಾಗ ಘಾವಂತ ಪಡದೆ ಒಂದೇ ವೇಗದಲ್ಲಿ ನಡೆಯುತ್ತಿರಬೇಕು ಅದೇ ಬೆಷ್ಟ್!" ಹಾಡಿನ ಗುರುವು ಹಾದಿಯ ಗುರುವಾಗಿದ್ದ. "ಆದರೆ ಭವಾನೀ– ನನಗೆ ಮೊನ್ನೆಯಿಂದ ಈ ಬಿಸಿಲಿನಲ್ಲಿ ನಡೆಯುವುದೇ ಕಷ್ಟವಾಗಿದೆ. ಮತ್ತೆ ಮತ್ತೆ ನೀರು ಕುಡಿಯ ಬಾರದೆನ್ನುತ್ತೀಯೆ ಬೇರೆ." ಎಂದು ಹೇಳಿ ಅವನ ಹೆಗಲಿನಲ್ಲಿದ್ದ ನೀರಿನ ಬಾಟಲಿಯನ್ನೇ ಆಸೆಯಿಂದ ನೋಡಿದೆ. ತಕ್ಷಣವೇ "ಶುಭ ಶುಭ ಬೋಲೋ. ಹೇ ಭಗವಾನ್! ಇವಳ ತಲೆಯಲ್ಲೇನೂ ಇಲ್ಲವೇ? ಬರೀ ಬಾಯಿಯವಳು. ನಿಮ್ಮೆಲ್ಲರ ಅದೃಷ್ಟ ದೊಡ್ಡದು. ತವಾಘಾಟ್‌ನಿಂದಲೂ ಹಗುರ ಮಂಜು ಬಿಟ್ಟರೆ ಬಿಸಿಲು ಜೊತೆಯಲ್ಲೇ ಇದೆ. ಮಳೆ ಅಥವಾ ಮಂಜು ದಿನದ ವೇಳೆಯಲ್ಲೂ ಸುರಿದಿದ್ದರೆ ನಿಮ್ಮಲ್ಲಿ ಅರ್ಧದಷ್ಟು ಜನರನ್ನು ನಾವು ಎಳೆದೊಯ್ಯಬೇಕಾಗುತ್ತಿತ್ತು. ಹಾದಿ ಒಣಗಿರುವುದರಿಂದ ನಿನಗೆ ಜಾರಿಕೆ ಎಂಥ ಖತರ್‌ನಾಕ್ ಎಂದು ಗೊತ್ತಾಗಿಲ್ಲ. ಮರಳಿ ಬರುವಾಗ ಮಳೆ ಶುರುವಾಗಿರುತ್ತದೆ. ಆಗ ಇದೇ ಬಿಸಿಲಿಗಾಗಿ ಜಪಿಸುವೆ." ಎಂದ. ಹಾದಿಯ ಗುರುವೇ ರೀತಿಯ ಗುರುವೂ! ಅಂತೂ ಎಲ್ಲ ನೆಟ್ಟಗಿದ್ದರೂ ಅದನ್ನರಿಯಲಾರದ ಅತೃಪ್ತಿಯ ಜೀವಕ್ಕೆ ಚಾಟಿಏಟಿನಂತಿತ್ತು ಅವನ ಮಾತು. ಹಗಲಿರುಳು ಬದುಕಿಗಾಗಿ ಹೋರಾಟ ನಡೆಸುವ ಪೋರ್ಟರ್‌ಗಳಲ್ಲಿರುವ ತಾಳ್ಮೆ ತೃಪ್ತಿಯ ಕೊಂಚ ಭಾಗವಾದರೂ ನನ್ನಲ್ಲಿ ಬಂದರೆ ಸುಧಾರಿಸಿಯೇನೆನಿಸಿತು. "ನಿನ್ನ ಮಾತು ಒಪ್ಪಿದೆ ಸರಿ .. .. .. .. . ನಿನ್ನೆ ಸಂಜೆಯ ಕೂಟಕ್ಕೇಕೆ ಬರಲಿಲ್ಲ? ನಿಮ್ಮವರೆಲ್ಲರೂ ಇದ್ದರು. ನೀನೂ ಹಾಡಬಹುದಿತ್ತು." ಎಂದು ಕೇಳಿದಾಗ "ಬೆಳಗಿನಿಂದಲೂ ಸ್ವಸ್ಥವಿರಲಿಲ್ಲ. ಜ್ವರ ಬಂದಿತ್ತು. ಬಂದವನೇ ಯಾರೋ ಕೊಟ್ಟ ಮಾತ್ರೆ ನುಂಗಿ ಮಲಗಿ ಬಿಟ್ಟೆ." ಎಂದ. ಇದು ಸಹನೆಯ ಪರಮಾವಧಿಯಾಗಿತ್ತು. ಸ್ವಾಸ್ಥ್ಯವಿಲ್ಲದಿದ್ದರೂ ನಡೆದೇ ತೀರಬೇಕಾದ ಪರಿಸ್ಥಿತಿ. ಜ್ವರದ ಮೈಗೆ ಚಳಿಯನ್ನು ತಡೆಯಲು ಬೆಚ್ಚನೆ ಉಡುಪಿನ ಕೊರತೆ, ಮಲಗಲು ಸ್ಥಳಾಭಾವ. ಎಲ್ಲವನ್ನೂ ಸಹಿಸಿಕೊಂಡು ಬೆಳಗ್ಗೆ ಎಂದಿನಂತೆ ಕುದುರೆಯ ಹಿಂದೆ ನಡೆದಿದ್ದ. ಇಂಥವನ ಮುಂದೆ ನಮ್ಮ ಗೊಣಗಾಟದ ನಡವಳಿಕೆ ನಾಚಿಕೆಗೇಡಿನದಾಗಿತ್ತು. ಈ ಹರೆಯದ ಹುಡುಗರು ಅದೆಷ್ಟು ಮಂದಿ ದುಡಿಮೆಗೆ ನಿಂತವರು? ಇವರ ನೋವು ನಲಿವಿಗೆ ಆಸೆ ಆಕಾಂಕ್ಷೆಗಳಿಗ ಏನಾದರೂ ಬೆಲೆಯಿದೆಯೇ? 'ಇಂದಾದರೂ ಬಾ. ಎಲ್ಲರೂ ನಿನ್ನ ಹಳ್ಳಿ ಹಾಡುಗಳನ್ನು ಕೇಳಬೇಕು. ತಪ್ಪಿಸಬೇಡ.' ಎಂದು ಒತ್ತಾಯಿಸಿದೆ. ಪೆಚ್ಚುನಗೆ ನಕ್ಕು ತಲೆಯಾಡಿಸಿದನಷ್ಟೆ. ಇದು ಬರಿಯ ಜ್ವರದ ತಾಪವಲ್ಲ. ಒಳ ತಾಪ ಬೇರೇನೋ ಇರಬೇಕೆನಿಸಿತು. ಕೆದಕಿ ಕೇಳಲು ನಾನಾರು? ಏನು ಮಾಡಬಲ್ಲೆ? ಭವಾನಿಗೇನೆನಿಸಿತೋ ಅಥವಾ ಬೇಗನೇ ಬುಧಿ ಶಿಬಿರವನ್ನು ಸೇರಿ ಮಲಗಲೆಂದೋ ನಿರ್ಮಲಾದೇವಿ ಕುದುರೆಯೇರಿದ ಕೂಡಲೇ ಬೇಗ ಹೆಜ್ಜೆ ಹಾಕಿ ಮುಂದೆ ಹೋದ. ಮಾಲ್ಪಾಯಿಂದ ೧೦ ಕಿ.ಮೀ.ನ ಏರುದಾರಿಯಲ್ಲಿ ೮೮೫೦ ಅಡಿಗಳೆತ್ತರದಲ್ಲಿದ್ದ ಬುಧಿ ಶಿಬಿರವನ್ನು ಸೇರಲು ಇನ್ನೂ ಅರ್ಧ ದಾರಿಯಿತ್ತು. ಚಾರಣದ ಮಾರ್ಗ ನಿನ್ನೆಯದರಷ್ಟೇ ರಮ್ಯ ಆದರೆ ಅದಕ್ಕಿಂತಲೂ ಅಪಾಯಕಾರಿ. ಚಾರಣ ಪ್ರಾರಂಭಿಸಿದ ಮೊದಲ ದಿನವೇ ಈ ತರಹದ ದಾರಿಯಲ್ಲಿ ಬಂದಿದ್ದರೆ ನಾಲ್ಕೈದು ಜನರಾದರೂ ಬಿದ್ದು ಕಾಲು ಮುರಿದು ದಿಲ್ಲಿಗೇ ವಾಪಾಸಾಗುತ್ತಿದ್ದರು. ಕೆಲವರಾದರೂ ಕಾಲುಳುಕಿ ಕುಂಟುವವರಿದ್ದರು. ಆದರೆ ಇಂದಿಗಾಗಲೇ ಐದು ದಿನಗಳ ನಡಿಗೆಯ ಅಭ್ಯಾಸವಾಗಿತ್ತು. ಎತ್ತರದಲ್ಲಿನ ಹೊಸವಾತಾವರಣಕ್ಕೆ ಪಳಗುವುದರೊಂದಿಗೆ ಬಾಯಾರಿಕೆ– ಹಸಿವನ್ನು ಹತ್ತಿಕ್ಕುವುದು, ಭಾರವಾದ ಶೂಗಳಲ್ಲಿಯೇ ಅಂಕುಡೊಂಕು ಹಾದಿಯಲ್ಲಿ ನಡೆಯುವುದು, ನೀರಿನಲ್ಲಿಯ

ಬಂಡೆಗಳ ಮೇಲೆ ಜಿಗಿದು ದಾಟುವುದು, ಅದಕ್ಕೂ ಮುಖ್ಯವಾಗಿ ಅಂಗಾಲುಗಳಲ್ಲಿ ಹೊಪ್ಪಳಿ ಊತ, ಉರಿ ಏನೇ ಇದ್ದರೂ ನಡೆಯುತ್ತಾ ಹೋಗುವುದು ಅಭ್ಯಾಸವಾಗಿತ್ತು. ಎಲ್ಲಕ್ಕೂ ನಾವು ಪಳಗಿದ್ದೆವು. ಹಿಮಾಲಯದ ಎತ್ತರ-ವಿಸ್ತಾರಕ್ಕೂ ಮನಸ್ಸು ಕೊಂಚ ಕೊಂಚವೇ ಪಳಗಿದ್ದಂತಿತ್ತು. ಆದರೆ ಇಲ್ಲಿನ ಪ್ರಕೃತಿಯ ವೈವಿಧ್ಯಮಯ ಪ್ರದರ್ಶನಕ್ಕೆ ಯಾರೂ ಎಂದಿಗೂ ಪಳಗುವಂತಿಲ್ಲ. ಅವಳ ನಿಗೂಢತೆಯನ್ನು ಅರಿಯುವಂತಿಲ್ಲ. ನಿನ್ನೆ ನೋಡಿದ ಕಾಳೀ ನದಿಯ ರಭಸಕ್ಕೆ ನಾವು ಅಚ್ಚರಿಗೊಂಡಿದ್ದರೆ ಇಂದಿನ ಅವಳ ಪ್ರವಾಹ ಕಂಡು ದಿಙ್ಮೂಢರಾಗಿದ್ದೆವು. ಧುಮ್ಮಿಕ್ಕಿ ಕೆಳಗಿಳಿಯುವಾಗ ಕಗ್ಗಲ್ಲ ಬಂಡೆಯನ್ನು ವಿವಧಾಕೃತಿಗಳಲ್ಲಿ ಕೊರೆಕೊರೆದು ತನ್ನೊಡಲಲ್ಲೇ ನಿಲ್ಲಿಸಿಕೊಂಡಿರುವ ಇದರ ಪರಿ! ಅನೇಕ ಕಡೆ ಹೆಬ್ಬಂಡೆಗಳನ್ನೇ ಚಚ್ಚಿ ಹೊಡೆದೊಡೆದು ಸುರಂಗ ಮಾಡಿಕೊಂಡು ಮುನ್ನುಗುವ ಶಕ್ತಿ ಊಹಾತೀತ. ಕಾಳೀ ನದಿಯಷ್ಟೇ ಅಲ್ಲ, ಹಿಮಾಲಯದ ಪರ್ವತ ಪ್ರದೇಶದ ಎಲ್ಲ ಸಣ್ಣ ದೊಡ್ಡನದಿಗಳ ಪ್ರವಾಹವೂ ಬಹುಶಕ್ತಿಯುತವಾದುದು. ನಿಜವೆಂದರೆ ಹಿಮಾಲಯದ ಇಂದಿನ ರೂಪರೇಷಯ ರೂವಾರಿಗಳು ನದಿಗಳೇ. ಹಿಮಾಲಯವು ಭೂ ಮಟ್ಟದಿಂದ ಮೇಲಕ್ಕೇಳುತ್ತಿದ್ದಂತೆ, ಅಲ್ಲಾಗಲೇ ಹರಿಯುತ್ತಿದ್ದ ನದಿಗಳು ಈ ಹೀಮಾಲಯವನ್ನು- ಅದರೊಳಗಿನ ಗಡಸು ಶಿಲೆಯನ್ನೂ-ಕತ್ತರಿಸುತ್ತಾ ಕೆಳಗಿಳಿದು ಬಂದಿವೆ. ಬೇಸಿಗೆಯಲ್ಲಿ ಹಿಮಾಲಯದ ಶಿಖರಗಳ ಮೇಲೆ ಕೂಡಿರುವ ಹಿಮರಾಶಿ ಕರಗಿ ನದಿಯಾಗಿ ಹರಿದು ಬಂದರೆ ಮಳೆಗಾಲದಲ್ಲಿ ಮುಂಗಾರು ಮಳೆಯ ಹೇರಳ ನೀರು ಭಾರತದ ಕಡೆಗೆ ದಕ್ಷಿಣಾಭಿಮುಖವಾಗಿ ಕಡಿದಾದ ಇಳಿಜಾರಿನಲ್ಲಿ ನುಗ್ಗಿಬರುತ್ತದೆ. ಬೇಸಿಗೆಯಲ್ಲಿನ ನದಿಯ ನೀರಿನ ೬೦ ಪಟ್ಟು ನೀರು ಮಳೆಗಾಲದಲ್ಲಿ ನದಿಯನ್ನು ತುಂಬಿ ಹರಿದು ಬರುತ್ತದೆ. ಈ ಭಾರೀ ಮೊತ್ತದ ನೀರಿನೊಂದಿಗೆ ಕೆಳಗುರುಳಿ ಬರುವ ಕಲ್ಲು-ಮಣ್ಣೂ ಸೇರಿ ಕೊಡತಿಯಂತಾದ ನದಿಯು ಬಂಡೆಗಳನ್ನು ಕೊಚ್ಚಿ ಕೆಡವುತ್ತದೆ. ಕಂದಕಗಳನ್ನು ಇನ್ನೂ ಆಳವಾಗಿಸುತ್ತದೆ. ಉದಾಹರಣೆಗೆ ಧವಳಗಿರಿ ಮತ್ತು ಅನ್ನಪೂರ್ಣ ಪರ್ವತಗಳ ಶಿಖರಗಳು ೨೬ ಸಾವರಿ ಅಡಿಗಳೆತ್ತರಕ್ಕೇರಿದ್ದರೂ ನಡುವಿನ ಅಂತರ ಕೇವಲ ೨೨ ಮೈಲಿಗಳು. ಇವೆರಡರ ನಡುವೆ ಹರಿಯುವ ಕಾಲೀಗಂಡಕಿ ನದಿ ಭೂಮಟ್ಟದಿಂದ ೪೦೦೦ ಅಡಿಗಳಷ್ಟು ಎತ್ತರದಲ್ಲಿ ಹರಿಯುತ್ತದೆ. ಶಿಖರ ಮತ್ತು ಕಣಿವೆಗಳ ಅಂತರ-೨೨೦೦೦ ಅಡಿಗಳು! ಇಂತಹ ಕಡಿದಾದ ನದೀ ಕಣಿವೆಗಳು ಹಿಮಾಲಯದಲ್ಲಿ ಅನೇಕವಿವೆ. ಹಿಮಾಲಯದ ವಿಶೇಷತೆಗಳಲ್ಲೊಂದಾದ ಅವುಗಳ ಭವ್ಯರುದ್ರ ನಿಲುವು, ನೀರಿನ ರಮಣೀಯ ಹರಿವು ಅನ್ಯಾದೃಶ. ಪ್ರಪಂಚದ ಬೇರಾವ ಪರ್ವತ ಶ್ರೇಣಿಗಳಲ್ಲೂ ನದಿಗಳು ಈ ಬಗೆಯಲ್ಲಿ ಕಣಿವೆಗಳನ್ನು ಈ ರೀತಿ ತೆರೆದು ತೋರಿಸಿಲ್ಲ.

ಮೊದಲೆಲ್ಲಾ ಹಸಿರು ಸೂಸುವ ಎತ್ತರೆತ್ತರದ ವೃಕ್ಷಗಳ ಸೆರಗಿನಲ್ಲಿ ಕಂಪಿನ ಸುಳಿಗಾಳಿಯಲ್ಲಿ ಬೆಳಗಿನ ಎಳೆ ಬಿಸಿಲಿನಾಟವನ್ನು ನೋಡುತ್ತ ಬಂದವರಲ್ಲಿ ಎಲ್ಲವನ್ನೂ ತಮ್ಮೊಳಗೆ ತುಂಬಿಕೊಳ್ಳುವ ಸಾಹಸವಿತ್ತು. ಹಾದಿ ಸವೆದಂತೆ ಗಗನ ಚುಂಬಿ ಶಿಖರಗಳ ಮೇಲುದುರಿ ನಿಂತ ಹಿಮರಾಶಿ, ಗಾಳಿ ಬೀಸಿ ಬೀಸಿ ಬೋಳಾಗಿ ಗೋಡೆಯಂತೆ ನಿಂತ ಪರ್ವತಗಳ ಶಿಲಾಭಾಗಗಳು, ನೂರಾರು ಅಡಿಗಳೆತ್ತರದಿಂದ ಧುಮುಕುವ ಜಲಪಾತ, ಎಲ್ಲವನ್ನೂ ಒಂದೇ ಕ್ಷಣದಲ್ಲಿ ಇಲ್ಲವಾಗಿಸಿ ಮತ್ತೆ ತೆರೆದು ತೊರಿಸುವ ಮಂಜಿನ ತೆರೆಗಳು. ನಿಸರ್ಗದ ನೋಟವನ್ನು ನಮ್ಮೊಳಗೆ ತುಂಬಿಕೊಳ್ಳುವ ಬದಲಿಗೆ ನಾವೇ ಅದರಲ್ಲಿ ಕರಗಿ ಹೋದ ಅನಿರ್ವಚನೀಯ ಭಾವ-ಅನುಭಾವ! ಸಾಲದೆಂದು ದೂರದಲ್ಲೆಲ್ಲೋ ಕಣ್ಮರೆಯಲ್ಲಿದ್ದ ಕುರಿಗಳ ಕಿರುಗಂಟೆಗಳ ನಾದದೊಂದಿಗೆ ಕೇಳಿಯೂ ಕೇಳದಂತಿದ್ದ

ಕೊಳಲಿನ ದನಿ ನಮ್ಮ ಕರುಳನ್ನೇ ಹಿಡಿದೆಳೆದು ಕೊಂಡಂತೆ ವಿಚಿತ್ರ ಸುಖದ ನೊವು ಬೇರೊಂದು ಲೋಕಕ್ಕೆ ಸೆಳೆದಿದ್ದವು. ಇಂತಹ ಬೃಹತ್ ಸ್ಥಾವರಗಳೂ ಕೂಡ ಗಾಳಿ, ನೀರು, ಕಾಲಕ್ಕೆ ಬಲಿಯಾಗಿ ತಮ್ಮ ರೂಪವನ್ನು ಬದಲಿಸಿಕೊಳ್ಳುತ್ತವೆಯೆಂದ ಮೇಲೆ ಜಂಗಮ ವಸ್ತುಗಳ ಕ್ಷಣಿಕತೆಯೆಷ್ಟು? ಎಲ್ಲೆಲ್ಲೂ ಮಹಾ ಕಾಲನ ಕೈವಾಡವೇ!

ಒಂದೆರಡು ಹೆಜ್ಜೆ ಮುಂದೆ ನಡೆದಿದ್ದ ಗಣೇಶ್ ಹಿಂತಿರುಗಿ ನನ್ನನ್ನು ನೋಡಿ ನಿಂತ. ಯೋಚಿಸುತ್ತ ನಡೆದವಳು ಅವನಮಾತಿಗೆ ಉತ್ತರ ಕೊಡದೆ ಹೋದೆನೆಂದು ಕಾಣುತ್ತದೆ. 'ಏನಾಯಿತು ಏಕೆ ಹೆದರಿರುವೆ?' ಎನ್ನುತ್ತ ಹಿಡಿಯಲು ತನ್ನ ಕೈ ಚಾಚಿದ. 'ಅಲ್ಲಿ ನೋಡು ಮದರಾಸೀ ಅಮ್ಮಾ ಜೊತೆ (ನಿರ್ಮಲಾದೇವಿ) ಭವಾನೀ ನಿಂತಿದ್ದಾನೆ.' ನಿಂತವರ ಬಳಿಗೆ ಬಂದೊಡನೆ ಇವಳೂ ಹೆದರಿದ್ದಾಳೆ ನೋಡು ಎಂದು ನಕ್ಕ. "ಹೆದರಿದೆಯಾ? ಬೆಟ್ಟ ನಿನ್ನನ್ನು ನುಂಗತ್ತಿದೆಯಲ್ಲವೇ? ಗೊತ್ತು. ದೇವಗಂಗೆಯನ್ನೇ ಹಿಡಿದು ಬಿಟ್ಟ ಶಂಕರ ಭಗವಾನನೇ ಈ ಬೆಟ್ಟಗಳೆಂದುಕೊ. ಆಗ ಅವನ ಉಡಿಯಲ್ಲಿರುತ್ತೀಯಲ್ಲವೇ? ಭೋಲೆನಾಥನ ಮೇಲೆ ಭಾರಹಾಕಿ ಭಕ್ತಿಯಿಂದ ಯಾತ್ರಿಯಂತೆ ನಡೆ.." ರೀತಿಯ ಗುರುವೇ ಭಕ್ತಿಯ ಗುರುವೂ ಆದನೇ! ವಾಹ್ ರೇ ಭವಾನಿಸಿಂಗ್. ಯಾರ ಭಾಷಣವನ್ನು ಕೇಳಿದ್ದನೊ ಅಥವಾ ಅವನದೇ ಅನುಭವದ ಮಾತುಗಳೋ ನನ್ನನ್ನು ಮಾತ್ರ ತಬ್ಬಿಬ್ಬು ಮಾಡಿತ್ತು. ಮೌನವಾಗಿಯೇ ಹೆಜ್ಜೆ ಹಾಕಿದೆ. ನನ್ನ ಜೊತೆಯೇ ನಡೆಯತೊಡಗಿದ ನಿರ್ಮಲಾದೇವಿ "ಮಾತನಾಡುತ್ತಾ ಹೋಗಲು ನೀವು ಜೊತೆಗಿದ್ದರೆ ವಾಸಿ. ಈ ಜಾಗವೇ ವಿಚಿತ್ರ. ಹಿಂದಿನಿಂದ ಯಾರೋ ನೂಕಿಕೊಂಡು ಬಂದಂತಾಗುತ್ತದೆ. ಈ ಹುಡುಗನೂ ವಿಚಿತ್ರವಾಗಿ ನಡೆಯುತ್ತಿದ್ದಾನೆ." ಎಂದರು. ಈ ಮಾರ್ಗವಾಗಿ ಮೊದಲ ಸಲ ಬಂದವರೆಲ್ಲರಿಗೂ ವಿಶೇಷ ಅನುಭವವಾಗುವುದಂತೂ ನಿಜ. ಅದನ್ನರಿತಿರುವ ಭವಾನಿಸಿಂಗ್‌ನ ಯಾತ್ರಿಯಾಗುವ ಸಲಹೆಯನ್ನು ತರ್ಜುಮೆ ಮಾಡುತ್ತಾ ಅವನ ಜ್ವರದ ಬಗ್ಗೆ ವಿವರಿಸುತ್ತಾ ನಡೆದಂತೆ ಇಬ್ಬರ ಮೈ ಮನಸ್ಸು ಹಗುರವಾಯಿತು. ಅವನ ಸಲಹೆಯಲ್ಲಿದ್ದ ಗಂಗಾವತರಣದ ಕಥೆಯನ್ನು ಮನದಲ್ಲಿ ಮತ್ತೆ ಮತ್ತೆ ಮನನ ಮಾಡುತ್ತ ನಡೆದಿದ್ದೆ.

ಇಪ್ಪತ್ತನೇ ಶತಮಾನದ ಆವಿಷ್ಕಾರಗಳ ಸವಲತ್ತು ಸಾಮಾನು ಸರಂಜಾಮು ಇರುವ ಪರ್ವತಾರೋಹಿಗಳಿಗೇ ಹಿಮಾಲಯ ದುರ್ಭೇದ್ಯವೆನಿಸುವಾಗ ಸಾವಿರಾರು ವರ್ಷಗಳ ಹಿಂದಿನ ಭಾರತೀಯನಿಗೆ, ಅದೂ ಸುಡುಬಿಸಿಲಿನಲ್ಲಿ ಕಾದು ನಿಂತ ಬಯಲಿನಿಂದ ಬರುವ ಭಾರತೀಯನಿಗೆ ಹಿಮಾಲಯದ ಉನ್ನತ ಪರ್ವತಗಳ ಚಳಿ-ಹಿಮದ ನಾಡು ದುರ್ಗಮವಾಗಿದ್ದು ಬೇರೊಂದು ಲೋಕವಾಗಿ ಸ್ವರ್ಗವೇ ಆಗಿ ತೋರಲು ಸಾಕು. ಜೀವನದಾಯಿ ದೇವಭೂಮಿಯೆಂದು ಹಿಮಾಲಯವನ್ನು ಅವರು ಗುರುತಿಸಿದುದು ಸಹಜವೇ. ಉತ್ತರ ಭಾರತದ ಬಯಲು ಪ್ರದೇಶಗಳಲ್ಲಿ ಮುಂಗಾರು ಮಳೆಯ ಜಲದಾನದಿಂದ ಸಿಗುವುದು ಕ್ಷಣಿಕ ಜೀವದಾನ. ಬೇಸಿಗೆಯ ಬಿರುಸಿನ ದಿನಗಳಲ್ಲಿ ಹಿಮಾಲಯದಿಂದ ಹರಿದು ಬರುವ ಜೀವ ನದಿಗಳೇ ಇಂದಿಗೂ ಭಾರತೀಯರ ಜೀವಾಳ. ಆಸ್ತಿಕ ಭಾರತೀಯನಿಗೆ ಹಿಮಾಲಯವು ಶಿವನಾಗಿ, ಉಬ್ಬಿನಿಂತ ಪೂರ್ವ ಪಶ್ಚಿಮ ಬೆಟ್ಟಸಾಲು ಅವನ ನೊಸಲಾಗಿ, ದಕ್ಷಣಕ್ಕಿಳಿದು ಬಂದಿರುವ ಬೆಟ್ಟ ಗುಡ್ಡಗಳ ಸಾಲುಗಳು ಅವನ ಕೇಶವೆನಿಸುವುದು ಸಹಜ. ಸನಾತನ ನಂಬಿಕೆಯಂತೆ ಕೂದಲು ಶುಭದ, ಫಲವತ್ತತೆಯ, ಜೀವನದ, ಪ್ರಾಣಶಕ್ತಿಯ

ಸಂಕೇತ. ಅಂದ ಮೇಲೆ ಮುಗಿಲಿಗೇರಿರುವ ಹಿಮಾಲಯನ-ಶಿವನ ಕೇಶ ವೈಭವದಲ್ಲಿನ್ನೆಷ್ಟು ಪ್ರಾಣಶಕ್ತಿಯಿರಬೇಕು! ವ್ಯೋಮಕೇಶ ನಲ್ಲವೇ ಶಿವ? ಆ ಕೇಶಪಾಶದಲ್ಲಿ ಜೀವನದಿ ಗಂಗೆಯನ್ನು ಹಿಡಿದಿಟ್ಟ ಗಂಗಾಧರನಲ್ಲವೇ ಅವನು. ಸನ್ನ ರಾಶಿಯ ಕೇಶವನ್ನುಳ್ಳ ಹಿಮಾಲಯ, ಅವನ ಶಿರದಿಂದ ಸಲಿಸಲಿಮ ಬರುತ್ತಿದ್ದ ಜೀವಂತ ನದಿ ಕಾಳೀ ಇಬ್ಬರೂ ನಮ್ಮೊಡನೆ ಸಂವಾದಕ್ಕಿಳಿದು ಪುರಾಣ ಕಥೆ-ಗಂಗಾವತರಣದ ಮರುವ್ಯಾಖ್ಯಾನ ಮಾಡಿದ್ದರು. ಒಂದು ತಿಂಗಳ ಪ್ರವಾಸದ ಕೊನಗೆ ನನ್ನ ಶರೀರದಲ್ಲಿ, ವಿಚಾರಧಾರೆಯಲ್ಲಿ, ಮನೋವೃತ್ತಿಯಲ್ಲಿ ಏನೇನು ಬದಲವಾಣೆ ತರುವರೋ ಈ ಹಿಮಾಲಯ ಮತ್ತವನ ಒಡನಾಡಿ ಕಾಳೀ!

ಈಗಿನ ಮಟ್ಟಿಗೆ ಬುಧಿ ಶಿಬಿರವನ್ನು ಸೇರಲು ಕಾಳೀಯನ್ನು ದಾಟಿ ೨೦೦ ಅಡಿಗಳೆತ್ತರ ಗುಡ್ಡವನ್ನೇರಬೇಕಿತ್ತು. ಕಾಲಲ್ಲಿ ತ್ರಾಣವಿಲ್ಲ. ಗಂಟಲಲ್ಲಿ ಪಸೆಯಿಲ್ಲ. ಎದೆಯಲ್ಲಿ ಉಸಿರಿಲ್ಲ. ತಲೆಯಲ್ಲಿ ಬಿಗಿತ ಬಿಟ್ಟು ಇನ್ನೇನೂ ಇಲ್ಲ. ಹೊಟ್ಟೆಯಲ್ಲಂತೂ ಏನೇನೂ ಉಳಿದಿಲ್ಲ. ' ಹಾಯ್ ರಾಮ್ ನೀನು ಹೀಗೆ ಬೀಳುತ್ತೇಳುತ್ತ ನಡೆದರೆ ಕೈಲಾಸವನ್ನೆಂತು ಏರುವೆ? ನಡಿ ನಡಿ ಎಲ್ಲಾ ನಿನ್ನ ಮನಸ್ಸಿನಂತೆ-ಕಾಲಿಗೆ ಬುದ್ಧಿ ಹೇಳು.' ಗಣೇಶನ ಉತ್ತೇಜಕವಾಣಿ ಮೊಳಗಿತ್ತು. ಹದಿನೈದು ನಿಮಿಷ ಕಾಲಿನೊಂದಿಗೆ ಕದನ ಮಾಡಿ ಬುಧಿ ಶಿಬಿರದ ಹೊರಗಿನ ಕಟ್ಟೆಗೆ ದೇಹವನ್ನೆಳೆದು ತಂದು ಹಾಕಿದೆ. ಎದುರಿಗೆ ಶಬಿರದ ಅಂಗಳದಲ್ಲಿ ಅರಳಿ ನಿಂತಿದ್ದ ಕೈತೋಟದ ವಿವಿಧ ಹೂಗಳು ಗಾಳಿಗ ತೂಗಾಡಿ ಕಟ್ಟೆಯಮೇಲೆ ಕುಳಿತವಳನ್ನು ಬಳಿಗೆ ಕರೆದಿದ್ದವು. ಕಾಲು ಕುಂಟಿದರೂ ಕೈ ಹೂಗಳನ್ನು ತಡವಿತು. ಒಂದೊಂದೇ ಗಿಡವನ್ನು ಸವರುತ್ತಾ ಮೆಟ್ಟಿಲುಗಳನ್ನಿಳಿದು ಊಟದ ಮೇಜನ್ನಿಟ್ಟಿದ್ದ ಜಗುಲಿಗೆ ಬಂದಿದ್ದೆ-ನನಗರಿವಿಲ್ಲದೇ. ಕೈಗೆ ಬಂದ ರಸನಾ ಶರಬತ್ತಿನಿಂದ ಬಾಯಿಗೆ ಗಂಟಲಿಗೆ ತುಸು ಆರಾಮ ಸಿಕ್ಕು ಉಸಿರು ಕೆಳಮುಖವಾಯಿತು. ಯಾರೋ ಕೈಗಿತ್ತ ತಟ್ಟೆಯ ರೊಟ್ಟಿಯನ್ನು ತಿಂದ ಮೇಲೆ ನಾನೂ ಮನುಷ್ಯಳಾದೆ. ಇಂದಿನ ಊಟಕ್ಕೆ ನಮ್ಮ ತಂಡದವರೊಂದಿಗೆ ಎರಡನೇ ತಂಡದವರೂ ಇದ್ದರು. ಕೈಲಾಸ-ಮಾನಸ ಪ್ರವಾಸ ಮುಗಿಸಿ ದೆಹಲಿಗೆ ಹಿಂದಿರುಗುತ್ತಿದ್ದರು. ಮಾಡಿದ ಪ್ರವಾಸ ಯಾತ್ರೆಯ ಬಗೆಗೆ ಒಬ್ಬೊಬ್ಬರದ್ದೂ ಒಂದೊಂದು ರೀತಿಯ ಪ್ರತಿಕ್ರಿಯೆ. ಎಲ್ಲ ತಂಡದಲ್ಲಿಯೂ ಪ್ರವಾಸಿ, ಯಾತ್ರಿ, ಚಾರಣಿಗರು ಇರುತ್ತಾರಲ್ಲದೆ ಪ್ರತಿಯೊಬ್ಬರಲ್ಲಿಯೂ ಈ ಮೂವರೂ ಇದ್ದು ಸನ್ನಿವೇಶಕ್ಕೆ ತಕ್ಕಂತೆ ಯಾರಾದರೊಬ್ಬರು ಜಾಗೃತರಾಗುತ್ತಾರೆ. ಇದು ಸ್ವಾನುಭವಕ್ಕೆ ಬಂದ ಸಂಗತಿ.

ಎರಡನೇ ತಂಡದಲ್ಲಿದ್ದ ಕನ್ನಡಿಗರಿಗೆ ವಿದಾಯ ಹೇಳಿ, ಮುಷ್ಕರ ಹೂಡಿದ್ದ ಕ್ಯಾಮರಾ ಹಿಡಿದು ಮುಂಬಯಿಯ ದಿನೇಶ್ ಮೆಹ್ತಾ ಅವರ ಬಳಿಸಾರಿದೆ. ಗಾಲಾ-ಮಾಲ್ಪಾ ದಾರಿಯಲ್ಲಿ ಒದ್ದೆಯಾದ ಮೇಲ್ಕವಚವನ್ನು ತೂರಿ ಕ್ಯಾಮರಾದ ಒಳಗಿಳಿದಿದ್ದ ತೇವದಿಂದಾಗಿ ಒಳಗಿನ ಫಿಲ್ಮರೋಲು ಸುತ್ತಿಕೊಳ್ಳದೆ ಕುಳಿತಿತ್ತು. ಸೆರೆಹಿಡಿದಿದ್ದ ಚಿತ್ರಗಳಾದರೂ ಉಳಿಯಲೆಂಬ ಆಸೆ. ದಿನೇಶ್ ಮೆಹ್ತಾ ಕಂಬಳಿಯೊಳಗೇ ರೋಲನ್ನು ಕ್ಯಾಮರಾದಿಂದ ತೆಗೆದು ಡಬ್ಬಿಯೊಳಗಿಟ್ಟರೂ ಚಿತ್ರಗಳ ಬಗೆಗೆ ಇಬ್ಬರಿಗೂ ಅನುಮಾನ. (ಈ ರೋಲಿನ ಅನೇಕ ಚಿತ್ರಗಳು ಸಿಗದೇ ಹೋದದ್ದು ಖೇದದ ಸಂಗತಿ.) ಉಳಿದಿದ್ದುವೆರಡೇ ರೋಲುಗಳು. ಕೈಲಾಸ ಮಾನಸಕ್ಕೆ ಮೀಸಲಾಗಿದ್ದವು. ರಕ್ಷಣಾದಳದ ಆಣತಿಯಂತೆ ನಾವು ಸೀಮಾಂತ ಕ್ಷೇತ್ರದಲ್ಲಿ ತೆಗೆದ ರೋಲನ್ನು ಗಡಿಯಿಂದಾಚೆಗೆ ಒಯ್ಯುವಂತಿರಲಿಲ್ಲ. ಹಾಗಾಗಿ ಕಾಲಾಪಾನಿ ಶಿಬಿರದಲ್ಲಿ ಕ್ಯಾಮರಾಗಳನ್ನು ಖಾಲಿ ಮಾಡಿಕೊಳ್ಳಬೇಕಿತ್ತು. ಒಂದು

ರೀತಿಯಲ್ಲಿ, ಫೋಟೊ ತೆಗೆಯಬೇಕೆಂಬ ಕಾತರ-ಕಾಟವಿಲ್ಲದೆ ನಿರಾಳವಾಗಿ ಸುತ್ತಲೂ ನೋಡುತ್ತ ನಡೆಯಬಹುದೆಂಬ ನೆಮ್ಮದಿ ಸಿಕ್ಕಿತು. ಕ್ಯಾಮರಾವನ್ನು ಮೂಟೆಯಲ್ಲಿ ತುರುಕಿ ಹೊಗಬಂದು ಕಣ್ಣಿನ ಕ್ಯಾಮರಾವನ್ನು ಕ್ಲಿಕ್ಕಿಸಲು ಮೊದಲಿಟ್ಟೆ. ನನ್ನ ಮಟ್ಟಿಗೆ ಇವೇ ಹೆಚ್ಚು ಸ್ಥಾಯಿ ಚಿತ್ರಗಳಾಗುವುದೆನಿಸಿತು.

ಬುಧಿ ಹಳ್ಳಿಯ ದಿಣ್ಣೆಯನ್ನು ಬಳಸಿ ಬರುವ ಕಾಳೀ ನದಿ ಸುಮಾರು ೫೦೦ ಅಡಿಗಳ ಕೆಳಗೆ ಹರಿಯುತ್ತಿತ್ತು. ನದಿಯ ಎರಡೂ ಕಡೆಗೆ ಆಕಾಶವನ್ನು ಸೀಳಿನಿಂತಿದ್ದ ಪರ್ವತಗಳು. ಕುರುಚಲು ಗಿಡಗಳು-ಹುಲ್ಲು ಮಾತ್ರ ಕಾಣುತ್ತಿದ್ದು, ಎತ್ತರದ ಮರಗಳು ಇಲ್ಲವಾಗಿದ್ದವು. ವಿಲಕ್ಷಣ ಪರಿಸರವನ್ನು ಒಮ್ಮೆ ತೋರಿಸಿ ಮತ್ತೆ ಮುಚ್ಚಿಕೊಳ್ಳುವ ಮಂಜಿನ ಮೋಡಗಳು. ಸಂಜೆ ಐದುವರೆಗೆಲ್ಲಾ ಕತ್ತಲಾವರಿಸಿ ಆರಂಭವಾದ ಮಳೆ ಹತ್ತೇ ನಿಮಿಷದಲ್ಲಿ ಮುಸಲ ಧಾರೆಯಾಗಿ ಸುರಿಯತೊಡಗಿತು. ಸಂಜೆಯ ಗೋಷ್ಠಿಗೆ ಎಲ್ಲರೂ ಅರ್ಧ ಗೋಳಾಕಾರದ ಟೆಂಟಿನೊಳಗೇ ಸೇರಿದೆವು. ನಮ್ಮೊಂದಿಗೆ ಭೋಟಿಯಾಗಳಲ್ಲದೆ ಕು.ಮಂ.ವಿ. ನಿ.ದ ಕರ್ಮಚಾರಿಗಳು ಸೇರಿ ಒಟ್ಟು ಸುಮಾರು ೫೦-೬೦ ಜನ ಸರಿದೊತ್ತಿ ಕುಳಿತೆವು. ಮತ್ತೊಮ್ಮೆ ಹಾಡ ಹೊಸಲು ಹರಿಯಿತು. ಕುಳಿತಲ್ಲೇ ಸರಿದು ಮಧ್ಯೆ ಜಾಗ ಮಾಡಿ ಕುಣಿಯುವವರಿಗೆ ಅನುವು ಮಾಡಿದ ಮೇಲೆ ಹಾಡುವವರ ಹುಮ್ಮಸ್ಸು ಇಮ್ಮಡಿಯಾಯಿತು. ಟೆಂಟಿನ ಜಿಂಕ್‌ಶೀಟಿನ ಮೇಲೆ ಎಡಬಿಡದೆ ಬೀಳುತ್ತಿದ್ದ ಜಡಿ ಮಳೆ ಆರ್ಭಟವನ್ನೂ ಮೀರಿಸಿತ್ತು ಹಾಡವವರ ಒಕ್ಕೊರಲು ರಾತ್ರಿ ಒಲ್ಲದ ಮನಸ್ಸಿನಿಂದ ಮಲಗಲು ಎದ್ದು ಹೋದೆವು. ಸಂಜೆ ಹಿಡಿದ ಮಳೆ ಈಗ ಇನ್ನೂ ಬಲಗೊಂಡು ಬೀಳುತ್ತಿತ್ತು.

ರಾತ್ರೆಯೆಲ್ಲಾ ಮಳೆ ಜಪ್ಪಿಸಿ ಜಡಿದಿತ್ತು. ಹಳ್ಳಿಯೆದುರಿನ ಚೌಕದಲ್ಲಿ, ರಸ್ತೆಯ ಎರಡೂ ಬದಿಗೆ ಕಟ್ಟಿದ್ದ ಕುದುರೆಗಳ ಸಗಣಿ ಮತ್ತು ಮಳೆ ನೀರು ಸೇರಿ ದಾರಿಯೆಲ್ಲಾ ಕೊಚ್ಚೆರಾಡಿಯಾಗಿರುವುದು ಖಂಡಿತ. ಅಲ್ಲೆಲ್ಲಿಯಾದರೂ ಜಾರಿ ಬಿದ್ದರೆ ದಿನಪೂರ ಕೊಚ್ಚೆ ಮೆತ್ತಿದ ಬಟ್ಟೆಯಲ್ಲೇ ಇರಬೇಕಾದೀತೆಂಬ ದಿಗಿಲು. ಕೊಣೆಯ ಹೊರಗೆ ಬಂದವರು ಆಗಲೇ ದಿಗಂತದಲ್ಲಿ ಇಣುಕಿದ್ದ ಅರುಣನನ್ನೆದುರುಗೊಂಡೆವು. ಅಂಗಳದಲ್ಲಿ ಅರಳಿ ನಿಂತಿದ್ದ ಹೂಗಳು ದಿನಕರನಿಗೆಂತೋ ಅಂತೇ ನಮಗೂ ಸುಪ್ರಭಾತ ಕೋರಿದವು. ಚುಂಬಕದಂತೆ ಬಳಿ ಸೆಳೆದವು. ಬೆಟ್ಟ ತಾವರೆಯ ಮೊಗ್ಗೊಂದು ನೀರ ಹನಿಯ ಭಾರದಿಂದ ತಲೆಬಾಗಿತ್ತು. ಅದರಲ್ಲಿ ತೂಗಾಡಿದ ನೀರ ಹನಿಯು ಸೂರ್ಯ ರಶ್ಮಿಯ ದೆಸೆಯಿಂದ ವಜ್ರವಾಗಿತ್ತು. ಈ ಸೌಂದರ್ಯ ಖನಿಯ ನೋಟದ ಭಾರವನ್ನು ತಡೆಯಲಾರದೆ ಮನ ಕುಸಿದು ಕುಳಿತಿತ್ತು ಆ ಮೊಗ್ಗಿನಲ್ಲಿಯೇ!

ಇರುಳೆಲ್ಲ ಸುರಿದ ಮಳೆ ತಡೆದು ನಿಂತವರು
ಬೆಳಗು ಮೊಗ್ಗಿನಿಂದುದುರಿದಾ ಹನಿವಜ್ರಕೆ
ಕುಸಿದು ಕುಳಿತೆವು ನಾವು
ಇಂದ್ರಧನು ಶತವರ್ಣ, ಎಚ್ಚರಿದ್ದವರು
ತಿಳಿನೀರು ಹಿಮದ ಬಿಳಿಬಣ್ಣವದ ನೋಡಿ
ತಿಳಿವಿರದಾದೆವು ನಾವು
ಸಾವಿರದ ಸೋಪಾನಗಳ ಏರುತಲೆ ಹೊದವರು
ನಾಲ್ಕು ನಡೆ ಇಳಿತವದು ಇಳಿಯಲಾರದೆಯೆ

ಸೋತು ನಿಂದೆವು ನಾವು
ಸಭ್ಯತೆಯ ದಿರಸುಗಳ ಧರಿಸಿ ನಿಂತವರು
ಕಂಬಳಿಯ ಹೊದ್ದವನ ಸರಳ ಸಹಜತೆಗೆ
ಬೆತ್ತಲಾದೆವು ನಾವು
ಹರಿ ಭಜನೆ ಮಾಡುತಲೆ ಬೀಗಿ ನಡೆದವರು
ಮಲೆಯ ಇನಿ ಹಾಡದನಿ ಕಿವಿಗೆ ಬೀಳುತಲೆ
ಮೂಕರಾದೆವು ನಾವು.

ಎದುರಾಗುವ ಎಲ್ಲ ಅನಿಷ್ಟ ಅನಿವಾರ್ಯಗಳನ್ನು ಸಹಿಸುತ್ತಲೇ ಮುಂದುವರೆವಾಗ ಅಪರೂಪಕ್ಕೆ ಸಿಗುವ ಚಿಕ್ಕದೊಂದು ಸಂತಸವನ್ನು ಭರಿಸಲಾರೆವು. ಕಣ್ಕಾಪು ಕಟ್ಟಿಕೊಂಡು ನೇರ ನೋಡುತ್ತ ನಿರ್ವಿಶೇಷದಾರಿಯಲ್ಲಿ ನಡೆಯುವವರೆದುರು ಬರುವ ಚಿಕ್ಕದೊಂದು ಅಡ್ಡ ತಿರುವು ಹೊಸದೊಂದು ಪ್ರಪಂಚವನ್ನೇ ತೆರೆದು ತೋರಿಸುವುದು. ಆಗ ದಿಙ್ಮೂಢರಾಗಿ ನಿಲ್ಲುವೆವು. ನಾವು ನಡೆದಿದ್ದ ದಾರಿಯ ವೈಶಾಲ್ಯಹೀನತೆಯನ್ನು ಮನಗಾಣುವೆವು. ಕೈಲಾಸಮಾನಸ ಯಾತ್ರೆ ನನ್ನ ಜೀವನದಲ್ಲಿ ಹೊಸತನವನ್ನು ತರುವ ಇಂತಹ ತಿರುವಿನ ಸಂಗತಿಯೇ ಆದೀತು. ಬುಧಿ ಶಿಬಿರ ಬಿಟ್ಟು ಹಳ್ಳಿಯ ಬೀದಿಗಳಿದವರೆಲ್ಲರೂ ಮೂಗು ಮುಚ್ಚಿ ಬೇಗ ಹೆಜ್ಜೆ ಹಾಕಿದೆವು. ಕುದುರೆಯದರೊಂದಿಗೆ ಮನುಷ್ಯರದ್ದೂ ಸೇರಿರಬೇಕು. ದುರ್ಗಂಧ ಎಲ್ಲೆಡೆ ಹರಡಿತ್ತು. ನೂರು ಮಾರು ದೂರ ಸರಿದನಂತರವೇ ನಿರಾಳವಾಗಿ ಉಸಿರು ತೆಗೆಯಲು ಸಾಧ್ಯವಾದದ್ದು. ಕಲ್ಲು ಚಪ್ಪಡಿ ಹೂತಿದ್ದ ದಾರಿ, ಎದುರನಿಂದ ಬೀಸಿ ಬಂದಿದ್ದ ನಿರ್ಮಲ ಗಾಳಿ ಎಲ್ಲೆಡೆ ಹರಡುತ್ತಿದ್ದ ಬೆಳಗಿನ ಬಿಸಿಲು. ಕಾಳೀ ನದಿ ಹೊದ್ದಿದ್ದ ಬಿಳಿಯ ಮಂಜಿನ ಮೃದು ದುಕೂಲವನ್ನು ಶಾಖ ಕೊಟ್ಟು ಮೇಲಕ್ಕೆತ್ತುತ್ತಿದ್ದ ತುಂಟ ಬಾಲ ರವಿ. ಬೆಟ್ಟದ ಮೇಲೆ ನಡೆದಿದ್ದ ನಾವು ಕೆಳಗೆ ಕಣಿವೆಯಲ್ಲಿ ಮಲಗಿದ್ದ ಮಂಜು ಮೋಡವಾಗಿ ಏರುತ್ತ ನಮ್ಮ ಬಳಿಗೇ ಬರುತ್ತಿರವುದನ್ನು ನೋಡುತ್ತಾ ಸಾಗಿದೆವು.

ಮೊದಲ ನಾಲ್ಕುವರೆ ಕಿ.ಮೀ.ನ ದಾರಿಯಲ್ಲಿ ಸುಮಾರು ೪೦೦೦ ಅಡಿಗಳೆತ್ತರಕ್ಕೆ ಏರಿ ಛಿಯಾಲೇಖ್ ಪಾಸ್ ತಲುಪಿದರೆ ಆಮೇಲೆ ಮೂರು ಕಿ.ಮೀ.ನ ಇಳಿತ. ಉಳಿದ ೧೦ ಕಿ.ಮೀ ಸಮ ತಟ್ಟಿನ ದಾರಿ ಇದು ಬಹಳ ಸುಲಭವಾದದ್ದು ಎನ್ನುವುದು ದಿವಾನಸಿಂಗ್‌ನ ಮತ. ನಡೆದು ನೋಡಿದ ಮೇಲೆಯೇ ತೀರ್ಮಾನವೆಂದು ನನ್ನ ನಿರ್ಧಾರ. ಕಾರಣ, ಕಳೆದ ಒಂದೆರಡು ದಿನಗಳ ಅನುಭವದಲ್ಲಿ ದಿವಾನಸಿಂಗ್‌ನ ಕಿ.ಮೀ.ಗೂ ನನ್ನ ಕಿ.ಮೀ.ಗೂ ಅಳತೆಗೋಲಿನ ಕಿ.ಮಿ.ಗೂ ಯಾವುದೇ ಸಂಬಂಧ ಇರಲಿಲ್ಲವೆನಿಸಿತು. 'ನಿನ್ನ ಕಿ.ಮೀ ಲೆಕ್ಕ ಹೇಳಬೇಡ ಎಷ್ಟು ನಿಮಿಷದ ನಡಿಗೆ ಎಂದು ಹೇಳು ತಿಳಿದೀತು.' ಎಂದಾಗ ಜೋರಾಗಿ ನಕ್ಕು 'ನಿನ್ನ ನಡಿಗೆಯ ವೇಗಕ್ಕೆ ನಿಮಿಷಗಳಲ್ಲ-ಗಂಟೆ ದಿನಗಳ ಲೆಕ್ಕ ಹೇಳಬೇಕು. ನೀನೆಷ್ಟು ಸಲ ಕೇಳಿದರೂ ಅಷ್ಟೇ ದೂರ. ಸುಮ್ಮನೆ ನಡೆದು ಬರುತ್ತಾ ಇರು. ಕ್ಯಾಂಪ್ ತಾನೇ ಬರುತ್ತದೆ.' ಎಂದಿದ್ದ. ಒಂದೇ ಒಂದು ಸಲವೂ ಇನ್ನೆಷ್ಟು ದೂರವೆಂದು ಕೇಳಬಾರದೆಂದು ಶಪಥ ಮಾಡಿದ್ದೆ.

ಮೊದಮೊದಲು ಎಲ್ಲ ಬೆಟ್ಟಗಳೂ ಒಂದೇ ತೆರನಾಗಿ ಕಾಣುತ್ತಿದ್ದುದು ನಾಲ್ಕುದಿನದ ಚಾರಣದಲ್ಲಿ ಅವುಗಳಲ್ಲಿನ ವ್ಯತ್ಯಾಸವನ್ನು ಗುರುತಿಸುವಷ್ಟಾಗಿದ್ದೆ. ಗಾಳಿ ಮಳೆಗೆ ತೆರೆದು ನಿಂತ

ಭಾಗದ ಲಕ್ಷಣ, ಮರೆಗೆ ನಿಂತ ಮೇಲ್ಮೈಯ ಲಕ್ಷಣ, ಪರ್ವತಾಗ್ರದ ವಿವಿಧ ನಮೂನೆಗಳು, ಮಳೆಗಾಲದಲ್ಲಿನ ತೊರೆಗಳ ಕೊರೆತದ ಜಾಡು ಹಾಗೂ ಬೆಟ್ಟಗಳ ಕೂಡುವಿಕೆಯ ಜಾಡಿನ ವ್ಯತ್ಯಾಸ, ಬೆಟ್ಟಗಳ ಮೇಲಿನ ಕಾಡುಗಳ ವ್ಯತ್ಯಾಸ. ಹೀಗೇ.. ಕೇಳಿದ ಒಂದು ಪ್ರಶ್ನೆಗೆ ಹಲವು ವಿವರಗಳನ್ನು ಜೋಡಿಸಿ ಉತ್ತರಿಸುವ ದಿವಾನಸಿಂಗ್‌ನ ಸ್ಥಳೀಯ ತಿಳುವಳಿಕೆ ಹುಮ್ಮಸ್ಸಿನ ಉಪಾಕರವಿದು. ಚಿಕ್ಕಂದಿನಲ್ಲೇ ತಾಯಿಯವರು ಕಡ್ಡಾಯವಾಗಿ ಹಿಂದಿ ಕಲಿಸಿದ ಫಲವಿದು.

ಕೆಳಗಿನ ಕಣಿವೆಯಿಂದ ಮೇಲಕ್ಕೇರುತ್ತಿದ್ದ ಮಂಜಿನ ಹೊಗೆ ನನ್ನನ್ನು ಅಟ್ಟಿಸಿಕೊಂಡು ಬರುತ್ತಿದ್ದರೆ ಸುಮಾರು ಎರಡು ಸಾವಿರ ಅಡಿಗಳೆತ್ತರದಲ್ಲಿ ಥಿಯಾಲೇಖ್ ಮೇಲೆ ಹೊಳೆದಿದ್ದ ನೇಸರ ಕಿರಣಗಳು ಆಸೆ ತೋರಿಸಿ ಮೇಲಕ್ಕೆ ಕರೆದಿದ್ದವು. "ಥಿಯಾಲೇಖ್ ಬಹಳ ಸುಂದರವಾದ ಜಾಗ. ನೀನು ಮತ್ತೆ ಮತ್ತೆ ಕುದುರೆಯಿಂದಳಿಯದಿದ್ದರೆ ಬಿಸಿಲಿರುವಾಗಲೇ ಅಲ್ಲಿಗೆ ಸೇರಬಹುದು." ಎಂದು ದಿವಾನಸಿಂಗ ಅವಸರಿಸಿದ. ತುದಿಗೆ ಸೇರುತ್ತಿರುವಂತೆಯೇ ಮೂವತ್ತು ಅಡಿ ದೂರದಿಂದಲೇ ಬಂಡೆಗಳ ಸಂದಿನಿಂದ ಕಾಣದ ಬಾಯೊಂದು ಬಿಸಿಲ ಬೆಳಕನ್ನೆಲ್ಲಾ ಹೀರಿಕೊಂಡಂತಾಗಿ ಎರಡೇ ಕ್ಷಣಗಳಲ್ಲಿ ಮಂಜು ಮುಸುಕಿತ್ತು. ಐದಡಿ ಆಚೆಗೇನಿದೆಯೆಂದು ಕಾಣದಂತಹ ದಟ್ಟ ಮಂಜು. "ಇಲ್ಲೇ ಕೂರೋಣ. ಮೋಡ ಸರಿದ ಮೇಲೆ ನೋಡಿ ಮುಂದಕ್ಕೆ ನಡೆಯೋಣ." ಎನ್ನುವ ನನ್ನ ಸಲಹೆಗೆ ಗಾಬರಿಯಾಗಿ, "ಇಲ್ಲಿ ಮಳೆ ಗಾಳಿ ಮಂಜು ಬಿಸಿಲು, ಚಳಿ ಯಾವುದೂ ಹೇಳಬರುವುದಿಲ್ಲ. ಕಾಯುವೆನೆಂಬುದು ಹೆಡ್ಡತನ. ಬಿಸಿಲಿನ ಬದಲಿಗೆ ಮಳೆ ಶುರುವಾದರೇನು ಮಾಡುತ್ತೀಯೆ? ನಿನ್ನ ಅದೃಷ್ಟದಂತೆ ಯಾವುದು ಸಿಕ್ಕರೆ ಅದಕ್ಕೆ ಹೊಂದಿಕೊ." ಎಂದವನೇ ಚಹಾದಂಗಡಿಯಲ್ಲೂ ಕೂರಲು ಬಿಡದೆ ನಡೆಯಹಚ್ಚಿದ. ಅರೆಬೆಳಕಿನ ಬಿಳಿಯ ಸುರಂಗದೊಳಗೆ ನಡೆದು ಹೋದಂತಿತ್ತು ಥಿಯಾಲೇಖ್ ಪಾಸ್. ಅರ್ಧ ಕಿ.ಮೀ. ನಡೆಯುತ್ತಿದ್ದಂತೆ ಮೋಡಸರಿದು ಬೆಳ್ಳಂಬೆಳಕು ಹರಡಿತು. ಮಂಜಿನಲ್ಲಿ ನಿಂತಿದ್ದ ಹೊಸಲೋಕವೊಂದು ಕಣ್ಣೆದುರಿಗಿತ್ತು. ಗುಡ್ಡಗಳ ಸಾಲು ಸಾಲು ಇಳಿದಿಳಿದು ಗರ್ಬ್ಯಾಂಗ್ ಊರಿನ ಮೈದಾನವಾಗಿ ಹರಡಿತ್ತು. ಪೂರ್ವ ದಿಗಂತದಲ್ಲಿ ನೇಪಾಳದ ಪರ್ವತಗಳು ಹಿಮದ ಟೊಪ್ಪಿಧರಿಸಿ ನಿಂತಿದ್ದವು. ನಮ್ಮ ಎಡ ಭಾಗಕ್ಕೆ ಥಿಯಾಲೇಖ್ ಪರ್ವತ ಆಕಾಶವನ್ನು ತಡವಿತ್ತು. ನಾವು ನಡೆದಿದ್ದ ದಾರಿಯ ಇಕ್ಕೆಲದ ನವುರಾದ ಏರು-ಇಳಿಜಾರಿನ ಹಸಿರು ಹುಲ್ಲಿನ ಹಾಸಿನಲ್ಲಿ ಬಣ್ಣಬಣ್ಣದ ಹೂಗಳರಳಿ ಚಿತ್ತಾರ ಬಿಡಿಸಿತ್ತು. ಪ್ರಕೃತಿಯೇ ಕೈಯಾರೆ ನೆಯ್ದಿದ್ದ ಹಾಸು ಕಲೆಯ ಬಲೆಯಾಗಿತ್ತು. ಈ ಬಲೆಯಲ್ಲಿ ಬಳುಕಿ ಬರುತ್ತಿದ್ದ ಚಿಕ್ಕಚಿಕ್ಕ ಝರಿಗಳು ಚಿತ್ರಕ್ಕೆ ಚಲನವಿತ್ತಿದ್ದವು. ಇಲ್ಲಿ ಮಾನವನ ಉಪಸ್ಥಿತಿ ಸಲ್ಲದೆನುವಷ್ಟು ದೈವೀಕವಾಗಿತ್ತು ಈ ಪ್ರಾಂತ.

ಥಿಯಾಲೇಖ್ ಓಣೆಯಿಂದ ನನ್ನೊಡನೆ ನಡೆದಿದ್ದ ನಿರ್ಮಲಾ ಸೌಂದರ್ಯ ಲಹರಿಯನ್ನು ಹಾಡುವ ಮೂಲಕ ತಮಗಾದ ಆನಂದ ನನಗೂ ಹಂಚಿದ್ದರು. ಶಂಕರಾಚಾರ್ಯರ ಒಂದೊಂದು ವರ್ಣನೆಯೂ ಒಂದೊಂದು ಮಿಂಚಿನಂತೆ ಅಲ್ಲೆಲ್ಲಾ ಹರಿದಾಡಿ ವಿದ್ಯುತ್‌ತರಂಗವನ್ನೆಬ್ಬಿಸಿದಂತಿತ್ತು. ಲಹರಿಯ ಪದಗಳ ಓಜ, ಲಾಲಿತ್ಯ ಇಲ್ಲಿನ ಪರಿಸರವನ್ನೇ ಕುರಿತಂತೆನಿಸಿತು. ಕೆಳಗಳಿದು ಬಂದಂತೆ ಎದುರಿನ ಗಿಡ ಮರಗಳಿಲ್ಲದ ಬೆಟ್ಟಗಳು ನಾವು ಇನ್ನೂ ಎತ್ತರದ ಪ್ರದೇಶಕ್ಕೆ ಪ್ರವೇಶಿಸಿದ್ದೇವೆಂದು ಸಾರಿದ್ದವು. ಗರ್ಬ್ಯಾಂಗ್ ಮೈದಾನವನ್ನು ತಲುಪಿದಾಗ ಬೆಳಗ್ಗೆ ಹತ್ತು ಗಂಟೆ.

ಗರ್ಬ್ಯಾಂಗ್ ಮೊದಲಿಗೆ ಭಾರತ-ಟಿಬೆಟ್ ನಡುವಿನ ಮುಖ್ಯ ವ್ಯಾಪಾರ ಕೇಂದ್ರವಾಗಿ ಜನನಿಬಿಡ ಸಮೃದ್ಧ ಊರಾಗಿತ್ತು. ಚೀನೀ ಯುದ್ಧದ ನಂತರ ಗಡಿ ಮುಚ್ಚಿದಾಗ ವ್ಯಾಪಾರ ನಿಂತುಹೋಗಿ ವ್ಯಾಪಾರಿಗಳು ಧಾರ್ಚುಲಾ ಅಲ್ಮೋರಾ ಕಡೆಗೆ ಹೋದ ಮೇಲೆ ಗರ್ಬ್ಯಾಂಗ್ ಹಳ್ಳಿಯಾಯಿತು. ಈಗ ೧೨-೧೩ ವರ್ಷಗಳ ಹಿಂದೆ ಆದ ಭೂಕಂಪದಿಂದಾಗಿ ಈ ಹಳ್ಳಿಯೂ ಇಲ್ಲವಾಯಿತು. ಇಲ್ಲಿ ಈಗಲೂ ಮಣ್ಣಿನಲ್ಲಿ ಹೂತುಕೊಂಡಿರುವ ಮನೆಗಳನ್ನು ಕಾಣಬಹುದು. ಇಲ್ಲಿ ನೇತಾಡುವ ಹಳೇಕಾಲದ ಬೀಗಗಳನ್ನು ನೋಡಬಹುದು. ಈಗ ಇಲ್ಲಿರುವುದನ್ನು ಬಸ್ತಿ ಎನ್ನಬಹುದಷ್ಟೆ. ಗರ್ಬ್ಯಾಂಗ್ ಹಿಂದಿನ ಶ್ರೀಮಂತಿಕೆಯನ್ನು ಕಲ್ಪಿಸುತ್ತಾ ನಡೆದಿದ್ದವರಿಗೆ ಎಡಗಡೆಯ ಗುಡ್ಡದ ಮೇಲೆ ಕಂಡದ್ದು ರುದ್ರ ನಾಟಕವೇ ಆಗಿತ್ತು. ಅಲ್ಲಿ ಮೇಯುತ್ತಿದ್ದ ಕುರಿಗಳು ಅರಚಿಕೊಳ್ಳುತ್ತಿದ್ದವು. ಮೇಲಿನಿಂದ ಹಾರಿಬಂದ ಹದ್ದೊಂದು ಕುರಿಮರಿಯನ್ನು ಎತ್ತಿಕೊಂಡು ಮೇಲೆ ಹಾರಿತು. ಅದರ ಹಿಡಿತ ಸರಿಯಿರಲಿಲ್ಲವೋ ಅಥವಾ ಮರಿಯೇ ಭಾರವಾಯಿತೋ ಮರಿಯು ಧೊಪ್ಪೆಂದು ಕೆಳಗೆ ಬಿತ್ತು. ಮತ್ತೆ ಒಂದು ಸುತ್ತು ಹಾಕಿ ರಿವ್ವನೆ ಎರಗಿದ ಹದ್ದು ಮರಿಯ ಮೇಲೇ ಕುಳಿತು ಸುತ್ತಲೂ ನೋಡಿ ಒಂದು ದೊಡ್ಡ ಕೂಗು ಹಾಕಿದ್ದೇ ತಡ ಕುರಿಗಳೆಲ್ಲಾ ಚೆಲ್ಲಾ ಪಿಲ್ಲಿ. ಹದ್ದು ಅಲ್ಲೇ ಆಗಲೇ ತನ್ನ ಊಟವನ್ನು ಹರಿಯಲಾರಂಭಿಸಿತು. ಸೌಂದರ್ಯ ಲಹರಿಯಿಂದ ಜಾರಿ ರುದ್ರ ಅಲೆಗಳಿಗೆ ಅಪ್ಪಳಿಸಿದಂತಾಗಿ ಜೀವ ತಲ್ಲಣಿಸಿ ಹೋಯಿತು. ಅಲ್ಲಿಂದ ಓಟದ ಹೆಜ್ಜೆ ಹಾಕಿದೆವು. ಗರ್ಬ್ಯಾಂಗ್‌ನಿಂದ ಮೂರು ಕಿ.ಮೀ ನಡೆದ ಬಳಿಕ ಮೊದಲ ಬಾರಿಗೆ ಕುಮಾವ್ ಜಿಲ್ಲೆಯ ಈ ಭಾಗದಲ್ಲಿ ವಿಸ್ತಾರವೆನ್ನಬಹುದಾದ ಮೈದಾನ ಕಣ್ಣಿಗೆ ಬಿತ್ತು. ಶಾಂತವಾಗಿ ಹರಿಯುತ್ತಿದ್ದ ಕಾಳೀ ನದಿಯ ಆ ಕಡೆಗೆ ನೇಪಾಳದ ಮೈದಾನವೂ ವಿಸ್ತಾರವಾಗಿತ್ತು. ಪೂರ್ವಾಭಿಮುಖವಾಗಿ ಕುದುರೆಯ ಮೇಲೆ ಸಾಗಿದ್ದ ನಾವು ಎಡಗಡೆಯ ಬೆಟ್ಟವನ್ನು ಬಳಸಿ ನೇಪಾಳಕ್ಕೆ ಬೆನ್ನು ಮಾಡಿ ಉತ್ತರದ ಕಡೆ ತಿರುಗಿದೆವು. ಅರ್ಧ ಕಿ.ಮೀ ಬಂದಿರಬಹುದು. ಕಿವಿಗಡಚಿಕ್ಕುವ ದೊಡ್ಡ ಸಿಡಿತದ ಸದ್ದು ಅಲ್ಲೆಲ್ಲ ಪ್ರತಿಧ್ವನಿಸಿತು. ಗಾಳಿಯ ಒತ್ತಡದ ದೊಡ್ಡ ಅಲೆಯೊಂದು ನಮ್ಮನ್ನು ತಳ್ಳಿಕೊಂಡು ಹೋಯಿತು. ಕುದುರೆ ಹಿಮ್ಮೆಟ್ಟಿ ಒಂದು ನಿಮಿಷ ನಿಂತಿದ್ದು ಏನೂ ಆಗಿಲ್ಲವೆಬಂತೆ ನಡೆಯಲಾರಂಭಿಸಿತು. ಪಕ್ಕದಲ್ಲೇ ನಡೆದಿದ್ದ ದಿವಾನಸಿಂಗನನ್ನು ಕೇಳುವ ಮೊದಲೇ ಅವನ ವಿವರಣೆ ಸಿದ್ಧ. "ಕಾಲು ದಾರಿಯನ್ನು ವಿಸ್ತರಿಸಲು ಡೈನಾಮೈಟ್ ಹಾಕಿರಬೇಕು-ನೇಪಾಳದಲ್ಲಿ. ನಮ್ಮ ಕಡೆಯಿದ್ದರೆ ನಮಗೆ ಮುನ್ಸೂಚನೆ ಸಿಗುತ್ತಿತ್ತು. ನೀನೀಗ ಕುದುರೆಯಿಂದಿಳಯಬೇಕಿಲ್ಲ." ಎಂದೂ ಸೇರಿಸಿದ ನನ್ನ ಮನದಲ್ಲಿದ್ದುದನ್ನು ಓದಿದವನಂತೆ.

ಕುದುರೆಯಿಂದಿಳಿದು ಮತ್ತೆ ಮತ್ತೆ ನಡೆಯುತ್ತಿದ್ದುದಕ್ಕೆ ನಾಲ್ಕು ಕಾರಣಗಳು. ಒಂದು, ಕುದುರೆಯ ಬಗೆಗೆ ಮೊದಲಿನ ಭಯದ ಜೊತೆಗೆ ಅನುಕಂಪದ ಭಾವನೆ. ಎರಡು, ನನ್ನ ನಡಿಗೆಯು ನಿಧಾನವಾಗಿ ಅತಿ ಹಿಂದೆ ಬಿದ್ದಾಗ ಮಾತ್ರ ಕುದುರೆಯೇರಿ ಎಲ್ಲರನ್ನೂ ಸೇರಿಕೊಳ್ಳುತ್ತಿದ್ದೆ. ಮೂರು, ಕುದುರೆಯನ್ನು ಗೊತ್ತು ಮಾಡಿಕೊಂಡಿದುದು ತುರ್ತು ಪರಿಸ್ಥಿತಿಗಾಗಿಯೇ ಹೊರತು ದೈಹಿಕ ಶ್ರಮಕ್ಕಂಜಿಯಲ್ಲ. ದೇಹಶ್ರಮದಿಂದ ನಮ್ಮ ಉಸಿರಾಟ ದೀರ್ಘವೂ ಆಳವೂ ಆಗುತ್ತಿದ್ದು ಕೈಲಾಸದ ಪರಿಕ್ರಮಾಗೆ ಅನುಕೂಲವಾಗುವುದಿತ್ತು, ಎತ್ತರದ ಪರಿಸರಕ್ಕೆ ಬೇಗ ಪಳಗಬಹುದಿತ್ತು. ನಾಲ್ಕು, ಈ ನಾಲ್ಕು ದಿನಗಳ ಹಿಂದಷ್ಟೇ ಕುದುರೆಯ ಮೇಲೆ ಕುಳಿತದ್ದು. ಹಾಗಾಗಿ ನಡೆಯುವ ಕುದುರೆಯ ಮೇಲೆ ನಾನು ಕೂರುತ್ತಿದ್ದ ಭಂಗಿಯೇ ಸರಿಯಲ್ಲದೆ ಏರಿದ ಹತ್ತೇ ನಿಮಿಷದಲ್ಲಿ

ಸೊಂಟ ಕಾಲುಗಳು ನೋಯತೊಡಗಿ ಇಳಿದು ನಡೆಯುವುದು ಅನಿವಾರ್ಯವಾಗುತ್ತಿತ್ತು. ಇವತ್ತೆಷ್ಟೋವಾಸಿ. ಕುದುರೆ ಸವಾರಿ ಕಲಿತೆನಂದೇ ಹೇಳಬೇಕು. ಅರ್ಧ ಗಂಟೆ ಕುಳಿತು ಮೂರು ಕಿ.ಮೀ. ನಷ್ಟು ದಾರಿ ಕ್ರಮಿಸಿದ್ದೆ. ಸೆಟಗೊಳ್ಳದೇ ಕುಳಿತು ಸುತ್ತಲಿನ ನಿಸರ್ಗವನ್ನು ಆತಂಕವಿಲ್ಲದೆ ನೋಡುತ್ತಾ ಹೋಗುವುದು ಅಭ್ಯಾಸವಾಗಿತ್ತು.

ಐದಾರು ತಿಟ್ಟುಗಳನ್ನೇರಿ ಇಳಿದ ಮೇಲೆ ಬಯಲುದೂರದಲ್ಲಿ ಮೈದಾನದಂಚಿಗೆ ಗುಂಜಿ ಶಿಬಿರದ ಫೈಬರ್‌ಗ್ಲಾಸ್ ಹೊದಿಕೆ ಗಾಜಿನಂತೆ ಫಳಗುಟ್ಟಿತ್ತು. 'ಅಕೋ! ನಾಲ್ಕೈದು ಕಿ.ಮೀ. ಅಷ್ಟೆ. ಶಿಬಿರದಲ್ಲಿರುತ್ತೀಯ' ದಿವಾನಸಿಂಗ್‌ನ ಉದ್ಗಾರ. 'ಅಷ್ಟೇನಾ?' ನನ್ನ ಕೊಂಕು ಪ್ರಶ್ನೆಗೆ ಅವನ ಕಣ್ಣಲ್ಲಿ ಮಿಂಚಿತ್ತು ಕುಹಕನಗೆ. ಅಷ್ಟೇ.

ಒಂದು ಗಂಟೆ ಕಾಲ ನಡೆದು ಶಿಬಿರದ ಕಿಟಕಿಗಳನ್ನು ಗುರುತಿಸುವಷ್ಟು ಸಮೀಪಿಸಿದೆವು. ಆದರೆ ಶಿಬಿರವಿದ್ದುದು ನದಿಯ ಆ ದಂಡೆಯಲ್ಲಿ. ಹತ್ತಿರದಲ್ಲೆಲ್ಲಿಯೂ ಸೇತುವೆಯೇ ಇಲ್ಲ. ದಿವಾನಸಿಂಗ್‌ನನ್ನು ಯಾವ ಪ್ರಶ್ನೆಯೂ ಕೇಳಬಾರದೆಂಬ ಹಠ. ಮತ್ತೊಂದು ಕಿ.ಮೀ. ನಂತರ ಎರಡು ನದಿಗಳು ಕೂಡುವ ಸಂಗಮಕ್ಕೆ ಬಂದವು. ಕಾಳೀಗಂಗಾ ಮತ್ತು ಕುಠಿ ನದಿಗಳು ಸೇರಿ ಮುಂದಕ್ಕೆ ಕಾಳೀ ನದಿಯಾಗಿ ಗರ್ಬ್ಯಾಂಗ್ ಕಡೆಗೆ ಹರಿಯುತ್ತಿತ್ತು. ಅಕ್ಕಪಕ್ಕದ ಮೈದಾನಕ್ಕಿಂತಲೂ ಸಂಗಮದಲ್ಲಿನ ನೀರಿನ ವಿಸ್ತಾರವೇ ಅಗಲವಾಗಿತ್ತು. ಎಷ್ಟೊ ನದೀ ಸಂಗಮಗಳನ್ನು ಹಲವು ದೇಶಗಳಗಲ್ಲಿ ನೋಡಿದ್ದರೂ ಪ್ರತಿಯೊಂದು ಸಂಗಮದಲ್ಲೂ ಅದರದೇ ವಿಶಿಷ್ಟತೆ, ಸೊಬಗನ್ನು ನೋಡಿದಾಗ ಹೊಚ್ಚ ಹೊಸದೆಂಬಂತೆ ತೋರುವುದು. ಮೈಪುಳಕ ತರುವುದು. ಇಂದೂ ಅದೇ ಪುಳಕ.

ಎರಡುವರೆ ಕಿ.ಮೀ. ದೂರದಲ್ಲಿ ಕುಠಿ ನದಿಗೆ ಅಡ್ಡಲಾಗಿದ್ದ ಸೇತುವೆಯನ್ನು ಬೊಟ್ಟು ಮಾಡಿ ತೋರಿಸಿದ ದಿವಾನಸಿಂಗ್‌ನ ಕುಹಕ ನಗೆಯ ಒಳಾರ್ಥ ಈಗ ಅರಿವಾಯಿತು. ಹಕ್ಕಿ ಹಾರುವಂತೆ ನಾವು ಶಿಬಿರಕ್ಕೆ ಕೇವಲ ಅರ್ಧ ಕಿ.ಮೀ. ದೂರದಲ್ಲಿದ್ದರೂ ಇನ್ನೂ ಎರಡುವರೆ ಕಿ.ಮೀ. ದೂರ ದಂಡೆಗುಂಟ ನಡೆದು ಸೇತುವೆ ದಾಟಿದರೆ ಗುಂಜಿ ಹಳ್ಳಿ. ಅಲ್ಲಿಂದ ಶಿಬಿರವನ್ನು ಸೇರಲು ಮತ್ತೆ ಒಂದುವರೆ ಕಿ.ಮೀ.ನಷ್ಟು ಹಿಂದೆ ಬರಬೇಕು. ಆಮೆಗತಿಯಲ್ಲಿ ನಡೆದು ನಡೆದು ೧೦,೬೨೫ ಅಡಿಗಳ ಎತ್ತರದಲ್ಲಿರುವ ಗುಂಜಿ ಹಳ್ಳಿಯನ್ನು ತಲುಪಿದಾಗಲೇ ನೆತ್ತಿಗೆ ನೆರಳು ಸಿಕ್ಕಿದ್ದು. ಹಳ್ಳಿಯ ಹೆಬ್ಬಾಗಿಲ ಕಟ್ಟೆಯಮೇಲೆ ಕುಳಿತು ಗಡಿಯಾರ ನೋಡಿದರೆ ಮಧ್ಯಾಹ್ನ ಒಂದು ಗಂಟೆ. ಮತ್ತೆ ಕಾಲೆಳೆಯುತ್ತಾ ಶಿಬಿರಕ್ಕೆ ತಲುಪುವಲ್ಲಿ ಉಸಿರಡಗಿ ಹೋಯಿತು. ಪ್ರತಿ ಶಿಬಿರದ ಬಾಗಿಲ ಬಳಿಯೇ ಶರಬತ್ತು ನೀಡುವ ನಿರ್ಧಾರ ಮಾಡಿದ್ದ ಕು.ಮಂ.ವಿ.ನಿ.ಯವರಿಗೆ ಮೌನ ಧನ್ಯವಾದ ಅರ್ಪಿಸಿ ಬಾಯಿಗೆ ಪಾನಕ ತರ್ಪಣ ಬಿಟ್ಟೆ.

ದಣಿವಿನ ಜೊತೆಗೆ ಇವತ್ತಿನ ಹಸಿವೂ ಹೆಚ್ಚಿತ್ತಾದರೂ ತಿಂದುದು ಒಂದು ರೊಟ್ಟಿ ಮತ್ತು ಚಿಕ್ಕವಾಟಿಯಲ್ಲಿ ದಾಲ್. ಅದೂ ಕೂಡ ತಟ್ಟೆಯಲ್ಲಿರುವುದನ್ನು ಬಿಸುಡಬಾರದೆಂಬ ಅಭ್ಯಾಸಬಲದಿಂದ ಮತ್ತು ರೊಟ್ಟಿ ಬಿಸಿಯಾಗಿದ್ದುದರಿಂದ. ಮೈಯ ಕೊಬ್ಬು ಕರಗುತ್ತಿತ್ತೊ ಇಲ್ಲ ಎತ್ತರೆತ್ತರಕ್ಕೆ ಹೋದಂತೆ ಹಸಿವು ಕಡಿಮೆಯಾಗಿತ್ತೊ ಇಲ್ಲ ದಾರಿಯಲ್ಲಿ ತಿನ್ನುತ್ತಿದ್ದ ತಿನಿಸುಗಳೇ ಸಾಕಾಗುತ್ತಿದ್ದವೊ, ಒಟ್ಟಿನಲ್ಲಿ

ಊಟದ ಪ್ರಮಾಣವೇ ಬಹುಕಡಿಮೆಯಾಗಿತ್ತು. ದಿನಕ್ಕೆ ಆರೇಳು ಗಂಟೆಗಳ ಕಾಲ ಕಷ್ಟತಮ ದಾರಿಯಲ್ಲಿ ಹತ್ತಿಯಿಳಿದು ನಡೆದರೂ ಇಷ್ಟು ಕಡಿಮೆ ಪ್ರಮಾಣದ ಊಟ ಸಾಕಾಗಿದ್ದು ರಾತ್ರಿ ಮಲಗುವವರೆಗೆ ಲವಲವಿಕೆ ಇರುತ್ತಿತ್ತು. ಅಂದಮೇಲೆ ಸಾಮಾನ್ಯದಂತೆ ನಾವು ಬೇಕಿದ್ದುದರ ಎರಡು ಮೂರು ಪಟ್ಟು ಹೊಟ್ಟೆಗೆ ತುರುಕುವವೆಂದಾಯಿತು!

ಈ ವಾರದ ಚಾರಣದಲ್ಲಿ ಕಂಡುಕೊಂಡ, ರೂಢಿಸಿಕೊಂಡ ಮತ್ತೊಂದು ಅಚ್ಚರಿಯ ಅಂಶವೆಂದರೆ ದಿನವನ್ನು ಹೊಸತನದಲ್ಲಿ, ಮಕ್ಕಳ ಉತ್ಸಾಹದಲ್ಲಿ (ಆರೇಳು ಗಂಟೆಗಳ ನಡಿಗೆಯೆನ್ನುವುದು ಗೊತ್ತಿದ್ದರೂ )ಸೂರ್ಯೋದಯಕ್ಕೆ ಮೊದಲೆ ಎದ್ದು ಆಹ್ವಾನಿಸುತ್ತಿದ್ದೆವು. ಹೊರಗೆ ಚಳಿಗಾಳಿ, ಮಳೆಯಿದ್ದರೂ ಇನ್ನೈದು ನಿಮಿಷವೆಂದು ಮತ್ತೆ ಮತ್ತೆ ಕಂಬಳಿಯೊಳಗೆ ಯಾರೂ ಮುದುರುತ್ತಿರಲಿಲ್ಲ. ಮನವಿದ್ದರೆ ಮಹದೇವ- ಗಾಣದೆತ್ತಿನಂತೆ ಮನೆಯೆಂಬ(ಆಫೀಸೆಂಬ)ಗೂಟವನ್ನು ಸುತ್ತುವವರಿಗೆ ಈ ರೀತಿಯ ಒಂದು ತಿಂಗಳ ಹೊಸ ದಿನಚರಿಯ ಬೆಳಗು ಅರುಣೋದಯ ಕಾಯಕಲ್ಪ-ಮಾನಸಕಲ್ಪ ತರುವಂತಹುದು. ಜೀವನ ದೃಷ್ಟಿಯನ್ನು ವಿಶಾಲವಾಗಿಸುವಂತಹುದು.

ಸಂಜೆ ಐದು ಗಂಟೆಗೆ, ವೈದ್ಯಕೀಯ ತಪಾಸಣೆಗಾಗಿ, ನಮ್ಮ ಶಿಬಿರದಿಂದ ಅರ್ಧ ಕಿ.ಮೀ ದೂರದಲ್ಲಿದ್ದ ಇಂಡೋ ಟಿಬೇಟಿಯನ್ ಬಾರ್ಡರ್ ಪೋಲೀಸ್ ದಳದ ಶಿಬಿರಕ್ಕೆ ಹೋಗಿ ಸರತಿ ನಿಂತೆವು. ನಿರ್ಮಲಾದೇವಿಯೊಂದಿಗೆ ಸುಧಾ ಮಹಾಲಿಂಗಂ ನಿಂತರು. ನಿರ್ಮಲಾರ ಪರವಾಗಿ ವೈದ್ಯರೊಂದಿಗೆ ಮಾತನಾಡಲು ಹಾಗೂ 'ಏನಾದರೂ ಮಾಡಿ' ಟಿಬೆಟ್ಟಿಗೆ ಹೋಗಲು ನಿರ್ಮಲಾರಿಗೂ ಅನುಮತಿ ಪಡೆಯಲು ಸುಧಾರ ಪ್ರಯತ್ನ.

ನಿರ್ಮಲಾದೇವಿ ಮತ್ತು ಅರ್ಕವ್ರತ ಚಟರ್ಜಿಯವರನ್ನು ಬಿಟ್ಟು ಉಳಿದವರೆಲ್ಲರಿಗೂ ಅನುಮತಿ ಸಿಕ್ಕಿತು. ನಮ್ಮ ತಂಡದಲ್ಲಿ ಯಾರೂ ವೈದ್ಯರಿಲ್ಲದಿದ್ದುದು ಒಂದು ಕೊರತೆಯಾಗಿತ್ತು. ಇವರಿಬ್ಬರ ದೇಹಸ್ಥಿತಿ ಟಿಬೆಟ್‌ನಲ್ಲಿ ಬಿಗಡಾಯಿಸಿದರೆ ತುರ್ತು ಸಹಾಯ ನೀಡಲು ಸಾಧ್ಯವಿರಲಿಲ್ಲ. ಸಂಬಂಧ ನಿರ್ವಾಹಕರ ವೈಯಕ್ತಿಕ ಭರವಸೆ ಮತ್ತು ನಮ್ಮೆಲ್ಲರ ಬೇಡಿಕೆಗೆ ಮಣಿದು ಕೈಲಾಸ-ಮಾನಸ ಸರೋವರದ ದರ್ಶನಕ್ಕೆ ಮಾತ್ರ ಅನುಮತಿಕೊಟ್ಟು ಪ್ರದಕ್ಷಿಣೆಯನ್ನು ನಿಷೇಧಿಸಿದ ವೈದ್ಯರು ಇವರಿಬ್ಬರಿಂದಲೂ ಕರಾರು ಪತ್ರವನ್ನು ಬರೆಸಿಟ್ಟುಕೊಂಡರು. ದೆಹಲಿಯಿಂದ ಇಬ್ಬರು, ಅಲ್ಮೋರಾದಿಂದ ಒಬ್ಬರು ಮರಳಿದಂತೆ ಗುಂಜಿಯಿಂದ ಹಿಂದಕ್ಕೆ ಹೋಗುವವರು ಯಾರೂ ಇಲ್ಲವೆಂದಾದುದು ಎಲ್ಲರಿಗೂ ಸಂತಸ ತಂದಿತ್ತು.

ತಪಾಸಣೆ ಮುಗಿಸಿ ಕೋಣೆಗೆ ಬಂದಾಗ ಸುಧಾರ ಮಂಚದಲ್ಲಿ ಪುಸ್ತಕಗಳಿದ್ದವು. ಪಕ್ಕದ ಕೋಣೆಯಲ್ಲಿದ್ದವರಿಂದ ಓದಲು ತಂದಿದ್ದರು. ಹಿಮಾಲಯದ ಬಗೆಗಿನ ವಿಷಯಗಳ ಕುರಿತು ಪ್ರಬಂಧಗಳು ,ಕೈಪಿಡಿಗಳು. ನಿಧಿ ಕಂಡವಳಂತಾಯಿತು ನನ್ನ ಸ್ಥಿತಿ. ಇಂದು ರಾತ್ರಿ ತಾನು ಓದಿ ಕಾಲಾಪಾನಿ ಶಿಬಿರದಲ್ಲಿ ನನಗೆ ಕೊಡುವುದಾಗಿ ಭಾಷೆಯಿತ್ತರು ಸುಧಾ. ಮನಸ್ಸು ಇನ್ನೂ ಕಂಡಿರದ ಕಾಲಾಪಾನಿ ಶಿಬರಕ್ಕಾಗಲೇ ನೂರು ಸಲ ಜಿಗಿದಾಡಿತು. ಹೀಗೆಯೇ ದಿನದಿನವೂ ಏನಾದರೊಂದು ಹೊಸತು ಸಿಗುತ್ತಿದ್ದುದು ಚಾರಣಕ್ಕೆ ಇಂಬು ಕೊಟ್ಟಿತ್ತು.

ಇಂದು, ಗುಂಜಿ ಶಿಬಿರದಿಂದ ಲಿಪುಲೇಖ್ ಗಡಿಯವರೆಗೆ ನಮ್ಮೊಡನೆ ಇಂಡೊ

ಟಿಬೆಟಿಯನ್ ಬಾರ್ಡರ್ ಪೋಲೀಸ್‌ನವರು (ಐ.ಟಿ.ಬಿ.ಪಿ.) ಬರುವವರಿದ್ದರು. ಬೆಳಗ್ಗೆ ನಮ್ಮೊಂದಿಗೆ ವೈದ್ಯರೊಬ್ಬರು, ಇಬ್ಬರು ರೇಡಿಯೋ ಆಪರೇಟರ್‌ಗಳು. ಒಬ್ಬ ಕ್ಯಾಪ್ಟನ್ ಮತ್ತು ಕೆಲವರು ಅಶ್ವಾರೋಹಿಗಳು ಹೊರಟರು. ಯಾತ್ರಿಗಳು ಇಪ್ಪತ್ತೇಳು ಜನರಾದರೆ, ಪೋನಿವಾಲಾ-ಪೋರ್ಟರ್, ಪ್ರಾದೇಶಿಕ ವಿಕಾಸ ದಳದವರು ಮತ್ತು ಈಗ ಐ.ಟಿ.ಬಿ.ಪಿ.ಯವರೂ ಸೇರಿ ಇಪ್ಪತ್ತೈದಕ್ಕೂ ಹೆಚ್ಚು ಜನರಿದ್ದರು. ಐವತ್ತು-ಅರವತ್ತು ಜನರ ಗುಂಪಿನೊಂದಿಗೆ ಇಪ್ಪತ್ತೈದು ಮೂವತ್ತು ಕುದುರೆಗಳೂ ಸೇರಿ ತಂಡವು ದಿಬ್ಬಣವಾಗಿ ಹೋಗಿತ್ತು. ಏರುದನಿಯ ಮಾತುಕತೆ ಹಾಸ್ಯ ಚಟಾಕಿ, ಗಾಯನ ನಡೆದಿತ್ತು. ಕೆಲಯಾತ್ರಿಗಳು ಹಿಮಾಲಯದ ಈ ಎತ್ತರಕ್ಕೆ ಹೊಂದಿಕೊಳ್ಳಲಾರದೆ ಕಿರಿಕಿರಿ ಮಾಡಿಕೊಳ್ಳುತ್ತಿದ್ದರು. ಪೋರ್ಟರೊಂದಿಗೆ, ಸಹ ಯಾತ್ರಿಗಳೊಡನೆ ಅವರ ಚಕಮಕಿಯೂ ನಡೆದಿತ್ತು. ಐ.ಟಿ.ಬಿ.ಪಿ.ಯ ಡಾ.ರಾಜೂ ಅತಿ ಎತ್ತರದಲ್ಲಿನ ವಿರಳ ಹವೆಯಿಂದಾಗಿ ಮನುಷ್ಯರು ಸಹನೆ ಕಳೆದು ಕೊಳ್ಳುವುದು ಸಹಜ. ಅವರಿಗೆ ಎದುರುತ್ತರ ಕೊಡದಿದ್ದರಾಯಿತು. ಆದಷ್ಟು ದಾರಿ ನಡೆದು ಹೋದರೆ ಎತ್ತರಕ್ಕೆ ಬೇಗ ಹೊಂದಿಕೊಳ್ಳಬಹುದು. ಆಗಾಗ ಪಾನೀಯವೇನಾದರೂ ಅಲ್ಪ ಪ್ರಮಾಣದಲ್ಲಿ ಕುಡಿಯುತ್ತಿದ್ದರೆ ದಣಿವಾಗುವುದು ಕಡಿಮೆ. ಏನೇ ಭಾರ ಹೊರಬೇಕಿದ್ದರೂ ಬೆನ್ನ ಮೇಲೆ ಹೊರುವುದುತ್ತಮ. ಇಲ್ಲವೇ ಸೊಂಟಕ್ಕೆ ಕಟ್ಟಿಕೊಳ್ಳಿ. ಎರಡೂ ಕೈಗಳು ಖಾಲಿಯಿದ್ದರೆ ಬೀಸಿ ನಡೆಯಲು, ಆಸರೆ ಪಡೆಯಲು ಅನುಕೂಲ. . . ಇಂತಹ ಅನೇಕ ಸೂಕ್ತ ಸಲಹೆಗಳನ್ನು ಕೊಡುತ್ತ ನಡೆದಿದ್ದರು. ಐ.ಟಿ.ಬಿ.ಪಿ.ಯ.ವರಿಂದಾಗಿ ನಮ್ಮ ನಡಿಗೆಯಲ್ಲಿ ಚುರುಕು ಬಂದಿದ್ದರೆ ಅಚ್ಚರಿಯಿಲ್ಲ. ಅವರಿರುವರೆಂಬ ಸಂಗತಿಯೇ ಧೈರ್ಯ ತಂದಿತ್ತು.

ಗುಂಜಿಯಿಂದಲೇ ಪರಿಸರದಲ್ಲಿ ನೆಲದಲ್ಲಿ ಶುಷ್ಕತೆ ಇಣುಕಹತ್ತಿತು. ಕಲ್ಲು ಬಂಡೆಗಳ ಏರು, ನೊರಜುಗಲ್ಲಿನ ದಾರಿ, ತಣ್ಣನೆಯ ಒಣಗಾಳಿ. ನೋಡಲು ಸಿಗುತ್ತಿದ್ದುದು ಅಲ್ಲೊಂದು ಇಲ್ಲೊಂದು ಕುರುಚಲು ಗಿಡಗಳಷ್ಟೆ. ಕೆಲವೆಡೆ ಅದೂ ಇಲ್ಲದೆ ಹುಲ್ಲು ಮಾತ್ರ. ಬೇಸಿಗೆಯ ಬಿಸಿಲಿಗೆ ಮೈಯೊಡ್ಡಿದ್ದ ಈ ಹುಲ್ಲುಗಿಡಗಳೇ ಹೂ ಬಿಟ್ಟು ಒಣ ಕಲ್ಲು ಬಂಡೆಗಳ ಬೆತ್ತಲೆ ಪರ್ವತ ಭಾಗಗಳನ್ನು ಮುಚ್ಚಲೆತ್ನಿಸಿದ್ದವು

ಕಾಲೀಗಂಗಾ ನದಿಯ ಇಬ್ಬದಿಯಲ್ಲೂ, ಕಣ್ಣು ಹಾಯುವವರೆಗೆ ನಿಸರ್ಗ ನಿರ್ಮಿತ 'ರಾಕ್ ಗಾರ್ಡನ್'. ಕಾಲೀಗಂಗಾ ಕೂಡ ತನ್ನ ಪಾತ್ರದಲ್ಲಿದ್ದ ಬಂಡೆಗಳನ್ನು ಸುತ್ತಿ ಹೊರಳಿ ಕುಣಿದು ಹರಿದಿದ್ದಳು. ದಾರಿಯಲ್ಲಿ ಝುಬ್ಬುಗಳ ಮೇಲೆ ಸಾಮಾನು ಹೇರಿಕೊಂಡು ಬರುತ್ತಿದ್ದ ಕೆಲ ವ್ಯಾಪಾರಿಗಳು ಎದುರಾದರು. ಒಂದು ಝುಬ್ಬುವಿನ ಮೇಲೆ ವಿಶಿಷ್ಟ ಜಾತಿಯ ಹುಲ್ಲಿನ ಹೊರೆಯಿತ್ತು. ಧೂಪ ದ ಹುಲ್ಲೆಂದು ಟಿಬೆಟಿನಿಂದ ಭಾರತಕ್ಕೆ ತಂದು ಮಾರುವವರಿದ್ದರು. ಕೆಲವರ ಬಳಿ ಮುಂಡುಮುಂಡಾಗಿ ಬೆಳದಿದ್ದ ಕುರಿಗಳ ಮಂದೆ ಇತ್ತು. ಗಡಿ ತೆರಪಿಲ್ಲದಾಗಲೇ ಇಷ್ಟು ಓಡಾಟವಿದ್ದರೆ ಅನಿರ್ಬಂಧಿತ ವ್ಯಾಪಾರ ನಡೆಯುತ್ತಿದ್ದಾಗ ಮನುಷ್ಯ – ಪ್ರಾಣಿಗಳ ಓಡಾಟ ಇನ್ನೆಷ್ಟಿದ್ದಿರಬೇಕು! ಈ ಪ್ರಾಣಿಗಳೂ ಕೂಡ ನಿರ್ಭಯವಾಗಿ ಎರಡು ಅಡಿ ಅಗಲದ 'ಸೇತುವೆ' ಯೆನಿಸಿಕೊಂಡ ವಿಲಕ್ಷಣವಾದ ಕಟ್ಟಿಗೆ ಸರದ ಮೇಲೆ ನಡೆದು ಬರುತ್ತಿದ್ದವು.

ಎಷ್ಟೆಷ್ಟು ತರಹದ ಸೇತುವೆ? ಯಾವಾವ ಜೀರ್ಣಸ್ಥಿತಿಯಲ್ಲಿದ್ದ ಸೇತುವೆ? ಸೇತುವೆಯ ಪಳಿಯುಳಿಕೆ! ವಿವಿಧ ರೀತಿಯ ಸ್ಥಿತಿಯ ಸೇತುವೆಗಳನ್ನು ಗಾಲಾಯಿಂದಲೇ ನೋಡುತ್ತ ದಾಟುತ್ತ

ಬಂದೆವು. ಗುಂಜಿ ಶಿಬಿರವನ್ನು ತಲುಪಲು ನಿನ್ನೆ ಐದು ಕಿ.ಮೀ. ಹೆಚ್ಚಿಗೆ ನಡೆದಿದ್ದೆವು ಕಾರಣ-ಸೇತುವೆಯೇ ಪ್ರವಾಹದಲ್ಲಿ ಕೊಚ್ಚಿಹೋಗಿತ್ತು. ಹಿಮಾಲಯದಲ್ಲಿ ಬಹಳ ಕಡೆ ಜನಸಂಚಾರದ ಮಾರ್ಗವು ನದಿಯನ್ನೇ ಅನುಸರಿಸುವುದರಿಂದ ಸೇತುವೆಗಳು ಅನಿವಾರ್ಯ. ಪ್ರತಿವರ್ಷವೂ ಮುಂಗಾರಿನ ಹೊಡೆತ ದ ಪ್ರವಾಹದಿಂದ ಸೇತುವೆಗಳು ಕೊಚ್ಚಿಹೋಗುವುದು, ಮುರಿದು ಬೀಳುವುದು ಸಾಮಾನ್ಯ. ಗುಂಜಿ ಶಿಬಿರದ ಹತ್ತಿರಕ್ಕೇ ಇರಬೇಕಿದ್ದ ಸೇತುವೆಯ ಸಮಸ್ಯೆ ಇನ್ನೂ ಕ್ಲಿಷ್ಟ. ಎರಡು ನದಿಗಳ ಸಂಗಮದಿಂದಾಗಿ ನೀರು ಅಗಾಧ ಪ್ರಮಾಣದಲ್ಲಿ ನುಗ್ಗಿ ಬರುವಾಗ ಎರಡೂ ದಡಗಳು ಕೊಚ್ಚಿ-ಕುಸಿದು ಹೋಗಿ ನದಿ ಪಾತ್ರವು ವರ್ಷವರ್ಷವೂ ಅಗಲವಾಗುವುದು. ಆಗ ಸೇತುವೆಯ ಉದ್ದವೇ ಒಂದು ಸಮಸ್ಯೆ. ಸಾಲದುದಕ್ಕೆ ಹಿಮಗಾಲದಲ್ಲಿ ಬೀಳುವ ಹಿಮರಾಶಿಯ ಭಾರದಿಂದ ಸೇತುವೆ ಜಗ್ಗಿ ಕಡಿದು ಹೋಗುವುದೂ ಉಂಟು.

ಪಾಂಗು-ಸಿರ್ಖಾ ದಾರಿಯಲ್ಲಿ ಕಂಡ ಕೊಳ್ಳಗಳು, ನದೀ ಕಂದರಗಳು, ಗಾಲಾ ಮಾಲ್ಪಾ ಬುಧಿ ದಾರಿಯಲ್ಲಿ ಕಂಡ ಪ್ರಪಾತಗಳು, ಕಡಿದಾದ ಪರ್ವತಗಳು, ಶಿಲಾಪಾತ, ಗರ್ಬ್ಯಾಂಗ್‌ನಲ್ಲಿ ಕಂಡ ಭೂ ಕಂಪದ ಪರಿಣಾಮ, ಗುಂಜಿಯಲ್ಲಿನ ನದೀ ಪಾತ್ರದ ವಿಸ್ತಾರ- ಕೇವಲ ಒಂದು ವಾರದ ಪ್ರಯಾಣದಲ್ಲೇ ಇಷ್ಟೆಲ್ಲಾ ಕುರುಹುಗಳನ್ನಿತ್ತ ಹಿಮಾಲಯವು ತನ್ನ ಸ್ವಭಾವದ ಕಿರುಪರಿಚಯ ಮಾಡಿಕೊಟ್ಟಿತು. ವರ್ಷಕ್ಕೆ ಮೂರುವರೆ ಅಂಗುಲದಂತೆ ಸರಿಯತ್ತಾ ಏಷಿಯಾ ಖಂಡದ ಭೂಫಲಕವನ್ನು ಗುಮ್ಮುತ್ತಿರುವ ಭಾರತದ ಭೂವಿಸ್ತಾರ, ಇದರಿಂದಾಗಿ ಇನ್ನೂ ಮೇಲಕ್ಕೆ ಮೈಕೊಡವಿಕೊಂಡೇಳುತ್ತಿರುವ ಹಿಮಾಲಯ, ಈ ಹಿಮಾಲಯದಡಿಯಲ್ಲಿಯೇ ಹಾದು ಹೋಗಿರುವ ಭೂಕಂಪ ಅಧಿಕೇಂದ್ರಗಳ ಪಟ್ಟಿ, ಪ್ರತಿ ಹಿಮಗಾಲದಲ್ಲೂ ಹಿಮಾಲಯದ ಉನ್ನತ ಶಿಖರಗಳ ಮೇಲೆ ಶೇಖರವಾಗುವ ಹಿಮರಾಶಿಯ ಭಾರ, ಮಳೆಗಾಲದಲ್ಲಿ ಹಿಮಾಲಯದ ದಕ್ಷಿಣ ಭಾಗಕ್ಕೆ ಎರಗುವ ಮುಂಗಾರು ಮಳೆ, ಇದರಿಂದಾಗಿ ತುಂಬಿ ಹರಿವ ನದಿಗಳ ಪ್ರವಾಹದ ಕೊರೆತ-ಹೆಸರಿಗೆ ಹಿಮಾಚಲವಾದರೂ ಇಲ್ಲಿ ಯಾವುದೂ ಅಚಲವಲ್ಲ. ಯಾವುದೂ ಸ್ಥಿರವಲ್ಲ. ಅಂದ ಮೇಲೆ ಹುಲುಮಾನವ ಕಟ್ಟುವ ಸೇತುವೆ ರಸ್ತೆಗಳನ್ನು ನೆಚ್ಚಲಾದೀತೇ? ನಿರ್ಮಿಸಿದ ಜಲಾಶಯ, ವಿದ್ಯುತ್ ಕೇಂದ್ರಗಳನ್ನು ನಂಬಲಾದೀತೆ? ಹಿಮಾಲಯದ ದಕ್ಷಿಣಾಮುಖದ ಪರಿ ಇಂತಾದರೆ ಉತ್ತರಾಮುಖದ ಟಿಬೆಟ್ ಪರ್ವತಗಳ ಪರಿಯಿನ್ನೆಂತೋ! ಅಂತೂ ಹಿಮಾಲಯವು ಸೋಜಿಗದ ಸುರಿಮಳೆ ಸುರಿಸುವ ಪರ್ವತ ಮಾಲೆಯೇ ದಿಟ.

ಗುಂಜಿ ಶಿಬಿರದಿಂದ ಮೂರು ಕಿ.ಮೀ. ಬಂದಿದ್ದೆವು. ಮುಂದೆ ಹೋಗಿದ್ದ ಯಾತ್ರಿಗಳು, ಭೋಟಿಯಾಗಳು ದಾರಿಯ ಇಕ್ಕೆಲಗಳಲ್ಲಿ ಆರಾಮವಾಗಿ ಕುಳಿತಿದ್ದರು. ಏಕೆಂದು ಊಹಿಸುವ ಮೊದಲೇ ಕೈಗೊಂದು ಬಿಸಿಬಿಸಿ ಚಹಾದ ಬಟ್ಟಲನ್ನು ಕೊಡುತ್ತಾ ಐ.ಟಿ.ಬಿ.ಪಿ. ಯೋಧನೊಬ್ಬ ಓಂ ನಮಃ ಶಿವಾಯ ಎಂದು ಕಿರುನಗೆ ಬೀರಿ ಸ್ವಾಗತಿಸಿದ್ದ. ಕಾಲೀಗಂಗಾ ನದಿಯ ದಂಡೆಯ ಮೇಲೆ ಎರಡು ಒಲೆಗಳು ಉರಿಯುತ್ತಿದ್ದು, ಅದರ ಮೇಲೆ ಚಹಾ ನೀರು ಕುದಿಯುತ್ತಿತ್ತು. ಬೇಕೆಂದಷ್ಟು ಚಹಾ ಸರಬರಾಜಾಗುತ್ತಿತ್ತು. ಕುಳಿತಲ್ಲಿಗೇ ತುಂಬಿದ ಬಟ್ಟಲು ತಂದು ಕೊಡುತ್ತಿದ್ದ ಸೈನಿಕಸೋದರರು 'ನಮ್ಮ ಕೈಲಾದ ಆತಿಥ್ಯವಿದು. ಹೆಚ್ಚಿಗೆ ಮಾಡಲು ಮನವಿದ್ದರೂ ಸೌಲಭ್ಯವಿಲ್ಲ' ಎಂದು ಉಪಚಾರ ಮಾಡಿದರು.

ತಮ್ಮ ಭೂಮಿ ಕಾಣಿಯನ್ನು, ಸಂಸಾರವನ್ನು ಹಿಂದೆ ಬಿಟ್ಟು ಇಡೀ ದೇಶವನ್ನು ದೇಶವಾಸಿಗಳನ್ನು ಕಟ್ಟಿಕೊಂಡ ಇವರ ಆತಿಥ್ಯಕ್ಕೆ ಕೊನೆಯೆಲ್ಲಿ! ಇವರದು ಪೂರಾ ಭಾರತವನ್ನೇ ಒಳಗಿರಿಸಿಕೊಂಡ ಹೃದಯ. ಪ್ರತಿಯೊಬ್ಬರನ್ನೂ 'ಬೆಹನ್ ಜೀ' 'ಭಾಯಿಸಾಬ್' ಎಂದು ಸನಿಹಕ್ಕೆ ಬಂದು ಮಾತನಾಡುವ ಆತ್ಮೀಯತೆ. ಜೊತಗ ಓಂ ನಮಃ ಶಿವಾಯ ದ ಭಕ್ತಿ ಭಾವ. ಒಂದು ನಗುವಿನಲ್ಲಿ, ಒಂದು ಮಾತಿನಲ್ಲಿ ಸೋದರ ಭಾವವನ್ನು ಜಾಗೃತಗೊಳಿಸಿದ ಹಸುಗೂಸಿನ ಮನದವರು. ಇವರು ಧರಿಸಿದ್ದ ಶಿಸ್ತಿನ ಸಿಪಾಯಿಯ ವೇಷ ಭೂಷಣಗಳೂ ವಿಚಿತ್ರ ರೀತಿಯಲ್ಲಿ ಆಪ್ಯಾಯಮಾನವಾಗಿತ್ತು. ಕಾಲಾಪಾನಿ ಶಿಬಿರವನ್ನು ತಲುಪುವ ವೇಳೆಗೆ ಕು.ಮಂ.ವಿ.ನಿ.ಯವರು ನೀಡಿದ್ದ ಆತಿಥ್ಯದಲ್ಲಿ ಹಳ್ಳಿಗರ ಮುಗ್ಧ ಆತ್ಮೀಯತಯಿತ್ತು. ಇಂದು ಐ.ಟಿ.ಬಿ.ಪಿ. ನೀಡಿದ್ದ ಆತಿಥ್ಯದಲ್ಲಿ ಶಿಷ್ಟೋಪಚಾರದ ಒತ್ತಾಯವೂ ಬೆರೆತಿತ್ತು. ಮುಕ್ತ ಸಂವಾದದಲ್ಲಿಯೂ ಶಿಷ್ಟತೆಯೆದ್ದು ಕಾಣುತ್ತಿತ್ತು. ಸಾಮಾನ್ಯ ಜನತಯ ಮತ್ತು ಸೇನಾವರ್ಗದ ನಡುವಿನ ಅಂತರ ಢಾಳಾಗಿ ಕಾಣುತ್ತಿತ್ತು. ವರ್ಷವಿಡೀ ನಡೆಸುವ ಮಿಲಿಟರಿ ಜೀವನದ ಏಕತಾನತೆಯಲ್ಲಿ ಆಗೀಗ ಸಿಗುವ ಸಾಮಾನ್ಯ ಜನರೊಡನಾಟವನ್ನು ಹೃತ್ಪೂರ್ವಕ ಆನಂದಿಸುವ ಮಂದಿ ನಮ್ಮಿಂದ ಬಯಸುವುದಾದರೂ ಏನನ್ನು? ಆತ್ಮೀಯತೆ ಅಷ್ಟೆ. ಸಿಕ್ಕರೆ ಸರಿ. ಸಿಗದಿದ್ದರೆ ಕರ್ತವ್ಯ ಮಾಡಿದೆ ಎನ್ನುವ ತೃಪ್ತಿ. ಸ್ಥಳೀಕರೊಂದಿಗೆ ಬೆರೆತು ಕೊಳ್ಳುವ, ಕಷ್ಟ ಸುಖಕ್ಕಾಗುವ ತುಡಿತ. ಜೀವಕ್ಕೆ ಅವರು ಕೊಡುವ ಬೆಲೆ, ಪ್ರಕೃತಿಯ ವಿಪರೀತ ಪರಿಸ್ಥಿಯಲ್ಲಿ ಕೊಡುವ ಸಹಾಯ ಹಸ್ತ– ಹಿರಿಯಣ್ಣನಂತೆಯೇ ಇವರ ವ್ಯವಹಾರ. ಈ ಹಿರಿಯಣ್ಣನ ಬಲಿಷ್ಠ ಬಾಹುಗಳು ಕಾಲಾಪಾನಿ ಶಿಬಿರದಲ್ಲಿ ಯಾತ್ರಿ ತಂಡವನ್ನು ಸ್ವಾಗತಿಸಿದ ರೀತಿ ಅನನ್ಯ. ಮಹಿಳೆಯರಿಗೆ ಕೈಮುಗಿದು ಓಂ ನಮಃ ಶಿವಾಯ ಎಂದರೆ ಗಂಡಸರನ್ನು ಕೈಕುಲುಕಿ ನಂತರ ಬಿಗಿದಪ್ಪಿಕೊಂಡು ಓಂ ನಮಃ ಶಿವಾಯ ಎಂದ ರೀತಿ ವಿಶೇಷಾಭಿಮಾನ ತಂದಿತ್ತು. "ಈಗ ಊಟ ಮಾಡಿ ಸುಧಾರಿಸಿಕೊಳ್ಳಿ. ಸಂಜೆಗೆ ಕಾಳೀಮಾತಾ ಮಂದಿರದಲ್ಲಿ ಮತ್ತೆ ಕೂಡೋಣ." ಎಂದ ಇವರ ಮಾತು ವಿಧಾಯಕವಾದರೂ ಕಾಠಿಣ್ಯತೆ ಕಳೆದುಕೊಂಡ ಆಹ್ವಾನವಾಗಿಹೋಯಿತು. ಐ.ಟಿ.ಬಿ.ಪಿ. ಸೋದರರಂತೆಯೇ ಅವರ ಮಿಲಿಟರಿ ಶಿಬಿರದ ಮುಂಭಾಗವೂ ಆತ್ಮೀಯ ಸುಂದರ ತಾಣ' ಕಾಳೀಗಂಗಾ ಉದ್ಗಮ ಸ್ಥಳದ ಪುಟ್ಟಕೊಳ. ಅದರ ದಂಡೆಯ ಮೇಲೆ ಕಾಳೀಮಾತಾ ಮಂದಿರ. ಕೊಳದ ಸುತ್ತಲೂ ಹಾರಾಡುತ್ತಿದ್ದ ಕಾವಿ ಬಟ್ಟೆಯ ಧ್ವಜಗಳು.ಎಡಗಡಗೆ ಮುಗಿಲೆತ್ತರಕ್ಕೆ ಎದ್ದಿದ್ದ ಶಿವಪರ್ವತ್ ನ ಗರಗಸದಂತೆ ಕಾಣುತ್ತಿದ್ದ ಶಿಖರಗಳ ಸಾಲು. ಬಲಗಡೆಯ ಬೆಟ್ಟದ ನೆತ್ತಿಯಲ್ಲಿ ಶಿವಮಂದಿರ. ಹಿಂಜಿದ ಹತ್ತಿಯಂತೆ ಅಲ್ಲಲ್ಲಿ ತೂರಾಡಿದ್ದ ಹಗುರ ಬಿಳಿ ಮೋಡಗಳು. ಕಾಳೀಮಾತಾ ಮಂದಿರವನ್ನು ದಾಟಿ ಅರ್ಧ ಕಿ.ಮೀ ನಡೆದರೆ ಕು.ಮಂ.ವಿ.ನಿ.ಯ ಅರ್ಧ ಗೋಳಾಕಾರದ ಟೆಂಟ್‌ಗಳು. ೧೧೯೦೦ ಅಡಿಗಳ ಮುಗಿಲೆತ್ತರದ ಇಂತಹ ಪರಿಸರದಲ್ಲಿ ಕೇವಲ ಒಂದು ಸಂಜೆ ಏನೇನೂ ಸಾಲದು.

ಮಧ್ಯಾಹ್ನವೇ, ಐ.ಟಿ.ಬಿ.ಪಿ. ಕಛೇರಿಯಲ್ಲಿ ನಮ್ಮೆಲ್ಲರ ಪಾಸ್ಪೋರ್ಟ್ ಮತ್ತು ಕ್ಯಾಮರಾವನ್ನು ಪರೀಕ್ಷಿಸಲಾಯಿತು. ಅಲ್ಲಿಯೇ ನಮ್ಮಲ್ಲಿದ್ದ ಭಾರತದ ಹಣವನ್ನು ಮತ್ತು ತೆಗೆದ ಫಿಲ್ಮ್ ರೋಲುಗಳನ್ನು ಜಮಾ ಮಾಡಿಕೊಂಡರು. ರಕ್‌ಸ್ಯಾಕ್‌ನಿಂದ ಅನಾವಶ್ಯಕ ಬಟ್ಟೆಗಳನ್ನು, ಕೊಳೆಯಾದ ಕಾಲು ಚೀಲಗಳನ್ನು ಹೆಚ್ಚಿನ ಮೆಟ್ಟುಗಳನ್ನು ಈಚೆ ತೆಗೆದು ಮೂಟೆ ಕಟ್ಟಿ ಕಾಲಾಪಾನಿ ಶಿಬಿರದಲ್ಲೇ ಬಿಟ್ಟು ಹೋಗಲು ಅಣಿ ಮಾಡಿದ ಮೇಲೆ ಮುಂದಿನ ಪ್ರಯಾಣವು ಇನ್ನೂ ಹಗುರವಾಯಿತೆಂಬ ಭಾವನೆ!

'ಇವತ್ತಿನ ನನ್ನ ಕೊಡುಗೆ ನಿನಗೆ' ಎಂದು ಪುಸ್ತಕಗಳನ್ನು ಸುಧಾ ನನ್ನ ಉಡಿಯಲ್ಲಿಟ್ಟರು. ನನ್ನ ಮಟ್ಟಿಗೆ ಇದು ಅತ್ಯಮೂಲ್ಯ ಕೊಡುಗೆಯಾಗಿತ್ತು. ಪ್ರಬಂಧಗಳನ್ನು ಓದುತ್ತಾ, ಮ್ಯಾಪುಗಳನ್ನು ನೋಡುತ್ತಾ ಹೋದಂತೆ, ಈ ಒಂದು ವಾರದಲ್ಲಿ ಪ್ರತ್ಯಕ್ಷ ನೋಡಿದ್ದ, ಅನುಭವಿಸಿದ್ದ ರೋಮಾಂಚಕಾರೀ ಹಿಮಾಲಯದ ಜನನವೂ ಕೂಡ ಕುತೂಹಲ ಕೆರಳಿಸುವ, ವಿಸ್ಮಯ ಮೂಡಿಸುವ ಸಂಗತಿಯಾಗಿ ತೋರಿತು.

ಹಿಮಾಲಯದ ಜನನ ವೃತ್ತಾಂತ ೧೩೦-೧೪೦ ಕೋಟಿ ವರ್ಷಗಳ ಹಿಂದೆ ಇದ್ದ **ಟೆಥಿಸ್** ಸಾಗರ ಗರ್ಭದಲ್ಲಿ ಆರಂಭವಾಯಿತು. ಸಾಗರ ತಳದಲ್ಲಿ ಮರಳು ಮಣ್ಣು ಪದರ ಪದರವಾಗಿ ತುಂಬಿಕೊಳ್ಳುವುದು ನಿರಂತರವಾಗಿ ೬೦-೬೫ ಕೋಟಿ ವರ್ಷಗಳವರೆಗೆ ನಡೆಯಿತು. ಈ ಪದರಗಳಲ್ಲಿ ಏಕಾಣು ಜೀವಿಗಳ ಚಿತ್ರ ವಿಚಿತ್ರ ರಚನೆಗಳು, ಅಂದಿನ ಸ್ಥಿತಿಯ ಲಕ್ಷಣಗಳು ಇಂದಿಗೂ ಲಘು ಹಿಮಾಲಯ ದ ಶಿಲಾಭಾಗಗಳಲ್ಲಿ ಕಾಣಸಿಗುತ್ತವೆ. ೬೦-೬೫ ಕೋಟಿ ವರ್ಷಗಳ ಹಿಂದೆ ಆದ ಭೂಮಿಯೊಳಗಿನ ಸ್ಥಿತ್ಯಂತರದಿಂದಾಗಿ ಈ ಪದರ ಕಟ್ಟುವಿಕೆ ನಿಂತು ಹೋಗಿ ಬೇರೆಡೆ ಮುಂದುವರೆಯಿತು. ಈ ಹೊಸಪದರಗಳಲ್ಲಿಯೇ ನಂತರ ವಿಕಾಸ ಹೊಂದಿದ ವಿವಿಧ ವರ್ಗದ, ಜಾತಿಯ ಸಸ್ಯ-ಪ್ರಾಣಿಗಳ ಪಳೆಯುಳಿಕೆಗಳು ಉತ್ತರ ಹಿಮಾಲಯದ ವಿಸ್ತಾರದಲ್ಲಿ ಇಂದಿಗೂ ಸಿಗುತ್ತವೆ. ಈ ಪಳೆಯುಳಿಕೆಗಳಲ್ಲಿ ನಿರ್ದಿಷ್ಟ ಲಕ್ಷಣಗಳುಳ್ಳವನ್ನು ಸಾಲಿಗ್ರಾಮವೆಂದು ಪೂಜಿಸಲಾಗುತ್ತದೆ. ೨೦-೨೨ ಕೋಟಿ ವರ್ಷಗಳ ಹಿಂದೆ ಆದ ಪರ್ಸಿನಿಯನ್ ಕ್ಷೋಭೆಯಲ್ಲಿ ಟೆಥಿಸ್ ಸಾಗರವು ಸಂಕುಚಿತಗೊಂಡು ಲಘು ಹಿಮಾಲಯ ಶ್ರೇಣಿ ಮೇಲೆದ್ದಿತು. ಈ ಶ್ರೇಣಿಯ ಉತ್ತರಕ್ಕೇ ಸೀಮಿತವಾದ ಟೆಥಿಸ್ ಸಾಗರದಲ್ಲಿ ಇನ್ನೂ ಪದರ ಕಟ್ಟುವಿಕೆ ೧೩-೧೪ ಕೋಟಿ ವರ್ಷ ಮುಂದುವರೆಯಿತು. ಕೇವಲ ೭ ಕೋಟಿ ವರ್ಷಗಳ ಹಿಂದೆ ನಡೆದ ಭೂ ವಿಪ್ಲವವು ಪ್ರಸವದ ಮೊದಲ ಆಕುಂಚನವೆನ್ನಬಹುದು. ಇದರಿಂದ ಪಶ್ಚಿಮೋತ್ತರದ ಕಾರಕೊರಂ ಶ್ರೇಣಿ ಮೇಲೆ ಬಂದಿತು. ಅಲ್ಲದೆ ನೀರೆಲ್ಲ ದಕ್ಷಿಣದ ಕಡೆಗೆ ನುಗ್ಗಿತು. ಟೆಥಿಸ್ ಸಾಗರ ತಳದಲ್ಲಿ ೫೦-೬೦ ಕಿ.ಮೀ. ಉದ್ದದ ಬಿರುಕು ಬಿಟ್ಟುಕೊಂಡು ಭೂಮಿಯೊಳಗಿನ ಲಾವಾರಸ ಹೊರಹರಿದು ಕಲ್ಲು ಪದರಗಳ ಮಧ್ಯೆ ಹೆಪ್ಪುಗಟ್ಟಿತು. ಅಳಿದುಳಿದ ಟೆಥಿಸ್ ಸಾಗರದ ಸೆರಗಿನಲ್ಲಿ ಪದರಗಳು ಬೆಳೆಯುವುದು ೧೧/೨ ಕೋಟಿ ವರ್ಷಗಳವರೆಗೆ ಮುಂದುವರೆಯಿತು. ಇದೇ ವೇಳೆಯಲ್ಲಿ ಭಾರತದ ತ್ರಿಕೋನ ಭೂಖಂಡ ಏಷಿಯಾ ಖಂಡದ ಟಿಬೆಟ್, ಕಾರಕೊರಂ ಭೂಭಾಗವನ್ನು ಗುದ್ದಿ ಅದರ ಕೆಳಗೆ ಸರಿದು ಏಷಿಯಾ ಭಾಗವನ್ನು ಮೇಲಕ್ಕೆ ಮೀಟುತ್ತಿತ್ತು.

ಎರಡನೆಯ ಭಾರೀ ವಿಪ್ಲವ ೪ ೧/೨ಕೋಟಿ ವರ್ಷಗಳ ಹಿಂದೆ ಆಗಿ, ಈ ಬಾರಿ ಸಮುದ್ರಮಟ್ಟದಲ್ಲಿದ್ದ ಏಷಿಯಾ ಖಂಡದ ಟಿಬೆಟ್ ಭೂಭಾಗ ಮೇಲಕ್ಕೆತ್ತಲ್ಪಟ್ಟು ಅಲ್ಲಿದ್ದ ಶಿಲಾಭಾಗಗಳು ದಕ್ಷಿಣದ ಕಡೆಗೆ ಜರುಗಿ ಬಂದವು. ೨ ಕೋಟಿ ವರ್ಷಗಳ ಹಿಂದೆ ಆದ ಮೂರನೇ ಪ್ರಳಯಾಂತಕ ಕ್ಷೋಭೆಯಿಂದ ಸಾವಿರಾರು ಅಡಿಗಳೆತ್ತರದ ಬೆಟ್ಟಗಳು ಭೂಮಿಯ ಮೇಲೆದ್ದು ಬಂದವು. ಪರ್ವತಾಕಾರವಾಗಿ ಬೆಳೆಯುತ್ತಲೇ ಇರುವ ಈ ಶ್ರೇಣಿಗಳ ಸಮೂಹವೇ ಹಿಮಾಲಯ ವಾಗಿ ಉದಿಸಿತು. ಈ ಭೂ ಭಾಗದಲ್ಲಿದ್ದ ಬಿರುಕುಗಳು ಅಗಲವಾಗಿ ಪರ್ವತ ಶಿಲೆಗಳು ಸ್ಥಾನಪಲ್ಲಟಗೊಂಡು ನವಜಾತ ಹಿಮಾಲಯವು ದಕ್ಷಿಣದ ಕಡೆಗೆ ಸರಿಯ ತೊಡಗಿತು. ವರ್ಷಕ್ಕೆ ಎರಡು ಸೆಂಟಿ ಮೀಟರ್‌ನಂತೆ

ಇಂದಿಗೂ ಜರಗುತ್ತಿದೆಯೆಂದು ಎಣಿಕೆ! ಡಾಲ್ ಹೌಸಿ, ಸಿಮ್ಲಾ, ರಾಣೀಖೇಟ್, ಅಲ್ಮೊರಾ, ದಾರ್ಜಿಲಿಂಗ್ ಮುಂತಾದವು ಈ ರೀತಿ ಸ್ಥಾನಭ್ರಷ್ಟವಾದ ಶಿಲಾಶೈಲ ಸಮೂಹವೇ. ಬಿರುಕುಗಳೇ ಅಲ್ಲದೆ, ಅನೇಕ ಪದರಗಳ ಭಾರವೂ ಸೇರಿ ಭೂಮಿಯ ಗಟ್ಟಿಯಾದ ಶಿಲಾ ಪದರವೇ ಕರಗಿ ಗ್ರಾನೈಟ್ ಮಾಗ್ಮಾವು ಬಂಡೆಗಳ ಪದರವನ್ನು ಸೀಳಿಕೊಂಡು ಮೇಲೆದ್ದಿತು. ಈಗಿನ ಶಿವಾಲಿಕ ಶ್ರೇಣಿಯ ಉತ್ತರಕ್ಕೆ ಮಡುಗಟ್ಟಿದ ನೀರಿನಲ್ಲಿ ಪದರ ಕಟ್ಟುವಿಕೆ ಮುಂದುವರೆಯಿತು. ಸುಮಾರು ೨೫-೩೦ ಲಕ್ಷ ವರ್ಷಗಳ ಹಿಂದೆ ನಾಲ್ಕನೆಯ ಭೂಕ್ಷೋಭೆಯಲ್ಲಿ ಶಿವಾಲಿಕ ಬೇಸಿನ್‌ನಲ್ಲಿ ಕಟ್ಟಿದ ಪದರಗಳು ಒಂದಾಗಿ ಸೇರಿ ಇಂದಿನ ಶಿವಾಲಕ ಬೆಟ್ಟಗಳ ಸಾಲು ರೂಪಗೊಂಡಿತು.

ಶಿವಾಲಿಕ ಶ್ರೇಣಿ ಮತ್ತು ಹಿಮಾಲಯ ಶ್ರೇಣಿಗಳನ್ನು ಮಧ್ಯದ ಸಂಧಿಯು ಬೇರ್ಪಡಿಸಿದ್ದರೂ ಹಿಮಾಲಯವು ದಕ್ಷಿಣಕ್ಕೆ ಜರುಗುತ್ತಿರುವುದರಿಂದ ಕೆಲವೆಡೆ ಶಿವಾಲಿಕದ ಬೆಟ್ಟಗಳ ಮೇಲೆ ಹಿಮಾಲಯದ ಪರ್ವತಗಳು ಏರಿಕುಳಿತಿವೆ! ಕಡೆಯದಾಗಿ ಶಿವಾಲಿಕದ ದಕ್ಷಿಣಕ್ಕೆ ಪದರಗಳು ಬಿದ್ದು ಇಂದಿನ ಗಂಗಾಬಯಲು ರೂಪಗೊಂಡಿದೆ. ಹಿಮಾಲಯದ ಎತ್ತರ ಬೆಳೆಯುವಿಕೆಗೆ ಮತ್ತು ದಕ್ಷಿಣಕ್ಕೆ ಜರಗುವಿಕೆಗೆ ಕಾರಣ ಭಾರತದ ಪರ್ಯಾಯ ದ್ವೀಪದ ತ್ರಿಕೋನ ಭೂಖಂಡವು ಏಷಿಯಾ ಭೂಪದರವನ್ನು ಹರಿಹಾಯುತ್ತಿರುವುದು.(ನಕ್ಷೆ -೩)

ಸಾಗರ ತಳದಲ್ಲಿದ್ದ ಮರಳ ರಾಶಿ ಮೇಲೆದ್ದು ಇಂದು ಉನ್ನತ ಹಿಮಶಿಖರಗಳಾಗಿ ನಿಂತಿವೆ! ಸಾಗರ ಮಟ್ಟದಲ್ಲಿದ್ದ ಟಿಬೆಟ್ ಭೂಭಾಗ ಇಂದು ಅತ್ಯುನ್ನತ ಪ್ರಸ್ಥ ಭೂಮಿಯಾಗಿ ಜಗತ್ತಿನ ಛಾವಣಿಯೆನಿಸಿದೆ. ಇಂದಿಗೂ ಬೆಳೆಯುತ್ತಿರುವ ಹಿಮಾಚಲ ದಕ್ಷಿಣದತ್ತ ಪರಿಬರುತ್ತಿದೆ-ಅಂದಮೇಲೆ ಅಚಲ ಅಚರವಾದುದೇನು? ವಿಶ್ವದಲ್ಲಿ ಸ್ಥಿತ್ಯಂತರ ಹೊಂದದಿರುವುದೇನು? ಸರ್ವವೂ ಸರ್ವತ್ರ ಚಲನ ಶೀಲವಾಗಿದ್ದರೆ ಚಲನೆಯ ಮೂಲ ಶಕ್ತಿಯಾವುದು? ಭಾರತ ಋಷಿವಾಣಿ 'ತತ್' (ಅದು-ಬ್ರಹ್ಮ) ಎಂದುತ್ತರಿಸಿತು. ನೂರಾರು ಕೋಟಿ ವರ್ಷಗಳ ಹಿಂದೆ ನಡೆದಿರಬಹುದಾದುನ್ನು ಊಹಿಸಿ ಅದನ್ನು ಸಾಕ್ಷ್ಯಾಧಾರ ಸಮೇತ ಸಮರ್ಥಿಸುವ ಮಾನವ ಚೈತನ್ಯದ ಶಕ್ತಿಯನ್ನು ಕುರಿತು ನನ್ನ ಮನಸ್ಸು ಧ್ಯಾನಿಸಿತ್ತು. ಸ್ಥಿತ್ಯಂತರದ ಹಿಂದಿರುವ ವಿರಾಟ್ ಶಕ್ತಿಯನ್ನು ಕುರಿತು ಚಿಂತಿಸಿದ ಭಾರತೀಯ ವಿಚಾರ ವೈಖರಿಯನ್ನೂ ಅನುಭಾವಿಸಿತ್ತು. ಮಾನವ ಚೈತನ್ಯವೇ ಈ ಬ್ರಹ್ಮವೆಂದು ಹೇಳಿ 'ಬ್ರಹ್ಮ'ದ ಆಯತನ (ಸ್ಥಾನ) ವಾಗಿರುವ ಮಾನವನನ್ನು 'ಆಯತನವಾನ್' ಎಂದಿತು ಭಾರತೀಯ ವಿಚಾರಧಾರೆ. ಆಯತನವಾನ್ ಪಾರಿಭಾಷಿಕ ಪದವು ಮಾನವ ಚೈತನ್ಯಕ್ಕೆ ಭಾರತಿಯರು ಕೊಟ್ಟ ಅತ್ಯುಚ್ಚ ಕಾಣಿಕೆ. ಈ ಶ್ರೀಮಂತ ವಿಚಾರ ಪರಂಪರೆಗೆ ಸೇರಿದವಳು ನಾನೆಂಬ ಹೆಗ್ಗಳಿಕೆ ತಾನೇತಾನಾಯಿತು.

ಹಿಮಾಲಯದ ಬಗೆಗೆ ಓದುತ್ತಾ ಹೋದಂತೆ ಗತಕಾಲಕ್ಕೆ ತೂರಿಹೋದ ತರಗೆಲೆಯಾಗಿದ್ದ ನನ್ನನ್ನು ವರ್ತಮಾನಕ್ಕೆ ಎಳೆದು ತಂದವರು ಗೆಳತಿಯರು ನಿರ್ಮಲಾ ಮತ್ತು ಮಂದಾಕಿನಿ. ಸಂಜೆಯ ಇಳಿಬಿಸಿಲಿನ ತಂಗಾಳಿಯಲ್ಲಿ ತೇಲಿಬಂದ ಗಾನ ನಮ್ಮನ್ನು ಕಾಳೀಮಾತಾ ಮಂದಿರಕ್ಕೆಳೆದುಕೊಂಡು ಹೋಯಿತು. ಮಿಲಿಟರಿ ಶಿಬಿರದ ಕಾಳೀಮಾತಾ ಮಂದಿರದೊಳಗೆ ಅಲುಗಾಡಲು ಆಗದಂತೆ ಜನ ತುಂಬಿದ್ದರು. ಢೋಲು ತಾಳಗಳ, ೩೫-೪೦ ಕಂಠಗಳ ಸಮ್ಮಿಶ್ರತಾನ ಪರ್ವತಗಳೆಡೆಯಲ್ಲಿ ಪ್ರತಿಧ್ವನಿಸುತ್ತಿತ್ತು. ಉತ್ಸಾಹೀ ಯುವಕರು ಹುರುಪಿನಲ್ಲಿ ಹಾಡುತ್ತಿದ್ದ ಭಜನೆಗಳಿಗೆ ಕೊಳದ ದಂಡೆಯಲ್ಲಿ ಲಯಬದ್ಧವಾಗಿ

ಕುಣಿಯುತ್ತಿದ್ದರು ಹಲವರು. ಮನಸ್ಸು ಬುದ್ಧಿಗಳೆರಡೂ ವಿಶೇಷ ಶೂನ್ಯಸ್ಥಿತಿಯಲ್ಲಿದ್ದುದರಿಂದ ಕಾಳೀಮಾತೆಯಲ್ಲಿ ಕೋರುವುದೇನೂ ಉಳಿದಿರಲಿಲ್ಲ.

ಇಂದು ಬೆಳಗ್ಗೆ, ಕಾಳೀಮಾತಾ ಮಂದಿರದಲ್ಲಿ ಕಾಳಿಗೆ ಮತ್ತೊಮ್ಮೆ ತಲೆಬಾಗಿ, ಶಿವ ಮಂದಿರದ ಬೆಟ್ಟದ ಬುಡದಿಂದ ಸಾಗಿ, ನಾಬಿದಾಂಗ್ ಶಿಬಿರಾಭಿಮುಖವಾಗಿ ನಡೆದೆವು ಸರಿಸುಮಾರು ಸಮತಟ್ಟಿನ ಹತ್ತು ಕಿ.ಮೀ.ನ ದಾರಿಯಾಗಿ ಇಂದಿನ ಪಯಣ. ಗಮ್ಯಸ್ಥಾನವು ೧೩,೮೦೦ ಅಡಿಗಳೆತ್ತರದ ನಾಬಿದಾಂಗ್ ಶಿಬಿರ. ನಿನ್ನೆ, ಹಿಮಾಲಯದ ಬಗೆಗೆ ಓದಿದ್ದ ವಿಚಾರಗಳ ಹಿನ್ನೆಲೆಯಲ್ಲಿ ಇಂದು ಈ ಪರ್ವತಗಳನ್ನು ನೋಡುವಾಗ ಹೊಸದೇನನ್ನೋ ಕಂಡ ಭಾವನ. ಅಲ್ಲಿ ಹರಿಯುತ್ತಿದ್ದ ಕಾಳೀಗಂಗಾ ಯಾವುದೊ ಪೂರ್ವೇತಿಹಾಸದ ಸಂಗತಿಯನ್ನು ಹೇಳುತ್ತಿರುವಂತೆ, ಅದನ್ನು ಕೇಳುವ ಕಾತರ. ದಿವಾನ್‌ಸಿಂಗ್‌ನ ಪುರಾಣ ಕಥೆಗಳಲ್ಲಿಯೂ ಸ್ವಾರಸ್ಯ. ಮನಸ್ಸು ಬುದ್ಧಿಗಳೆರಡೂ ಜಾಗರೂಕವಾಗಿದ್ದವು.

ಮೇಲಕ್ಕೇರಿದಂತೆ ಕಲ್ಲು ಬಂಡೆಗಳು ಹೆಚ್ಚಾಗಿ ಹಸಿರು ಕಡಿಮೆಯಾಗಿತ್ತು. ಹುಲ್ಲು ಹೊದ್ದಿದ್ದ ಬೆಟ್ಟಗಳ ಬದಲಿಗೆ ನಿರ್ವಾಣ ನಿಂತ ಶಿಲಾಶೈಲಗಳು. ಇಲ್ಲಿಯೂ ಏನೋ ಒಂದು ಮೋಡಿ! ನಿಸರ್ಗದ ವಿಶಿಷ್ಟ ಕಲಾ ವಿಲಾಸ! ಎಂದಿನಂತೆ ಬಿಸಿಲಿರದ ಪದೇಪದೇ ಬೀಳುತೇಳುತ್ತಿದ್ದ ಮಂಜಿನ ತೆರೆ. ಮೋಡದ ವಾತಾವರಣ, ಹವೆಯಲ್ಲಿ ಚಳಿಯ ಅನುಭವ. ಇವತ್ತಿನ ಚಾಯ್ ಪಾನಿ ಆತಿಥ್ಯದಲ್ಲಿ ವಿಶೇಷ ಸಡಗರ. ನಡೆಯ ಬೇಕಿದ್ದುದು ಕೇವಲ ಹತ್ತು ಕಿ.ಮೀ.. ಆರಾಮದ ನಡಿಗೆಯೆಂಬ ಸಮಾಧಾನ. ಇಲ್ಲಿನ ಬೆಟ್ಟಗಳಲ್ಲಿ ನಡೆದಾಡುತ್ತಿದ್ದ ಕುರಿಗಳ ಕೂಗು, ಕುದುರೆಗಳ ಕತ್ತಿನಲ್ಲಿದ್ದ ಗಂಟೆಗಳ ಸದ್ದು ಮಾರ್ದನಿಗೊಂಡು ವಿಶೇಷ ನಾದತರಂಗಗಳು ಕೇಳುವವರನ್ನು ಹಾಡಲು ಪ್ರೇರೇಪಿಸಿದ್ದವು. ಹಾಡುವವರನ್ನು ಕುಣಿಸಿದ್ದವು. ಎರಡನೆಯ ಬಾರಿ ಚಾಯ್ ಪಾನಿಗ ನಿಂತಾಗ ಭೋಟಿಯಾ ಹುಡುಗರೆಲ್ಲರೂ ಸೇರಿ ಹಿಮ್ಮೇಳ ಒದಗಿಸಲು ಭವಾನಿಸಿಂಗ್, ಮತ್ತೊಂದಿಬ್ಬರು ಕುಣಿಯಲು ಮೊದಲಿಟ್ಟರು. ಜಾನಪದವೊ, ಹಳ್ಳಿ ಕುಣಿತವೊ-ಅವರ ಮನದಲ್ಲಿದ್ದ ಆನಂದ ಲಯಬದ್ಧವಾಗಿ ತನ್ನದೇ ಭಂಗಿಯಲ್ಲಿ ಹೊರಹೊಮ್ಮಿತ್ತು. ಮಾನವನ ಸಹಜನರ್ತನದ ನಮೂನೆಯದು. ಮುಗ್ಧಮನದ ನಲಿವಿನ ಲಾಸ್ಯವದು. ಕುಣಿತದ ಲಯಕ್ಕೆ ಮನಸೋತು ಮತ್ತೊಂದಾರು ಕಾಲುಗಳು,ನನ್ನದೂ, ಸೇರಿದಂತೆ ಕುಣಿಯಹತ್ತಿದವು. ತನು ಬಾಗಿ, ಬಳುಕಿ, ಒಂದನ್ನೊಂದು ಸುತ್ತ ಹತ್ತಿದವು. ತೀವ್ರಗತಿಯಲ್ಲಿ ಹಾಡು ಸಾಗಿದಂತೆ ಸುತ್ತಲಿದ್ದವರೆಲ್ಲಾ ಕೈ ಚಪ್ಪಾಳೆಯಿಕ್ಕುತ್ತಾ ಹುರಿದುಂಬಿಸಿದರು. ಹತ್ತು ನಿಮಿಷದ 'ಚಾಯ್ ಪಾನಿ' ಅರ್ಧಗಂಟೆಯ 'ನಾಚ್-ಗಾನಾ' ಗೆ ತಿರುಗಿತ್ತು. ಮರೆಯಲಾಗದ ಅನುಭವ.

೧೩,೮೦೦ ಅಡಿಗಳೆತ್ತರದ ನಾಬಿದಾಂಗ್ ಶಿಬಿರಕ್ಕೆ ನಮ್ಮನ್ನು ತುಂತುರು ಮಳೆ ಸ್ವಾಗತಿಸಿತು. ಎರಡು ಅರ್ಧಗೋಳದ ಟೆಂಟ ,ಗಳು ಮತ್ತು ಅಡಿಗೆಮನೆ-ಕಂ-ಕಟ್ಟಿಗೆಮನೆಯಾಗಿದ್ದ ಇಟ್ಟಿಗೆಯ ಕಿರುಕೋಣೆಯೊಂದಿತ್ತು. ಊಟದ ಮೇಜು ಅಂಗಳದಲ್ಲಿ, ತುಂತುರು ಮಳೆಯಡಿಯಲ್ಲೇ! ಭೋಟಿಯಾ ಜನರಲ್ಲಿ ಕೆಲವರು ಕುದುರೆಗಳ ಮೈದಾನದ ಗುಡಾರದಲ್ಲಿ ಒಲೆ ಹತ್ತಿಸಿದರ ಉಳಿದವರು ನಮ್ಮ ಶಿಬಿರದೆದುರಿನ ದಿನ್ನೆಯ ಮೇಲೆ, ಕಲ್ಲು ಚಪ್ಪಡಿಯ ಹಾಸಿನ ಮೇಲಿದ್ದ ಹಾಯಿಬಂಡೆಯ ಆಸರೆಯಲ್ಲಿ ಊಟದ ತಯಾರಿ ನಡೆಸಿದರು. ಹಾಡು ಕುಣಿತಗಳಲ್ಲಿ ಬೆರೆತವರ ಊಟದಲ್ಲೂ ಬೆರೆವ ಮನವಾಗಿ



'ದಾರ್ಚೆನ್' ಕೋಟೆ ಬಾಗಿಲಿನಾಚೆಗೆ ಮಾಂಧಾತ ಶಿಖರಗಳು



ನೆರಲಂಗ್ ಗೊಂಪಾದ ಚಿತ್ರಿಯಲ್ಲಿ



ನಾಬಿದಾಂಗ್‌ನ ಶುಷ್ಕತೆ



ತೊರೆಯ ದಾರಿಯನ್ನು ದಾಟಿ


ಹೆಜ್ಜೆ ನಮಸ್ಕಾರದ ಪ್ರದಕ್ಷಿಣೆ ಮಾಡುತ್ತಿರುವ ಯಾತ್ರಿ


"ಯಾಕ್" ಮಹಾರಾಯರುಗಳು


ಕಲ್ಲಿನಲ್ಲಿ ನೆಲೆನಿಂತ "ಓಂ ಪದ್ಮೇ ಹುಂ" ಮಂತ್ರ


ಜೋಕಾಂಗ್ ದೇವಾಲಯದ ಅಂಗಳದಲ್ಲಿ

ನಾವು ಮೂವರು ಮಹಿಳೆಯರು ಓಂ ನಮಃ ಶಿವಾಯ ಎಂದು ಕೈಮುಗಿದು ಕಲ್ಲು ಚಪ್ಪಡಿಯಲ್ಲಿ ಕುಳಿತೆವು-ಬಲವಂತಪ ಅತಿಥಿಗಳಾಗಿ. ಗಂಡಸರು ಅಡಿಗೆ ಮಾಡಿ ಊಟ ಕಾಣಿಸುವವರು-ಬಲು ಖುಷಿಯಲ್ಲಿದ್ದರು. ಭೊಟಿಯಾ ಪೂರಿ ಗೆ ಕನ್ನಡಿಗರ ಹುಣಸೆ ಗೊಜ್ಜು! ಎತ್ತಣಿಂದೆತ್ತ ಸಂಬಂಧ ಬೆಸೆದನೋ ಮಲ್ಲೇಶ! ಇಂದಿನ ಊಟಕ್ಕೆ ಮಾಧುರ್ಯ ಹೃದಯದಿಂದ ಬಂದುದು. ರಸನದಿಂದಲ್ಲ. ಮಾತು ಊಟ ಒಟ್ಟೊಟ್ಟಿಗೆ.

ತವಾಘಾಟ್‌ನಲ್ಲಿಯೇ ತೋರಿಸಿದ ಗುರುತಿನ ಚೀಟಿಯ ಮೇರೆಗೆ ಪ್ರತಿದಿನವೂ ಒಬ್ಬೊಬ್ಬ ಸಹಾಯಕನಿಗೂ ನಿಗದಿಯಾದಂತೆ ಕೊಡುತ್ತಿದ್ದ ಗೋಧಿ ಹಿಟ್ಟು, ಎಣ್ಣೆ, ಬೇಕಾದ ಇತರ ಪದಾರ್ಥವನ್ನು ಇವರೇ ಹೊಂದಿಸಿಕೊಳ್ಳಬೇಕಾಗಿತ್ತು. ಉರವಲು ಕೂಡ ಇವರದೇ. ಮೇಲು ಮೇಲಕ್ಕೇರಿದಂತೆ ಪ್ರತಿಯೊಂದು ವಸ್ತುವೂ ದುಬಾರಿಯಾಗುವುದರಿಂದ ಈ ವ್ಯವಸ್ಥೆ. ಆದಷ್ಟು ಕಡಿಮೆ ಖರ್ಚಿನಲ್ಲಿ ಒಂಭತ್ತು ದಿನದ ಹೊಟ್ಟೆ ಪಾಡು ಕಳೆದರೆ ಹಣ ಕೈಗೂಡೀತು. ಇಂದರಿಂದಾಗಿ ನಮ್ಮೊಡನಿದ್ದ ಭೋಟಿಯಾಗಳಿಗೆ ಬೇಳೆ ತರಕಾರಿಯಿಲ್ಲದ ಊಟ. ಗುರುತಿನ ಚೀಟಿಯೇನಾದರೂ ಕಳೆದು ಹೋದರೆ ಆ ವ್ಯಕ್ತಿಯೇ ಅಳಿಸಿ ಹೋದಂತೆ! ಬೇಸಗೆಯ ಮೂರು ತಿಂಗಳು ಕಷ್ಟಪಟ್ಟರೆ ನಂತರ ಬರುವ ದಶಹರಾ ಉತ್ಸವದಲ್ಲಿ ಕೈಬಿಚ್ಚಿ ಮನೆಯವರೊಂದಿಗೆ ಸಡಗರದ ಹಬ್ಬವಾಚರಿಸುವರು. ಏನಾದರೂ ಹಣ ಮಿಕ್ಕರೆ ದೀಪಾವಳಿಯಲ್ಲೊಂದಿಷ್ಟು ಸಂಭ್ರಮ. ಆಮೇಲೆ ಚಳಿ-ಹಿಮಗಾಲ ಮುಗಿವವರೆಗೆ ಅನಿವಾರ್ಯವಾಗಿ ಕೈ ಬಾಯಿ ಕಟ್ಟುವರು.

ಶತಮಾನಗಳವರೆಗೆ ನಡೆದು ಬಂದಿದ್ದ ವ್ಯವಸ್ಥೆ ಹೊರಗಿನವರ ದೆಸೆಯಿಂದ ಅಸ್ತವ್ಯಸ್ತವಾದರೆ, ಕಷ್ಟವನ್ನು ಅನುಭವಿಸುವವರು ಸ್ಥಳೀಕರೇ ಹೊರತು ದೂರದ ರಾಜಧಾನಿಯಲ್ಲಿ ಕುಳಿತು ನಿರ್ಣಯ ತೆಗೆದುಕೊಳ್ಳುವವರಲ್ಲ. ಉತ್ತರ ಪ್ರದೇಶದ ಭೋಟಿಯಾ, ಮಧ್ಯಪ್ರದೇಶ, ಆಂಧ್ರಪ್ರದೇಶದ ಗಿರಿಜನರು, ನರ್ಮದಾ ದಂಡೆಯ ಹಳ್ಳಿಗರು, ಅಭಯಾರಣ್ಯದಲ್ಲಿನ ವನ ಜನರು-ಇವರ ಬಾಳು ಮೂರಾಬಟ್ಟೆಯಾಗುವುದಷ್ಟೆ. ನಗರವಾಸಿಗಳ ಬಾಳು ಹಸನಾಗುತ್ತಲೇ ಇದೆ. ಭೋಟಿಯಾಗಳ ಈ ಬಗೆಯ ಒತ್ತಡದ ಬದುಕಿಗೆ ಹಾಡು ಕುಣಿತಗಳೇ ಹೊರಗಂಡಿ. ನಕ್ಕು ನಡೆವುದೊಂದೆ ದಾರಿ. ನಮ್ಮದೇನಿದೆಯೆಂದು ಕೇಳುತ್ತೀರಿ? ಕೈಲಾಸನಾಥನಲ್ಲಿ ನಮ್ಮ ಪರವಾಗಿ ಎಲ್ಲವೂ ಮುಂಚಿನಂತಾಗಲೆಂದು ಕೇಳಿಕೊಳ್ಳಿ. ಅಷ್ಟೆ ಸಾಕು ನಮಗೆ ನಿರ್ವಾಸಿತರಾದ ಟಿಬೆಟೀಯರಂತೆಯೇ ಇವರದೂ ಮೊದಲಿನಂತಹ ಬಾಳಿಗೆ ತಹತಹಿಸುವ ಪರಿಸ್ಥಿತಿ.

ಮಧ್ಯಾಹ್ನ ಎರಡು ಗಂಟೆ ಹೊತ್ತಿಗೆ ತುಂತುರು ಮಳೆ ನಿಂತು ಬಿಸಿಲು ಮೂಡಿತು. ಓಂ ಪರ್ವತಕ್ಕೆ ಮುಖಮಾಡಿ ಶಿಬಿರದ ದಿನ್ನೆಯ ಮೇಲೆ ಆರಾಮ ಮಾಡಿದ್ದೆವು. ನೆನಪಿನ ಸುರುಳಿ ಬಿಚ್ಚಿ ಕೊಂಡು ಹಿಂದಿನ ಎಂಟು-ಒಂಭತ್ತು ದಿನಗಳಲ್ಲಿ ಕಂಡ ಹಿಮಾಲಯದ ರೂಪರೇಷೆಗಳ ಸಮೀಕ್ಷೆ ನಡೆಸಿದ್ದೆವು. ಹಲ್ದ್ವಾನಿಯಿಂದ ಆರಂಭವಾದ ಹಿಮಾಲಯ ದರ್ಶನ ಓಂಪರ್ವತದೆದುರಿನಲ್ಲಿ ಓಂ ದರ್ಶನಕ್ಕೆ ಬಂದು ನಿಂತಿತ್ತು.

ನಾವು ದಕ್ಷಿಣದಿಂದ ಪೂರ್ವೋತ್ತರಕ್ಕೆ ಏರಿ ಬಂದಂತೆ ಹವಾಮಾನದ ಎಲ್ಲ ವಲಯಗಳ ನಮೂನೆಯನ್ನೂ ಹಾದು ಬಂದಿದ್ದೆವು. ಮೊದಲಿಗೆ ಉಷ್ಣವಲಯದ ದಟ್ಟ ಕಾಡಿನ ತೆರಾಯಿ

ಪ್ರಾಂತ. ವನ್ಯ ಮೃಗಗಳಿಂದ, ವಿವಿಧ ಪಕ್ಷಿ-ಕೀಟಗಳಿಂದ ತುಂಬಿದ ಪ್ರಾಂತ. ಆನಂತರ ಏರಿದಂತೆ ಬೆಟ್ಟ ಕಣಿವೆಗಳ ಸಮಶೀತೋಷ್ಣವಲಯದ ಮಧ್ಯ ಹಿಮಾಲಯ ಪ್ರಾಂತ. ಇದು ಎಲ್ಲ ತರಹದ ಮರ ಗಿಡಗಳೇ ಅಲ್ಲದೆ ಎಲ್ಲ ರೀತಿಯ ವ್ಯವಸಾಯ ಸಾಧ್ಯವಿರುವ ಫಲವತ್ತಾದ ಪ್ರಾಂತ. ಇಲ್ಲಿಯೇ ಹೆಚ್ಚಿನ ಜನ ವಸತಿಯಿದ್ದಿತು. ಸಿಗುವ ಎಲ್ಲ ಸಮತಿಟ್ಟಿನ ಮೈದಾನವೂ ಬೇಸಾಯಕ್ಕೇ ಮೀಸಲು. ಇದು ಸಾಲದೆಂದು ಬೆಟ್ಟವನ್ನೇ ಜಗಲಿಗಳನ್ನಾಗಿ ಮಾಡಿ ಅಲ್ಲಿ ಸಿಗುವ ಗಜದಗಲ ಜಾಗದಲ್ಲೂ ಬೆಳೆಸಿದ್ದ ಪೈರು ನಿಂತಿತ್ತು. ಇಲ್ಲೆಲ್ಲಾ ಆಧುನಿಕ ಬೇಸಾಯದ ಸಲಕರಣೆಗಳ, ಟ್ರ್ಯಾಕ್ಟರ್‌ನ ಉಪಯೋಗವಿಲ್ಲ. ಕೆಲವೆಡೆ ನೇಗಿಲ ಬಳಕೆಯೂ ಕೂಡ ಸಾಧ್ಯವಿಲ್ಲದೆ ಕೈ ಗುದ್ದಲಿಯ ಬೇಸಾಯ. ಇನ್ನೂ ಮೇಲೆ ಹೋದಂತೆ ಶೀತವಲಯದ ಹುಲ್ಲುಗಾವಲಿನ ಪ್ರಾಂತ. ಮೊದಲಿನ ಹೆಮ್ಮರಗಳು ಕಾಣೆಯಾಗಿ ಪರ್ವತೀಯ ಹೂಗಿಡಗಳು, ವಿವಿಧ ಜಾತಿಯ ಹುಲ್ಲು ಮೈದಾನದ ತುಂಬೆಲ್ಲಾ ಹರಡಿತ್ತು. ಚಿಕ್ಕ ಚಿಕ್ಕ ಹೂಗಳು ಹಸಿರನ್ನೂ ಮುಚ್ಚಿ ಬಿಡುವಂತೆ ಹೂಹೊಳೆಯಾಗಿ ಎಲ್ಲೆಲ್ಲೂ-ಕಾಲಾಪಾನಿವರೆಗೂ ಹರಡಿತ್ತು. ಮೇಲೇರಿ ಬಂದಂತೆ ನಾಬಿಡಾಂಗ್ ಕಡೆಗೆ ಹಸಿರು ಹುಲ್ಲು ಕೆಲವೆಡೆ ಮಾತ್ರ. ಜರುಗುವ ಮಣ್ಣಿನ ಇಳಿಜಾರಿನಲ್ಲಿ, ಹಿಮ ಪ್ರವಾಹದ ಆಚೆಯ ಕಲ್ಲು ಮಣ್ಣಿನ ರಾಶಿಗಳಲ್ಲಿ ಹಸಿರಿನ ತೇಪೆ. ಇನ್ನೂ ಮೇಲೇರಿದರೆ ಪಾಸ್‌ಗಳ ಮೇಲೆ ಅನವರತ ಹಿಮರಾಶಿ. ಕಡುಬೇಸಿಗೆಯಲ್ಲೂ ಕರಗದ ಹಿಮರಾಶಿ! ಹಕ್ಕಿ ಹಾರಿದಂತೆ ಸಮಶೀತೋಷ್ಣವಲಯದ ತೆರಾಯಿನಿಂದ ದಕ್ಷಿಣವಲಯದಂತಹ ಅನವರತ ಹಿಮದ ಪಾಸ್‌ಗಳವರೆಗೆ ಕೇವಲ ೨೦೦ ಕಿ.ಮೀ. ಅಷ್ಟೆ. ಹಿಮಾಲಯದೊಡಲಲ್ಲಿ ಸಮಗ್ರ ಜಗತ್ತಿನ ಎಲ್ಲ ವಲಯದ ತುಣುಕುಗಳೂ ಅಡಕವಾಗಿದ್ದು ಈ ಮಾರ್ಗವಾಗಿ ಒಂದಲ್ಲ ನೂರು ಬಾರಿ ಬಂದರೂ ನವನವೀನತೆ ಕಾಣುವುದು ಖಚಿತ.

ಮಧ್ಯಾಹ್ನ ಎರಡು ಗಂಟೆಯಿಂದಲೂ ॐ ದರ್ಶನಕ್ಕಾಗಿ ಕಾದೆವು. ಮಳೆ ನಿಂತು ಬಿಸಿಲು ಬಂದಿತಾದರೂ ಎದುರಿನ ಓಂಪರ್ವತದ ಮೇಲಿನ ಮಂಜಿನ ತೆರೆ ಅರ್ಧಮೇಲೇರಿ ತಿರು ತರುಗಿ ಕೆಳಗಿಳಿಯುತ್ತಿತ್ತು. ॐ ಅಕ್ಷರದ ದರ್ಶನವೇ ಆಗಲೊಲ್ಲದು. ಆರು ಗಂಟೆಯವರೆಗೆ ಭಜನೆ ಕೀರ್ತನೆಗಳು ನಡೆದು ಭಕ್ತಜನರು ಸುಸ್ತಾದರೂ ಮಂಜುನಾಥನ ಕೃಪೆಯಾಗಲೇ ಇಲ್ಲ. ಮಂಜಿನ ತೆರೆ ಪೂರಾ ಮೇಲೇಳಲೇ ಇಲ್ಲ, ಆದರೆ ಈ ಕಾಯುವಿಕೆಯಲ್ಲೇ ಒಂದು ರೀತಿಯ ಸುಖ ಶಾಂತಿ ಲಭಿಸಿತ್ತು. ಮರಳುವಾಗ ॐ ದರ್ಶನವಾದೀತೆಂಬ ವಿಶ್ವಾಸ- ಮುಂದಿನ ಜನ್ಮದಲ್ಲಾದರೂ ಸುಖ ಕಾಣುತ್ತೇವೆನ್ನುವಂತೆ ಆಶಾವಾದಿಗಳು ನಾವು ಭಾರತೀಯರು. ಆರುವರೆಗೆಲ್ಲಾ ಮತ್ತೆ ಶುರುವಾದ ತುಂತುರು . ಈ ಪ್ರದೇಶವೇ ಹೀಗೆ. ಏಳಕ್ಕೇ ರಾತ್ರಿಯೂಟ ಮುಗಿಸಿ ಕೋಣೆ ಸೇರಿದೆವು. ಬೆಳಗ್ಗೆ ಮೂರುವರೆಗೆ ತಯಾರಾಗಿ ಲಿಪುಲೇಖ್‌ಗೆ ಹೊರಡಬೇಕಿದ್ದುದರಿಂದ ಬೇಗನೇ ಮಲಗಿದೆವು. ಶಾಲಾ ಪ್ರವಾಸ ಹೊರಡುವ ಹಿಂದಿನ ರಾತ್ರಿಯ ತವಕದ ನಿದ್ರೆಯಂತೆ ಇಂದು ರಾತ್ರೆಯೆಲ್ಲಾ ಅರ್ಧ ಎಚ್ಚರದ ನಿದ್ರೆಯೇ ನಮಗೆ ಲಭ್ಯವಾದದ್ದು.

ಇಂದಿನ ಚಾರಣ-ಸೀಮೋಲ್ಲಂಘನದ ಚಾರಣ. ಇಂದು ಭಾರತದ ಗಡಿ ದಾಟುವವರಿದ್ದೆವು. ಚೀನೀ ಸರಕಾರದ ಅನಪೇಕ್ಷಿತ ಅತಿಥಿಗಳಾಗಿ ಟಿಬೆಟ್ಟಿಗೆ ಕಾಲಿಡುವವರಿದ್ದೆವು. ೧೬೭೮೦ ಅಡಿಗಳೆತ್ತರಕ್ಕೆ ಏರಿ, ದೈಹಿಕ ಶಕ್ತಿಯ ಎಲ್ಲೆ ನಿರ್ಮಿಸುವವರಿದ್ದೆವು. ಈ ಎತ್ತರದಲ್ಲಿನ ಅತಿ ಶೀತಹವೆಗೆ ಮೈಯೊಡ್ಡಿ ನಮ್ಮ ಸಹನೆ, ಧಾರಣ ಶಕ್ತಿಯ ಗಡಿ ಗುರುತಿಸುವವರಿದ್ದೆವು. ಏನೋ ವಿಶ್ವಾಸ, ಏನೋ ಹುಮ್ಮಸ್ಸು:

ರಾತ್ರಿಯಿಡೀ ಜಿನುಗುತ್ತಿದ್ದ ತುಂತರು ಮಳೆ, ಕವಿದಿದ್ದ ದಟ್ಟ ಮಂಜು. ಮೊದಲ ಝಾವಕ್ಕೇ ಎದ್ದು, ಮುಖ ಮಾರ್ಜನದ ಅನಿಷ್ಟ ಅನಿವಾರ್ಯ ಕಾರ್ಯಕ್ಕಾಗಿ ರಾತ್ರಿಯೆಲ್ಲಾ ಹೊದ್ದಿದ್ದ ಕಂಬಳಿಯೊಳಗೇ ಇಟ್ಟು ಬೆಚ್ಚಗಾಗಿಸಿದ್ದ ನೀರಿನ ಬಾಟಲಿ ಮತ್ತು ಬ್ರಷ್ ಹಿಡಿದು ಟೆಂಟಿನ ಹೊರಗೆ ತಲ ಹಾಕಿದರೆ ಮತ್ತೊಂದು ತೂಕಡಿಸುತ್ತಿದ್ದ ತಲೆ ಬಲು ಸನಿಹದಲ್ಲೇ! ಹೊರೆ ಹೊರುವ ಕುದುರೆಯೊಂದು ಟೆಂಟಿಗೆ ತಾಗಿಕೊಂಡಂತೆ ನಿಂತೇ ನಿದ್ರಿಸುತ್ತಿತ್ತು, ಬಿಸಿಯುಸಿರ ಹೊಗೆ ಕಾರುತ್ತ. ಮಳೆಯಲ್ಲಿ ನೆನೆದರೂ ಚಳಿಗಾಳಿಯಿಂದ ರಕ್ಷಣೆ ಪಡೆದಿತ್ತು ಮೂಕ ಪ್ರಾಣಿ.

ಬೆಚ್ಚಗಿನ ಕುದುರೆಯೇರಿ ಸಾಗುವೆನೆಂದು ಕನಸು ಕಾಣುತ್ತ ಚಳಿಗೆ ಸಟೆದಿದ್ದ ಕೈಗಳಿಂದಲೇ ಸೆಡೆತು ಹೋಗಿದ್ದ ಬೂಟುಗಳನ್ನು ಕಷ್ಟಪಟ್ಟು ಕಾಲಿಗೆ ತೂರಿಸಿ ದಪ್ಪ ಉಣ್ಣೆ ಬಟ್ಟೆ ಧರಿಸಿ ತಯಾರಾಗಿ ನಿಂತಿದ್ದೆ ಮುಂಜಾವಿನ ಮೂರುವರೆಗೇ! ಭವಾನಿಸಿಂಗ್ ಅವಸರದಲ್ಲಿ ಬಂದು ಪಿಸುದನಿಯಲ್ಲಿ ನೀಡಿದ ಆದೇಶ- "ಬೆಹೆನ್‌ಜೀ, ನಿನ್ನ ಕುದುರೆ ಕಾಣೆಯಾಗಿದೆ. ದಿವಾನಸಿಂಗ್ ಹುಡುಕಿ ತರಲು ಹೋಗಿದ್ದಾನೆ. ನೀನು ನನ್ನ ಜೊತೆ ಹೆಜ್ಜೆ ಹಾಕುತ್ತಿರು. ೧೦-೨೦ ನಿಮಿಷದಲ್ಲೇ ನಿನ್ನ ಕುದುರೆ ಬರುತ್ತದೆ ಯೋಚಿಸಬೇಡ. ದಯಪಿಟ್ಟು ಐ.ಟಿ.ಬಿ.ಪಿ.ಯವರಲ್ಲಿ ದೂರಬೇಡ. ನಮ್ಮನ್ನು ಓಡಿಸಿ ಬಿಟ್ಟಾರು! ನಡಿ ಮತ್ತೆ. ಇಕೋ, ನಿನ್ನ ಕೋಲು!" ವಿಧೇಯಳಾಗಿ ತಲೆತಗ್ಗಿಸಿ(ತುಂತುರು ಹನಿ ಮುಖಕ್ಕೆ ರಾಚುತ್ತಿದ್ದುದೂ ಒಂದು ಕಾರಣ) ನಡೆದ, ಬಂದ ನಗುವನ್ನು ತಡೆದು. ಮನುಜರಂತೆಯೇ ಅಶ್ವಜಾತಿಯಲ್ಲೂ ಅನುಭವಿ, ಅನನುಭವಿಗಳಿರುತ್ತಾರೆಂದಾಯಿತು.

ಮುಂಜಾನ ಮುಖದರ್ಶನವಿತ್ತ ಅಶ್ವರಾಯರು ಹಿರಿಯರು, ಅನುಭವಸ್ಥರು. ದಿನದ ಚಾಕರಿಗೆ ಬೆನ್ನು ಕೊಟ್ಟೇ ತೀರಬೇಕೆಂಬ, ಕರ್ಮ ಮಾಡದೇ ಗತ್ಯಂತರವಿಲ್ಲೆಂಬ ನಿರ್ಧಾರಕ್ಕೆ ಬಂದವರು. ಅದಕ್ಕಾಗಿ ರಾತ್ರಿಯಿಡೀ ನಿರಾತಂಕದ ನಿದ್ರೆ ತೆಗೆದು ತ್ರಾಣ ಸಂಚಯ ಮಾಡಿದ್ದರು. ನನ್ನ ಸವಾರಿಯಾದರೋ ಮನೆಯ ಬೆಚ್ಚಗಿನ ಹುಲ್ಲು ಹಾಸಿಗೆ ನೆನೆದು, ಲಿಪುಲೇಖ್‌ಗೆ ಬೆನ್ನು ಮಾಡಿ ಚಳಿಮಳೆಯಲ್ಲಿ ನೆನೆಯುತ್ತಾ ಊರಕಡೆಗೆ ಧಾವಿಸಿ ನಿತ್ರಾಣಗೊಂಡಿದ್ದ ಹರೆಯದ ಕನಸುಗಾರ. 'ಅಯ್ಯೋ ಪೆದ್ದೇ' ಎಂದುಕೊಂಡೇ ಅದನ್ನೇರಿದ್ದೆ. ಏರಿದ ಹತ್ತೇ ನಿಮಿಷದಲ್ಲಿ ಕೆಳಗಿಳಿದೂ ಆಗಿತ್ತು. ಒದ್ದೆ ಕುದುರೆಯನ್ನೇರಿದ ಪೆದ್ದಿಯಾಗಿದ್ದೆ! ಅದರ ಬೆನ್ನಿನ ಒದ್ದೆ ನನ್ನ ಒಳಅಂಗಿಯನ್ನೂ ನೆನಸಿ ಮಂಡಿಯವರೆಗೆ ಜೋಮು ಹಿಡಿದು ಬೆರಳುಗಳು ಹೆಪ್ಪುಗಟ್ಟಿದ ಅನುಭವ. ಇದ್ದುದೊಂದೇ ಉಪಾಯ. ಬಿರಬಿರನೆ ನಡೆದು ಕಾಲುಗಳಿಗೆ ರಕ್ತ ಸಂಚಾರ ತರುವುದು. ಯಾವ ಭೂತ ಹೊಕ್ಕಿತ್ತೋ ಈ ಪ್ರವಾಸ ಕೈಗೊಂಡ ಮುಠ್ಠಾಳ ನಾನಾದೆ ಎಂದು ಕೊಂಡೇ ಓಡೋಡುತ್ತಾ ಏರಿ ಏರಿದ್ದೆ. ಈ ಮುಠ್ಠಾಳ ಮನಸ್ಸು ಕೊಟ್ಟ ಭೂತನಾಥನನ್ನು ಬೈಯುತ್ತಾ ಓಡಿದೆ. ನನ್ನ ಪುಣ್ಯವಿಶೇಷದಿಂದ ಎಡಬದಿಯಲ್ಲಿ ಇಳಿದು ಹೋಗಿದ್ದ ಇಳಿಜಾರು ಕಾಣದಂತೆ ಮಂಜುಗತ್ತಲೆ ಕವಿದಿತ್ತು. ಕಂಡಿದ್ದರೆ ಶಿವನಿಗೆ ಮತ್ತಷ್ಟು ನಿಂದಾಸ್ತುತಿ! ನನ್ನ ಹಿಂದೆಯೇ ನಡೆದು ಬರುತ್ತಿದ್ದ ದೆಹಲಿಯ ಭರತ್ ಹಂಸರಾಜ್ ಶಾ ಅವರಿಗೆ ನನ್ನ ನಿಂದಾಸ್ತುತಿ ಕೇಳಿಸಿರಬೇಕು. "ನಾನು ಎರಡನೆಯ ಬಾರಿ ಈ ಮುಠ್ಠಾಳ ಕೆಲಸವನ್ನು ಮಾಡುತ್ತಿದ್ದೇನೆ. ಏಕೆ ಗೊತ್ತಾ? . . . . . ಈಗ ನಾನೇನೂ ಹೇಳುವುದು ಬೇಡ. ಹಿಂತಿರುಗಿ ಬರುವಾಗ ಇದಕ್ಕೆ ಉತ್ತರ ನೀನಾಗಿಯೇ ಬಂದು ಹೇಳುತ್ತೀಯೆ. ಕೈಲಾಸನಾಥನ ಮೋಡಿಯೇ ಅಂತಹುದು!" ಎಂದವರೇ ಬೆನ್ನು ತಟ್ಟಿ ಮುಂದೆ ಸಾಗಿದರು. ಎಲ್ಲಿಂದಲೋ

ಒಂದು ಕಂಬಳಿ ಹೊಂದಿಸಿಕೊಂಡು ಕುದುರೆಯ ಬೆನ್ನಿಗಿಟ್ಟು ನನ್ನನ್ನು ಕೂರಿಸಿದ ದಿವಾನ್‌ಸಿಂಗ್ ಆಗ ನನ್ನ ಪರಮಾಪ್ತ ಬಂಧುವಾಗಿದ್ದ.

ಸುಮಾರು ಎರಡುವರೆ ಗಂಟೆಯ ನಡಿಗೆಯಲ್ಲಿ ಆರು ಕಿ.ಮೀ. ದಾರಿ ಸವೆಸಿದ್ದೆವು. ಅರುಣೋದಯದ ಮುಂಬೆಳಗು ಸುತ್ತಲಿನ ಪ್ರಕೃತಿಯನ್ನು ಅನಾವರಣ ಮಾಡುತ್ತಿತ್ತು. ಹಿಮದ ಗಾಳಿ ಬೀಸಿ ಬೀಸಿ ಬೋಳಾಗಿ ನಿಂತ ಕಪ್ಪು ಹೆಬ್ಬಂಡೆಗಳ ಶಿಖರಗಳು ಸನಿಹದಲ್ಲೇ; ಕಾಲಡಿ ಕುಳಿ ಇದ್ದಲ್ಲಿ ಹೆಪ್ಪುಗಟ್ಟಿದ್ದ ಬಿಳಿ ಬರ್ಫದ ಹೊಂಡಗಳು; ಕೋಡಿ ಹರಿದ ನೀರೂ ಹೆಪ್ಪುಗಟ್ಟಿ, ವಿಭೂತಿ ಬಳಿದು ನಿಂತ ಭೂತಗಣಗಳಂತಹ ಬೆಟ್ಟಗಳು; ಕೆಳಗ, ಬಹುದೂರದಲ್ಲಿ ತೇಪೆ ಹಚ್ಚಿದಂತೆ ಹಸಿರು ಹುಲ್ಲಿನ ನೆಲ, ದೂರದ ಶಿಖರಗಳ ತುದಿಯಲ್ಲಿ ಬೆಂಕಿಯಿಟ್ಟಂತೆ ಬಾಲ ಸೂರ್ಯನ ಪ್ರಕಾಶ; ಒಂದು ಕ್ಷಣ ಎಲ್ಲವೂ ನಿಚ್ಚಳವಾಗಿ ತೋರಿದರೆ ಮರುಕ್ಷಣವೇ ಬೂದಿ ಎರಚಿದಂತೆ ಹರಡಿಕೊಳ್ಳುವ ಮಂಜು– ಇಂತಹ ಪ್ರಕೃತಿಯನ್ನು ತೋರುವ ಶಿವ ರುದ್ರನೇ ಸರಿ.

ಹದಿನೇಳುವರೆ ಸಾವಿರ ಅಡಿಗಳೆತ್ತರದ ವಿರಳ ಹವೆಯಿಂದಲೋ, ಕರಳು ಬಾಯಿಗೇ ಬಂದಂತೆ ಹೊಟ್ಟೆಯೊಳಗೆ ನಡುಕ ತರುವ ಚಳಿಯಿಂದಲೋ, ಅಥವಾ ಕಾಲಡಿಯಿಂದಲೇ ಪಾತಾಳಕ್ಕಿಳಿದು ಹೋಗಿದ್ದ ಪ್ರಪಾತದ ಭಯದಿಂದಲೋ– ಒಟ್ಟಿನಲ್ಲಿ ಎಲ್ಲವನ್ನೂ ಕಾರಿಕೊಳ್ಳುವಂತಹ ಅನಿಸಿಕೆ. ಮೇಲೆರುತ್ತ ಹೋದಂತೆ ಏನನ್ನೋ ಕಳೆದು ಕೊಂಡಂತಹ ಭಾವನೆ. ನಾನೇ ಕಳೆದು ಹೋದಂತೆ! ಎತ್ತೆತ್ತ ತಿರುಗಿದರತ್ತ ಒಂದೇ ಭಾವನೆ - ಶೂನ್ಯತೆ. ಮನದಲ್ಲಿ ಒಂದು ಚಿತ್ರ ಮತ್ತೆ ಮತ್ತೆ ಮೂಡುತ್ತಿತ್ತು. ತನ್ನ ಸತಿಯ ಶವವನ್ನು ಹೆಗಲಲ್ಲಿ ಹೊತ್ತ ಶಿವ ದಿಕ್ಕೆಟ್ಟು ಅಲೆದಾಡುತ್ತಿರುವಂತೆ– ಎಂತಹ ಹೃದಯಸ್ಪರ್ಶಿ ರಮ್ಯ ಕಥೆ ಈ ಜಾಗಕ್ಕೆ ಹೊಂದಿಸಲು! ಶಿವನ ಅಲೆದಾಟದ ರಭಸಕ್ಕೆ ಸತಿಯ ದೇಹದಿಂದ ಹಾರಿ ಹೋದ ಹಸಿರುಡಿಗೆ ಬಹುದೂರದ ಬೆಟ್ಟದಲ್ಲಿ ಸಿಲುಕಿಕೊಂಡಂತೆ–

ನಸುಕಿನಲೆ ಮಲೆಯೇರಿ ನಿನ್ನೆಡೆಗೆ ಹೊರಟೇವೊ
ಕೈಲಾಸ ಸೇರ್ವಾಸೆ ಕಸುವೊ ಶಿವನೇ,
ಪಾವನಾ ಕೆರೆಯಾಗೆ ಮೀವಾಸೆ ಹೊತ್ತೇವೊ.
ಸತಿಹೋದ ಕ್ವಾಪಾದಿ ಕೆಂಪಾದ ನಿನಕಣ್ಣು
ಪರುವತದ ಹಸಿರೆಲ್ಲ ಸುಟ್ಟಾವೊ ಶಿವನೇ
ದುಕ್ಕಾದಿ ಮಲೆಯೇ ಬೋಳಾಗಿ ನಿಂತೈತೊ.
ಸತಿಗಾಗಿ ಕಣ್ಣೀರು ಉಕ್ಕುಕ್ಕಿ ಹರಿದಾವೊ
ಮಡುಗಟ್ಟಿ ಹೆಪ್ಪಾಗಿ ನಿಂತೈತೊ ಶಿವನೇ
ನಿಡುಸುಯ್ಯ ತಂಗಾಳಿ ಬಿರುನಡುಕ ತಂದ್ಯಾವೊ
ನಡುನಡುಗಿ ನಮಜೀವ ಮಂಜಿನಲೆ ಅಲೆದಾವೊ
ಮಂಜಾಗಿ ದುಗುಡ ಆವರಿಸ್ಯಾವೊ ಶಿವನೇ
ನಿನ್ನಳುವಿನಾಳವಾ ನಾವಿಂದು ಕಂಡೇವೊ
ಸತಿದೇಹ ಹೆಗಲಲ್ಲೆ ನೀ ಹೊತ್ತು ತಿರುಗೋದ,

ಅವಳನ್ನೆ ಕೂಗುತ್ತ ಸುತ್ತೋದ ಶಿವನೇ
ಮಲ್ಲೇಶ, ಅಲ್ಲೆಲ್ಲ ನಿನ್ನನೇ ಕಂಡೇವೊ!

ಕಡೆಯ ೫೦-೬೫ ಅಡಿಗಳನ್ನು ಕಾಲ್ನಡಿಗೆಯಲ್ಲಿ ಏರುವಾಗ, ಮತ್ತೊಮ್ಮೆ ಮಂಜಿನ ತೆರೆಯ ಬಿಳುಪಿನಲ್ಲಿ ಎಲ್ಲವೂ ಕರಗಿ ಹೋದವು. ಆ ಬಿಳಿಯ ಮುಸುಕಿನಲ್ಲಿಯೇ ಲಿಪುಲೇಖ್ ಪಾಸ್ ಏರಿ ನಿಂತೆವು. ಐ.ಟಿ.ಬಿ.ಪಿ. ವೈದ್ಯರ ಆಗ್ರಹದಂತೆ ಕೈ ಕಾಲುಗಳಲ್ಲಿ ರಕ್ತ ಚಲನೆ ಜಾರಿಯಿರಲೆಂದು ದೆವ್ವಕುಣಿತ ಕುಣಿಯುತ್ತಲೇ ಎಲ್ಲರೂ ಕುರಿಮಂದೆಯಂತೆ ಒತ್ತೊತ್ತಿಗೆ ಬಂದೆವು. ಎಲ್ಲರೂ ಮೂರನೇ ಯಾತ್ರಿತಂಡಕ್ಕಾಗಿ ಕಾಯುತ್ತಿದ್ದೆವು. ನಮ್ಮನ್ನು ಟಿಬೆಟೀಯರಿಗೆ ಒಪ್ಪಿಸಿ, ಬಂದ ಯಾತ್ರಿತಂಡವನ್ನು ಭಾರತಕ್ಕೆ ಕರೆದೊಯ್ಯಲು ಸಜ್ಜಾಗಿ ನಿಂತಿದ್ದರು ಐ.ಟಿ.ಬಿ.ಪಿ. ಸೋದರರು ಮತ್ತು ಭೋಟಿಯಾ ಬಂಧುಗಳು.

ಬೆನ್ನುಹುರಿಯು ಕಂಪಿಸುವಂತೆ ಬಲವಾಗಿ ಬೀಸಿ ಬಂದ ಚಳಿಗಾಳಿ ಹತ್ತೇ ನಿಮಿಷದಲ್ಲಿ ಅಲ್ಲಿ ಮುಸುಕಿದ್ದ ಮಂಜನ್ನು ಸರಿಸಿ ಪರಿಸರದ ಪರಿಚಯ ಮಾಡಿಸಿತು. ಸೂರ್ಯ ಭಗವಾನನ ದರ್ಶನ ಮಾಡಿಸಿತು. ನಮಗಾದ ಪೂಣ ದೇಶದ ಮೊದಲ ದರ್ಶನದಿಂದ ನಮ್ಮದು ಬಿಟ್ಟ ಬಾಯಿ ಬಿಟ್ಟ ಕಣ್ಣು, ಭೂತನರ್ತನದೊಂದಿಗೆ! 'ಹಿಮಾಲಯದೆತ್ತರ' ಎಂಬ ಉಕ್ತಿಯ ನೇರ ಅನುಭವವಾಯಿತಿಲ್ಲಿ. ಪುಸ್ತಕಗಳಲ್ಲಿ ಓದಿದ ಹೆಸರುಗಳು, 'ಸಮುದ್ರಮಟ್ಟಕ್ಕಿಂತ.. ಇಷ್ಟು ಅಡಿಗಳೆತ್ತರ' ಎಂಬ ಅಂಕಿ ಅಂಶಗಳ ಲೆಕ್ಕವಾಗಿರದೆ ಎದೆಯಲ್ಲಿ ಕಟ್ಟಿಹೋದ ಉಸಿರು; ತಲೆಯೊಳಗಿನ ಮಡಿತ; ಮೀನಖಂಡಗಳಲ್ಲಿನ ಬಿಗಿತ; ಹೊಟ್ಟೆಯೊಳಗಿನ ಕಸಿವಿಸಿ – ಇವೆಲ್ಲ ಹಿಮಾಲಯದೆತ್ತರವನ್ನು ಮನಗಾಣಿಸಿದ್ದವು. ದೇಹವು ಅದನ್ನು ಅನುಭವಿಸಿತ್ತು. ಬೇರೆಲ್ಲ ಪರ್ವತಗಳಿಂದ ಕೆಳಗಿಳಿದು ಕಣಿವೆಗೆ ಬರುತ್ತೇವೆ. ಆದರೆ ಹಿಮಾಲಯದ ಎತ್ತರದಿಂದ ಇಳಿದು ಹೋಗುವುದೆಲ್ಲಿಗೆ? ಜಗತ್ತಿನ ಛಾವಣಿಯೆನಿಸಿದ ಟಿಬೆಟ್ಟಿಗೆ! ಅಂದರೆ ಹಿಮಾಲಯದೆತ್ತರವೇನು? ನಮ್ಮೆದುರಿಗೆ ಕೆಳಗಿನ ಬಯಲಿನಂಚಿನಲ್ಲಿ ಟಿಬೆಟ್ಟಿನ ದಾರಿ ದಿಗಂತಕ್ಕೆ ಇಳಿದು ಹೋಗಿತ್ತು. ನಾವು ನಿಂತಿದ್ದ ಎತ್ತರ ಹಿಮಾಲಯದೆತ್ತರ ! ಲಿಪುಲೇಖ್ ಪಾಸ್–೪೦ ಅಡಿ ಉದ್ದದ, ಮೂರು ನಾಲ್ಕು ಅಡಿ ಅಗಲದ ಜಗಲಿಯ ಒಂದು ಓಣಿ. ಎರಡೂ ಕಡೆ ಗೋಡೆಯಂತೆ ಎದ್ದು ನಿಂತ ಹಿಮರಾಶಿ. ಹಿಂದೆ ಮುಂದೆ ಇಳಿದು ಹೋಗಿದ್ದ ಪರ್ವತದ ಎರಡೂ ಮಗ್ಗುಲಿನಲ್ಲಿ ಹೆಪ್ಪಾಗಿ ನಿಂತ ನೀರಿನ ಫಲಕಗಳು. ಆಕಾಶದಿಂದ ನೇತು ಬಿದ್ದಂತೆ. ಕಾಲೆತ್ತಿದರೆ ಆಕಾಶವನ್ನು ಮೆಟ್ಟಿದಂತಹ ಅನಿಸಿಕೆ. ಸುತ್ತಲೂ ಖಾಲಿತನ. ಈ ಹಿಂದೆ ಏರಿ ಇಳಿದಿದ್ದ ಥಾಣೇಧಾರ್, ಸೋಸಾ, ರುಂಗ್‌ಲಿಂಗ್, ಸಿರ್ಖಾ ಛಿಯಾಲೇಖ್ ಮೇಲ್ತುದಿಯಲ್ಲಿ ನಿಂತಾಗ ಸುತ್ತಲೂ ಹಸಿಹಸಿರು ವನರಾಜಿ; ನಿಂತ ಸಮತಟ್ಟಿನಲ್ಲಿ ಅರಳಿದ್ದ ಪುಷ್ಪ ತಿವಾಸಿ; ಬಿಟ್ಟು ಬಿಟ್ಟು ತಲೆಯನ್ನು ಸವರಿಹೋಗುತ್ತಿದ್ದ ಹಿಮದ ರಾಶಿ. ನಮ್ಮ ಧೃತಿಗೆಟ್ಟಿರಲಿಲ್ಲ. ಆದರೆ ಲಿಪುಲೇಖ್ ಪರಿಯೇ ಬೇರೆ. ಹಿಮದ ಕಣ್ಣುಮುಚ್ಚಾಲೆಯಲ್ಲಿ ಮೇಲಿನವರೆಗೆ ತಂದು, ಒಡನೆಯೇ ಕಣ್ಕಟ್ಟು ಬಿಚ್ಚಿ ಎಸೆದಂತಹ ಅನುಭವ. ಎಲ್ಲವೂ ತಲೆಕೆಳಗು, ಬಯಲು ಮಲೆಯನೇರಿ ಮುಗಿಲು ಮುಟ್ಟಿತ್ತು. ಮುಗಿಲು ಬೆಳಕಾಗಿ ಧರೆಗೆ ಇಳಿದಿತ್ತು. ಇವೆರಡೂ ಪಾಸುಗಳನ್ನು ಸೀಳಿ ನಿಲ್ಲುವ ಯಾವುದೇ ಮರವಾಗಲೀ ಗಿಡವಾಗಲೀ ಇಲ್ಲಿಲ್ಲ. ಬೆಟ್ಟಗಳಡಿಯ ಪಾತಾಳದಲ್ಲಿದ್ದ ಒಂದಂಗುಲದ ಹುಲ್ಲು ಗಗನಕ್ಕೇರಿದೆನೆಂದು ಕನಸು ಕಂಡಿತ್ತು.

ಬಿಸಿಲೇರಿದ್ದರೂ ಮರಗಟ್ಟಿಸುವ ಚಳಿ ಗಾಳಿ; ನೆತ್ತಿಯವರೆಗೆ ಹತ್ತಿಯಂತೆ ಮೋಡ ಕುಳಿತಿದ್ದರೂ ಕೆಳಗಿನದೆಲ್ಲವೂ ಸೂರ್ಯ ಪ್ರಕಾಶದಲ್ಲಿ ನಿಚ್ಚಳವಾಗಿ ಹೊಳೆವ ದೃಶ್ಯ, ನೀರಿನ ಒರತೆಯಿದ್ದೂ ಕಾಣವಾಗಿದ್ದ ಸಸ್ಯ – ಹಸಿರಿನ ಕೊರತೆಯ ನೋಟ, ಬೀಸುವ ಹವೆಯ ಬಟಾ ಬಯಲಿನಲ್ಲೂ ಉಸಿರುಕಟ್ಟಿಹೋದ ಅನುಭವ. ಅಲ್ಲಿಯ ನೈಜವೂ ನಾನೇ, ಇಲ್ಲಿಯ ಅನೈಜವೂ ನಾನೇ. ಇಂದಿನ ಅನಿತ್ಯವೂ ನಾನೇ, ಮುಂದಿನ ನಿತ್ಯವೂ ನಾನೇ. ಎಂದು ಯಾರೋ ಬೆನ್ನಟ್ಟಿ ಮುನ್ನೆಚ್ಚರಿಸಿದಂತೆ! ಏನೋ ಕಾತರ. ಹೆಸರಿಸಲಾಗದ ಭಯ. ಅದರೊಂದಿಗೇ ಏನೋ ಸಂಭ್ರಮ ಉತ್ಸಾಹ. ಬಂದುದನ್ನು ಎದುರಿಸುವೆವೆಂಬ ವಿಶ್ವಾಸ ಹೃದಯದಲ್ಲಿ ತೂಗಿತ್ತು.

ಮೊಟ್ಟೆಯೊಡೆದು ಹೊರಬಂದ ಮರಿಹಕ್ಕಿ ಪುನಃ ಮೊಟ್ಟೆಯೊಳಗೆ ಸೇರಲಾರದಂತೆ ಲಿಪುಲೇಖ್ ಹೊಸ್ತಿಲನ್ನು ದಾಟಲಿದ್ದ ನಾವೂ ದ್ವಿಜ ರಾಗುವವರಿದ್ದೆವು. ದೈಹಿಕ, ಮಾನಸಿಕ, ಬೌದ್ಧಿಕ, ಆಧ್ಯಾತ್ಮಿಕ ಪರಿಧಿಯನ್ನೊಡೆದು ಸ್ಥಿತ್ಯಂತರ ಹೊಂದುವವರಿದ್ದೆವು. ಟಿಬೆಟ್ಟಿಗೆ ಕೈಲಾಸ ಪರ್ವತಕ್ಕೆ ಹೋಗಲಿದ್ದೆವು.



**ಗೆಳತಿಯರೊಡನೆ**

# ಮಾನಸ ತಡಿಯಲ್ಲಿ

ಆತನನು ಕಂಡೊಡನೆ ಸಲೆ ನಡುಗಿ ಮೈ ಬೆವರಿದಂದು
ಹೆಜ್ಜೆಯಿಡಲೆಂದಸ್ತ್ರಿಮೊಂದಡಿಯನಂತೆತ್ತಿ ನಿಂದು
ದಾರಿಯೊಳಗರೆಬಂದೆಗುರೆನೊಂದ ತೊರೆಯಾದಳಲ್ಲ!
ಶೈಲಾಧಿರಾಜಸುತೆ ನಿಲಲಿಲ್ಲ ಅದ ನಡೆಯಲಿಲ್ಲ.

ಯಾರಿಗಾಗಿ ತಪಗೈದಳೋ ಅವರೇ ಬಂದು ಕೈಹಿಡಿದಾಗ ಶೈಲಜೆಗಾದ ಈ ಇಬ್ಬಗೆಯ ಮನಸ್ಥಿತಿ ನಮಗೂ ಆಗಿತ್ತು. ಕೈಲಾಸದೆಡೆಗೆ ಹೋಗಲೇಬೇಕೆಂದು ಹಠಹಿಡಿದು, ಆರಾಮವಿದ್ದ ಮನೆಯಿಂದ ಹೊರ ಹೊರಟು, ತನು ಮನ ಧನ ಮುಡುಪಿಟ್ಟು, ನೂರೆಂಟು ಪಾಡುಪಟ್ಟು ಲಿಪುಲೇಖ್‌ವರೆಗೆ ಬಂದುದಾಗಿತ್ತು. ಎದುರಿಗೆ ಕೈಲಾಸದ ದಾರಿ ಕೈ ಬೀಸಿ ಕರೆದಿತ್ತು. ಅದರತ್ತ ಇಳಿಯಲೊಂದು ಮನಸು ನಮ್ಮ ನೆಲವನ್ನು (ನನ್ನ ಇರವು) ಬಿಟ್ಟು ಇಳಿಯದೊಂದು ಮನಸು! ನಮ್ಮೊಡನೆ ಬಂದಿದ್ದ ಐ.ಟಿ.ಬಿ.ಪಿ ಸೋದರರು, ಭೋಟಿಯಾ ಬಂಧುಗಳು ಬೆನ್ನು ತಟ್ಟಿ ಕೈಕುಲುಕಿ ಕಳಿಸಿ ಕೊಟ್ಟರೂ ಹತ್ತಾರು ಸಲ ನಿಂತು ಹಿಂತಿರುಗಿ ನೋಡುತ್ತಾ ಅವರಿಗೆ ಕೈಬೀಸುತ್ತಾ ಕೆಳಗಿಳಿದೆವು.

ಇದುವರೆಗೆ ಹಲವಾರು ದೇಶಗಳ ಗಡಿಗಳನ್ನು ವಿಮಾನದಲ್ಲಿ ಹಾರುತ್ತ ದಾಟಿದ್ದವಳಿಗೆ ಇಂದಿನ ಅನುಭವ ತೀರ ಹೊಸದು. ಹಿಂದೆಂದೂ ಕಾಣದಿದ್ದ ಮುಖ, ಕೇಳದಿದ್ದ ಭಾಷೆ, ನೋಡದಿದ್ದ ವೇಷ, ತುಳಿಯದಿದ್ದ ದೇಶ-ಎಲ್ಲವನ್ನೂ ಒಟ್ಟಿಗೇ ಒಂದೇ ಗಳಿಗೆಯಲ್ಲಿ ಸ್ವೀಕರಿಸಿದ್ದೆವು. ಹೂಣದೇಶಕ್ಕೆ ಅಕ್ಷರಶಃ ಕಾಲಿಟ್ಟಿದ್ದೆವು. ಹೂಣರೊಡನಾಟದಲ್ಲಿ ಕೆಲದಿನಗಳನ್ನು ಕಳೆಯುವವರಿದ್ದೆವು. ನಮ್ಮನ್ನು ತಮ್ಮ ನಾಡೊಳಗೆ ಕರೆದೊಯ್ಯಲು ಬಂದವರು-ಚೀನೀ ಸರಕಾರದ ಪ್ರತಿನಿಧಿಯಾಗಿ ಅಶ್ವಾರೂಢನಾಗಿಯೇ ಮೇಲಿನವರೆಗೂ ಬಂದವನೊಬ್ಬ ಹಾಗೂ ಇಪ್ಪತ್ತು ಇಪ್ಪತ್ತೆರಡು ಮಂದಿ. ನಮ್ಮ ಹೊರೆ ಹೊತ್ತು ಕೆಳಗಿಳಿಯಲು ಹುಡುಗರು, ಮುದುಕರು, ಮಹಿಳೆಯರು, ಯುವಕರು. ಬಂದಿದ್ದವರೆಲ್ಲರೂ ಕುದುರೆಗಳನ್ನು ಬಾಡಿಗೆಗೆ ಓಡಿಸಿ ಹೊಟ್ಟೆ ಹೊರೆವವರು. ಅಲ್ಪ ತೃಪ್ತರು. ಹಾಡೊಂದನ್ನು ಗುನುಗುನಿಸುತ್ತ ಇಲ್ಲವೇ ಮುಕ್ತಕಂಠದಲ್ಲಿ ಹಾಡುತ್ತ ದಾರಿ ಸವೆಸುವವರು.

ಲಿಪುಲೇಖ್‌ವರೆಗೆ ನಮ್ಮೊಡನೆ ಬಂದಿದ್ದ ಪೋನಿವಾಲಾಗಳು ಕುದುರೆಯ ಜೀನನ್ನು ಹಿಡಿದು, ಅದರ ಸಂಗಡವೇ ನಡೆಯುತ್ತಿದ್ದರು. ಇಲ್ಲಾದರೋ, ಕುದುರೆಯ ಮೇಲೆ ಕುಳಿತು ನಮ್ಮ ಕೈಯಲ್ಲಿ ಜೀನು ಕೊಟ್ಟು ಕುದುರೆಯ ಹಿಂಭಾಗಕ್ಕೊಂದೇಟು ಕೊಟ್ಟು ಓಡಿಸಿ ತಾವು ಗುಂಪಾಗಿ ಹರಟುತ್ತಾ ಹಾಡುತ್ತಾ ನಡೆದು ಬಂದಿದ್ದರು. ಯಾವುದೇ ಪ್ರಾಣಿಯನ್ನು ಕಂಡರೂ ಪ್ರಾಣಭಯದಿಂದ ತತ್ತರಿಸುತ್ತಿದ್ದವಳಿಗೆ ಈ ಅನುಭವ ಎಂಟೆದೆ ಕೊಟ್ಟಿತ್ತು, ಕೈಕಾಲು ತಣ್ಣಗಾಗಿಸಿದ ಬಳಿಕ!

ಲಿಪುಲೇಖ್ ಪಾಸ್‌ನಿಂದ ಕೆಳಗಿಳಿದು ಬಂದಂತೆ ಚಳಿಯಿಂದ ತಣ್ಣಗಾಗಿದ್ದ ಮುಖಕ್ಕೆ ಬಿಸಿಲು ರಾಚಿ ಸುಡತೊಡಗಿತು. ಅರ್ಧ ಗಂಟೆಯಲ್ಲಿ ಗ್ಲೌಸು, ಕುಲಾವಿ, ಸ್ಕಾರ್ಫ್, ಜೆರ್ಸಿ-ಒಂದೊಂದಾಗಿ ಕಳಚಿದ್ದಾಯಿತು. ಎರಡೂ ಕಡೆಯ ಪರ್ವತಗಳಿಂದ ಸಣ್ಣ ಸಣ್ಣ ಝರಿಗಳಾಗಿ

ಹರಿದು ಬಂದ ನೀರು ಕಣಿವೆಯಲ್ಲಿ ದೊಡ್ಡ ಹೊಳೆಯಾಗಿ ಹರಿದಿತ್ತು. ಅಶ್ವಾರೋಹಿಗಳಾಗಿ ಈ ಹೊಳೆಯನ್ನು ದಾಟಿದ ಸಾಹಸಕ್ಕೆ ಸಿಕ್ಕ ಬಹುಮಾನವೆಂದರೆ ಮುಂದಿನ ಪ್ರಯಾಣವನ್ನು ಬಸ್ಸಿನಲ್ಲಿ ಕುಳಿತು ಮಾಡುವ ಆರಾಮ. ನಿರ್ಭಯವಾಗಿ ನಿರಾತಂಕವಾಗಿ ಕುಳಿತು ದಾರಿಯ ಇಕ್ಕೆಲವನ್ನು ನೋಡುತ್ತ ಸಾಗುವ ಅವಕಾಶ. ಅನೇಕ ತೊರೆಗಳ ಬದುವಿನ ಮೇಲೆ ಸಾಗಿದ್ದ ಕಚ್ಚಾರಸ್ತೆಯಲ್ಲಿ ಆಗಾಗ ಅಡ್ಡಲಾಗಿರುತ್ತಿದ್ದ ತೊರೆಯನ್ನು ದಾಟಲು ಹಾಕಿದ್ದ ಆಟಕ್ಕಿಟ್ಟಂತಿದ್ದ ಕಿರುಸೇತುವೆಗಳನ್ನು ಬಸ್ಸು ದಾಟುವಾಗ ಈ ನಿರಾತಂಕ ನೀರಾಗಿ ಬಿಡುತ್ತಿತ್ತು. ಬಸ್ಸಿನ ಚಕ್ರಗಳ ಆಚೀಚೆ ಆರಿಂಚು ಮಾತ್ರ ಅಗಲವಿದ್ದ ಮೂರು ನಾಲ್ಕು ಸೇತುವೆಗಳನ್ನು ದಾಟಿದ ಪರಿ-ಬಸ್ ಚಾಲಕನ ಚಾಲನಾ ಪರಿಣತಿ ಹಾಗೂ 'ಹಿಂದೆ ಸರಿ' 'ಈಗ ಮುಂದೆ ಬಾ' 'ಬಲ ಪಕ್ಕಕ್ಕೆ' 'ಸರಿಯಿಲ್ಲ' 'ಹಿಂದೆ ಹೋಗು' ಎಂದೆಲ್ಲಾ ನಿರ್ದೇಶಿಸುತ್ತಿದ್ದ ಗೈಡ್ ಡೇವಿಡ್‌ನ ಧೈರ್ಯ-ಮೆಚ್ಚ ತಕ್ಕುದಾಗಿತ್ತು. ಕಿರುನದಿಯ ಎರಡೂ ದಡಗಳಲ್ಲಿ ಎರಡು ಫರ್ಲಾಂಗ್‌ನಷ್ಟಗಲಕ್ಕೆ ಬೆಳೆದು ನಿಂತ ಬಾರ್ಲಿ ಮತ್ತು ಬಟಾಣಿ ಪೈರು. ಮಿಕ್ಕಂತೆ ಬಂಜರು ಬಯಲು. ಬಯಲಿನಂಚಿಗೆ ಗೋಡೆಯಂತೆ ಎದ್ದಿದ್ದ, ತಲೆಸವರಿಹಾಕಿದ ಬೆಟ್ಟಗಳು-ರಾಜಸ್ಥಾನದ ಮಣ್ಣು ಕೋಟೆಗಳನ್ನು ಹೋಲುತ್ತಿದ್ದವು. ಆ ಗೋಡೆಗಳಲ್ಲಿ ಕೊರೆದಂತಿದ್ದ ಗುಹೆಗಳು ದೂರದಿಂದ ಗುಬ್ಬಚ್ಚಿಗೂಡುಗಳಂತಿದ್ದವು. ಈ ಗುಹೆಗಳಲ್ಲಿ ಈಚಿನವರೆಗೆ ಜನರು ವಾಸಿಸುತ್ತಿದ್ದರಂತೆ!

ತುಂಬಿ ಹರಿಯುತ್ತಿದ್ದ ಹೊಳೆ, ಬೆಳೆದು ನಿಂತ ಹೊಲ, ದಾರಿಯುದ್ದಕ್ಕೂ ಕಂಬಗಳ ಮೇಲೆ ಹಾಯ್ದ ತಂತಿಗಳು. ಆದರೂ ಏನೋ ಕೊರತೆಯೆನಿಸುವ ನೋಟ. ಕಾರಣ, ಅಲ್ಲೆಲ್ಲೂ ಕಾಣಬರದಿದ್ದ ಜನವಸತಿ ಅಥವಾ ಜನಸಂಚಾರ. ಚಲಿಸುತ್ತಿದ್ದುದೆಂದರೆ ನಮ್ಮ ಬಸ್ಸು ಮತ್ತು ಹೊಳೆ. ಐದು ಲಕ್ಷ ಚದರ ಮೈಲಿ ವಿಸ್ತಾರದ ಟಿಬೆಟ ದೇಶದ ಜನಸಂಖ್ಯೆ ಕೇವಲ ಒಂದು ದಶಲಕ್ಷ ಚಿಲ್ಲರೆ. ಆದ್ದರಿಂದಲೇ ಎಷ್ಟು ದೂರಕ್ಕೂ ಕಾಣದಿದ್ದ ಹಳ್ಳಿಗಳು ಅಥವಾ ಜನಜಂಗುಳಿ. ನಾವು ಕಂಡ ಒಂದೇ ಒಂದು ವವಸತಿ ಕೂಡ ತಾತ್ಕಾಲಿಕದ್ದು. ಕಟಾವಿಗೆ ಬಂದ ಪೈರನ್ನು ಒಟ್ಟುವ ರೈತರ ಐದಾರು ಸಂಸಾರಗಳು ಡೇರೆ ಹಾಕಿದ್ದವು.

ಸುಮಾರು ಹನ್ನೆರಡು ಹದಿಮೂರು ಕಿ.ಮೀ. ನಿರ್ಜನ ಹಾದಿಯಲ್ಲಿ ಓಡಿದ್ದ ಬಸ್ಸು ವಿಸ್ತಾರವಾಗಿ ಹರಿಯುತ್ತಿದ್ದ ಕರ್ನಾಲಿ ನದಿಯ ದೊಡ್ಡ ಸೇತುವೆಯನ್ನು ದಾಟಿ ಪುರಾಂಗ್ ಕಣಿವೆಯ ಷಹರ ಟಕಲಾಕೋಟ್ ನ ವಲಯಕ್ಕೆ ಬಂದಾಗಲೇ ಜನವಸತಿಯ ಲಕ್ಷಣಗಳು ಕಂಡುಬಂದದ್ದು. ಬ್ಯಾಂಕ್ ಕಟ್ಟಡ, ಪುರಸಭಾಭವನ, ದೂರವಾಣಿ ಕಛೇರಿ, ರೇಡಿಯೋ ಪ್ರಸಾರ ಕೇಂದ್ರ, ಹಂಡದಂಗಡಿ, ಕಿರಾಣಿ ಅಂಗಡಿಗಳು, ಓಣಿಗಳು, ರಸ್ತೆಯಲ್ಲಾಡುತ್ತಿದ್ದ ಮಕ್ಕಳು ಯುವಕರು. ಇತ್ಯಾದಿ ಇತ್ಯಾದಿ. ಶಾಲಾ ಸಮವಸ್ತ್ರ ತೊಟ್ಟು ಬೆನ್ನ ಮೇಲೆ ಪುಸ್ತಕಗಳ ಮೂಟೆ ಹೊತ್ತ ಚಿಣ್ಣರಾರೂ ಕಣ್ಣಿಗೇ ಬೀಳಲಿಲ್ಲ! ಶಹರಿನ ಏಕೈಕ ಮುಖ್ಯರಸ್ತೆಯಲ್ಲಿದ್ದ ಅತಿ ದೊಡ್ಡ 'ಬಹುತಾರಾ ಸೌಲಭ್ಯಗಳನ್ನೊಳಗೊಂಡ ಬುರಾಂಗ್ ಹೊಟೇಲ್ ನ ಅಂಗಳದಲ್ಲಿ ನಮ್ಮನ್ನು ಕ್ಷೇಮವಾಗಿ ತಂದಿಳಿಸಿದ ಬಸ್ ಡ್ರೈವರ್- ಹದಿನೇಳು ಇಪ್ಪತ್ತರ ಯುವಕ ಕೃತಾರ್ಥನಂತೆ ನಗೆ ಬೀರಿ ಒಳ ಗೋಡಿದ್ದ.

ಹೊಟೆಲಿನ ಲಾಂಜಿನಲ್ಲಿ ಕುಳಿತ ಅರ್ಧ ಗಂಟೆಯಲ್ಲಿ ಇಬ್ಬರು ಚೀನೀ ಅಧಿಕಾರಿಗಳು ಒಂದೆರಡು ಮೇಜುಗಳನ್ನು ಜೋಡಿಸಿ ತಮ್ಮ ಕಸ್ಟಮ್ಸು ಕಛೇರಿಯನ್ನು ಹೊಟೆಲಿನ ವರಾಂಡಾದಲ್ಲಿಯೇ

ತೆರೆದರು. ಎಲ್ಲರ ಪಾಸ್‌ಪೋರ್ಟ್ ಮತ್ತು ಕ್ಯಾಮರಾಗಳ ಸಂಖ್ಯೆ ಗುರುತುಸಿಕೊಂಡು ಕೆಲಸವಾಯಿತೆಂದು ಎದ್ದರು. ನಾವು ನಮ್ಮ ಕೋಣೆಗಳಿಗೆ ಸೇರುವ ಮೊದಲೇ ಇಬ್ಬರೂ ಅಧಿಕಾರಿಗಳು ಹೋಟೆಲಿನಿಂದಲೇ ನಿರ್ಗಮಿಸಿದ್ದರು. ಈ ರೀತಿಯ ಕಸ್ಟಮ್ಸ್ ಚೆಕ್ಕಿಂಗ್ ಕೂಡಾ ಹೊಸ ಅನುಭವ. ಬೇಕಿಲ್ಲದ ಮಾರುದ್ದದ ಫಾರ್ಮ್‌ಗಳನ್ನು ಭರ್ತಿ ಮಾಡಿ ಹೆಣಭಾರದ ಪೆಟ್ಟಿಗೆಗಳನ್ನು ಎಳೆದಾಡುತ್ತ ಕ್ಯೂ ನಿಂತು ತಲೆ ಬಿಸಿಯಾಗಿ, ಮಕ್ಕಳ ರಚ್ಚೆ ಹೆಚ್ಚಾಗಿ ಅವಸ್ಥೆ ಪಡುವ ಮಾತೇ ಇಲ್ಲ.

ಸೂರ್ಯನ ದಿಕ್ಕನ್ನು ನೋಡಿದ ಕಣ್ಣಂದಾಜು ಮತ್ತು ಚುರುಗುಟ್ಟುತ್ತಿದ್ದ ಹೊಟ್ಟೆ ಮಧ್ಯಾಹ್ನದ ಊಟವನ್ನು ಬಯಸುತ್ತಿದ್ದರೆ 'ಇನ್ನೆರಡು ಗಂಟೆಯೊಳಗೆ ರಾತ್ರಿಯ ಊಟ ತಯಾರಾಗುತ್ತದೆ. ಆಗಲೇ ಊಟದ ಮನೆಯ ಬಾಗಿಲು ತೆರೆಯುವುದು' ಎಂಬ ಸಮಾಚಾರ ಹೊಟ್ಟೆಗೆ ಒದ್ದೆ ಬಟ್ಟೆ ಕಟ್ಟಿತ್ತು. ಬಹು ದೂರದ ಬೀಜಿಂಗ್-ಚೀನಾ ರಾಜಧಾನಿಯ ಕಾಲಮಾನವನ್ನು ಅನುಸರಿಸುವುದರ ಫಲವಿದಾಗಿತ್ತು.

ಒಂದೇ ಹಗಲಿನಲ್ಲಿ ಎಷ್ಟು ಅಂತರಗಳನ್ನು ಕಂಡಿದ್ದು! ಪ್ರಕೃತಿ ಪರಿಸರದ ಅಂತರ, ಕಾಲಮಾನದ ಅಂತರ, ಊಟದ ಖಾದ್ಯಗಳಲ್ಲಿನ ಅಂತರ, ಜನಗಳಲ್ಲಿನ ಅಂತರ- ಮನಸ್ಸು ಮಿದುಳು ಎರಡೂ ಸಾಕಾಯಿತೆನ್ನುವಾಗಲೇ ಬಹುಮುಖ್ಯ ಅಂತರವೊಂದು ಕಂಡು ಬಂದಿತ್ತು. ಆ ಷಹರ ಟಕಲಾಕೋಟ್‌ನ ಸುಪ್ರಸಿದ್ಧ ಹೋಟೆಲಿನಲ್ಲಿದ್ದ ಸ್ನಾನಗೃಹಗಳು ಮತ್ತು ಶೌಚಾಲಯಗಳು.

ಮಧ್ಯಾಹ್ನ ಮೂರರಿಂದ ಐದು ಗಂಟೆಯವರೆಗೆ ಮಾತ್ರ ತಣ್ಣೀರು ಕಾಣುತ್ತಿದ್ದ ಸ್ನಾನದ ಗೂಡುಗಳು. ಮಿಕ್ಕ ಸಮಯ ನೀರು ಬೇಕೆಂದರೆ ಕೋಣೆಗಳ ಹೊರಗೆ ಇಟ್ಟಿದ್ದ ಪೀಪಾಯಿಯಿಂದ ಮೊಗೆದು ಕೊಳ್ಳಬೇಕು. ಶೌಚಾಲಯದ ವೈಖರಿ ಇನ್ನೂ ಸರಿ. ಆರಡಿ ಎತ್ತರದ ಅಟ್ಟಣಿಗೆಯೊಂದರಲ್ಲಿ ನಾಲ್ಕಡಿ ಅಂತರಪದಲ್ಲಿ ಒಂದೊಂದು ಪಾಯಿಖಾನೆ ತೂತು. ಸುತ್ತ ಐದಡಿ ಎತ್ತರದ ಹಲಗೆ. ಕೆಳಗೆ ನೋಡಿದರೆ ಹಂದಿಗಳ ಗುಡುಗಾಟ. ಸಾಲದುದು ಹೊರಗಿನಿಂದ ನೀರು ಹೊತ್ತು ತರಬೇಕಾದ ಫಜೀತಿ, ಭಯ, ಹೇಸಿಗೆ, ನಾಚಿಕೆ, ನಗು ಎಂದು ಪ್ರತ್ಯೇಕಿಸಲಾಗದ ಪರಿಸ್ಥಿತಿ. ಇಂತಹ ಸೌಲಭ್ಯ ವಿರುವ ಬುರಾಂಗ್‌ಗೆ ಹೋಟೆಲ್ ದರ್ಜೆ ಕೊಡುವ ಅರ್ಹತೆಯೇನೆಂದು ತಿಳಿಯಲಿಲ್ಲ. ಟಿಬೇಟಿಯರ ಸ್ವಚ್ಛತೆ ಯ ಪರಿಭಾಷೆಗೂ ನಮ್ಮ ಪರಿಭಾಷೆಗೂ ಇರುವ ಅಂತರ ಅನಂತವೆನಿಸಿತು. ಊರ ಪಕ್ಕದಲ್ಲೇ ಕರ್ನಾಲಿ ನದಿ. ಊರನ್ನು ಸೀಳಿಕೊಂಡೇ ಹರಿವ ಕಾಲುವೆಗಳು ಹೋಟೆಲಿನಿಂದ ಕೇವಲ ನೂರಡಿ ದೂರದಲ್ಲಿದ್ದವು. ಅಲ್ಲಿಂದ ನೀರು ಹಾಯಿಸಿಕೊಂಡಿದ್ದರೂ ಸ್ನಾನಕ್ಕೆ ಶೈಚಕ್ಕೆ ಸುಲಭವಾಗುತ್ತಿತ್ತು. ನಾವು ನೀರಿಗೆ ಒತ್ತಾಯಿಸಿದಾಗ ಗೊಣಗುತ್ತಾ, ಗಳುವಿನ ಎರಡೂ ಬದಿಗೆ ಸಿಗಿಸಿದ್ದ ಬಕೆಟ್ಟುಗಳಲ್ಲಿ ನೀರು ಹೊತ್ತು ತಂದಿದ್ದರು.

ಮೊದಲ ಸಂಜೆಗೆ ಅಲ್ಲಿನ ಶುಚಿತ್ವದ ಬಗ್ಗೆ ಕಳವಳವಾದರೂ ಬೇರೊಂದು ವ್ಯವಸ್ಥೆ ಮಾಡಿಕೊಳ್ಳುವ ಸ್ಥಿಯಲ್ಲಿರಲಿಲ್ಲ. ಅನುಭವಿಸಿಯೇ ಮುಗಿಸಬೇಕಿತ್ತು. ಅಲ್ಲಿನವರ ಅನಾನುಕೂಲತೆಗಳೇನೋ, ಸಿಗದ ವಸ್ತುಗಳೇನೋ ತಿಳಿಯದೆ ಅವರನ್ನು ದೂರಬಾರದೆಂದು ಒಳ ಮನ ಸಹನೆ ತೋರಿತ್ತು. ಮಧ್ಯಾಹ್ನ ಮೂರರಿಂದ ರಾತ್ರಿ ಹತ್ತರವರೆಗೆ ಮಾತ್ರ ವಿದ್ಯುತ್ತಿನ ಸರಬರಾಜು. ನಂತರ ಮೊಂಬತ್ತಿ ಟಾರ್ಚಿನ ಬೆಳಕು. ನಮ್ಮ ಮನೆಗಳಲ್ಲಿ 'ಅತ್ಯಗತ್ಯ'ವಾದ ಗ್ರೈಂಡರ್, ರೆಫ್ರಿಜರೇಟರ್, ಕುಕ್ಕಿಂಗ್ ರೇಂಜ್, ಫ್ಯಾನ್, ವಾಶಿಂಗ್ ಮೆಶಿನ್ ಮುಂತಾದವು

ಇಲ್ಲಿನವರಿಗೆ ದೇವೇಂದ್ರನ ಭೋಗವಸ್ತುಗಳಾಗಿ ಕಂಡಿದ್ದರೆ ಅಚ್ಚರಿಯೇನಿಲ್ಲ.

ಇಲ್ಲಿನವರ ಶುಚಿತ್ವದ ಮಟ್ಟವನ್ನು ನೋಡಿ ನಾವು ಮಾಡಿದ ಮೊದಲ ಕಾರ್ಯವೆಂದರೆ ನೀರಿನ ಪೀಪಾಯಿಗೆ ಕ್ಲೋರಿನ್ ಮಾತ್ರೆಗಳನ್ನು ಸುರಿದಿದ್ದು. ಮತ್ತು ಟಿಬೆಟ್ಟಿನಲ್ಲಿರುವವರೆಗೆ ಹಸಿ ಪದಾರ್ಥಗಳನ್ನು ತಿನ್ನಬಾರದೆಂದು ನಿಶ್ಚಯಿಸಿದುದು.

ಸಂಜೆ ಏಳುಗಂಟೆಗೆ–ನಮ್ಮ ಗಡಿಯಾರದಲ್ಲಿ ಐದು ಗಂಟೆಯೂ ಆಗಿರಲಿಲ್ಲ– ರಾತ್ರಿಯೂಟಕ್ಕೆ ಕರೆ ಬಂದಿತು. ಬೆಳಗಿನಿಂದ ಏನೂ ತಿನ್ನದೆ ಹೊಟ್ಟೆ ಹಪಹಪಿಸುತ್ತಿದ್ದರೂ ಹೆಚ್ಚಿಗೆ ಏನೂ ತಿನ್ನಲಾಗದ ಪರಿಸ್ಥಿತಿ. ಕಾರಣ, ಎಲ್ಲ ಖಾದ್ಯಗಳಲ್ಲೂ ಇದ್ದ ಸಾಸಿವೆ ಎಣ್ಣೆಯ ಹಸಗಲು ವಾಸನೆ. ಮೇಜಿನ ಮೇಲಿದ್ದ ಪಾತ್ರೆಗಳ ಸಂಖ್ಯೆ ಸಾಕಷ್ಟಿದ್ದರೂ ತಿನ್ನಲು ಏನೂ ಇಲ್ಲವೆಂಬ ಭಾವನೆ. ಬಳುಕಿ ಜಾರುತ್ತಿದ್ದ ನೂಡಲ್ಸ್, ಎಣ್ಣೆ ಬಸಿಯುತ್ತಿದ್ದ ಅನ್ನ, ಟೊಮೆಟೋ ಸಾಸ್‌ನಿಂದಾದ ಸೂಪ್, ನೀರಿನಲ್ಲಿ ಬೇಯಿಸಿ ನಂತರ ಉಪ್ಪು ಎಣ್ಣೆ ಬಳಿದಿದ್ದ ಎಲೆ ಕೋಲಿನ ಪಲ್ಯ , ಕುದಿ ನೀರಿನಲ್ಲಿ ಅದ್ದಿ ತೆಗೆದಿದ್ದ ಆಲೂಗೆಡ್ಡೆ ತುರಿ ಮತ್ತು ನಾಲ್ಕೈದು ತರಹದ ಹಣ್ಣುಗಳು– ಟಿನ್ ಡಬ್ಬದಲ್ಲಿ ಚೈನಾದಿಂದ ಬಂದದ್ದು. ಬೇರೆಲ್ಲ ಅಡುಗೆಯನ್ನು ರುಚಿನೋಡಿ ಕಡೆಗೆ ಹೊಟ್ಟೆ ತುಂಬುವಂತೆ ತಿಂದಿದ್ದು ಈ ಹಣ್ಣುಗಳನ್ನೇ! ನಾವು ಈ ಹೊಟೆಲಿನಲ್ಲಿ ಉಂಡ ಎಂಟು ಹತ್ತು ಊಟಗಳಲ್ಲೆಕ್ಕೂ ಇದೇ ಅಡುಗೆ, ಬೆಳಗಿನ ಉಪಾಹಾರಕ್ಕೆ ಸಾಸಿವೆ ಎಣ್ಣೆಯಲ್ಲಿ ಸುಟ್ಟ ಬ್ರೆಡ್, ಜಾಮ್, ಎಣ್ಣೆಯಲ್ಲಿ ಕರಿದ ಕಡಲೆ ಬೀಜ ಮತ್ತು ಚಹಾ. ಇವೆಲ್ಲಾ ದೂರದ ಊರುಗಳಿಂದ ಆಮದಾಗಿದ್ದ ವಸ್ತುಗಳು, ಸಹಜವಾಗಿಯೇ ದುಬಾರಿ ಬೆಲೆ. ಶಾಕಾಹಾರಿಗಳಿಗೆ ಇನ್ನೆಂತಹ ಊಟವನ್ನಿತ್ತಾರು? ಇದ್ದುದರಲ್ಲಿ ಪೌಷ್ಟಿಕ ಆಹಾರವೇ ಸಿಕ್ಕಿತ್ತು. ಕೇಳಿದಷ್ಟು ಬಡಿಸುತ್ತಿದ್ದರು.

ಉಂಡು ನಮ್ಮ ಕೊಠಡಿಗೆ ಬಂದ ಒಂದೆರಡು ಕಾಸಿನಲ್ಲೇ ಮತ್ತೆ ಹಸಿವು. ಹೊಟ್ಟೆ ಭಾರತದ ರಾತ್ರಿ ಭೋಜನವನ್ನು ಬಯುಸುತ್ತಿತ್ತು. ಊಟದ ಮನೆ ಬೀಗ ಜಡಿದಿದ್ದ ಭೂತ ಬಂಗಲೆಯಾಗಿತ್ತು. ಗತ್ಯಂತರವಿಲ್ಲದೆ ನಮ್ಮ ಜೇಬಿಗೆ ಶರಣು ಹೋಗಿ, ಅಲ್ಲಿದ್ದ ಅಳಿದುಳಿದ ತಿಂಡಿಯನ್ನೇ ತಿಂದು ನೀರು ಕುಡಿದು ಮಲಗಿದ್ದಾಯಿತು.

ಇಂದು ಬೆಳಗಿನ ವಿಲಕ್ಷಣ ಉಪಾಹಾರ ಮುಗಿಸಿ ಚಹಾ ಕುಡಿಯುತ್ತಾ ಊಟದ ಮನೆಯಲ್ಲೇ ಕುಳಿತಿದ್ದೆವು. ಟಕಲಾಕೋಟ್‌ನ, ಬುರಾಂಗ್ ಹೊಟೆಲಿನ ಗುಣಗಾನ ಮಾಡುತ್ತಿದ್ದ ನಮ್ಮ ಬಳಿಗೆ ಬಂದ ಗೈಡ್ ಡೇವಿಡ್‌ನ ದೇವವಾಣಿ ಮೊಳಗಿತ್ತು 'ಪರಿಕ್ರಮಾದಲ್ಲಿ ಬೇಕಾಗುವ ಸಾಮಾನುಗಳನ್ನೆಲ್ಲಾ ಇಲ್ಲೇ ಖರೀದಿಸಿರಿ. ತಿಂಡಿ–ತಿನಸು ತೀರ್ಥ(ಕೊಕೊಕೊಲಾ, ಸೋಡಾ, ಹಣ್ಣಿನ ಜ್ಯೂಸ್ ಇತ್ಯಾದಿ)ಗಳನ್ನು ಟಾಯ್ಲೆಟ್ ರೋಲುಗಳನ್ನು ಫಿಲ್ಮ ರೋಲುಗಳನ್ನು ಇಲ್ಲೇ ಕೊಳ್ಳಿರಿ. ದಾರಿಯಲ್ಲಿ ಯಾವುದೇ ದುಕಾನು ಸಿಗುವುದಿಲ್ಲ ಬಟ್ಟೆ ಮೂಟೆಗಳನ್ನು ಇಲ್ಲೇ ಬಿಡಿ ಬದಲಿಸುವ ಅಗತ್ಯವಿಲ್ಲ. ಟಕಲಾಕೋಟಿಗೆ ಮರಳಿದ ಮೇಲೆ ಒಂದೇ ಬಾರಿಗೆ ಸ್ನಾನ ಮಾಡಿದರಾಯಿತಲ್ಲವೆ!'

ಪರಿಕ್ರಮಾಗೆ ಅಗತ್ಯ ವಸ್ತುಗಳನ್ನು ನಿರ್ಧರಿಸುವ ಬಗೆ ಹೇಗೆ? ಯಾರಿಗೂ ಅನುಭವವಿಲ್ಲ. ಡೇವಿಡ್ ಹೇಳಿದಂತೆ ತಯಾರಾಗಿ ಹೊರಟರೆ ಎರಡೇ ಹಗಲಿನಲ್ಲಿ ಲಿಪುಲೇಖ್‌ನಲ್ಲಿ ಕಂಡ

ಕುದುರೆಯ ಮಾಲೀಕರಂತೆ ನಾವು ಕೂಳಕರಾಗಿ ಬಿಡುತ್ತಿದ್ದೆವು. ಎಲ್ಲರ ಪರವಾಗಿ ಇಬ್ಬರು ಯಾತ್ರಿಗಳು ಬ್ಯಾಂಕಿಗೆ ಹೋಗಿ ಹಣದ ವಿನಿಮಯ ಮಾಡಿ ತಂದ ಯುವಾನ್ (ಚೀನೀ ಹಣ)ಗಳಲ್ಲಿ ಅಗತ್ಯ ವಸ್ತುಗಳನ್ನು ಕೊಳ್ಳಲು ಸಂಜೆಯೇ ಎಲ್ಲರೂ ಅಲ್ಲಿನ ಬ್ಯಾಂಕ್ ಮಳಿಗೆಗೇ ಹೊರಟೆವು. ಕೊಂಡದ್ದು? ಚೀನೀ ಬೀಗಗಳು ಮತ್ತು ಮಾನಸ ಸರೋವರದ ನೀರು ತರಲು ಪ್ಲಾಸ್ಟಿಕ್ ಡಬ್ಬಿಗಳು, ಕೆಲವರು ರೈನ್ ಕೋಟ್ ಗಳನ್ನು, ಉಣ್ಣೆ ಉಡುಪುಗಳನ್ನು ಖರೀದಿಸಿದರು. ನಡೆಯುವ ಹುಮ್ಮಸ್ಸಿದ್ದವರು ಮತ್ತೊಂದು ಜೊತೆ ಬೂಟುಗಳನ್ನು ಕೊಂಡರೆ ಅನೇಕರು ಫಿಲ್ಮ್ ರೋಲ್‌ಗಳನ್ನು ಕೊಂಡರು.

ರಾತ್ರಿ ಎಂಟುವರೆಯಾದರೂ ಇನ್ನೂ ಹಗಲು ಬೆಳಕು ಇದ್ದು ಮಳಿಗೆಯಿಂದ ಹೋಟೆಲಿಗೆ ನಡೆದೇ ಬಂದೆವು. ಕೆಲ ರಾತ್ರಿಗಳು ದೂರವಾಣಿಯಲ್ಲಿ ಮನೆಯವರನ್ನು ಸಂಪರ್ಕಿಸಲು ದೂರವಾಣಿ ಕೇಂದ್ರಕ್ಕೆ ನಡೆದಿದ್ದರು. ಲೈನ್ ಸಿಗುವುದೂ ಭಾರೀ ಕಷ್ಟವೇ! ಸಿಕ್ಕರೂ ಮಾತು ಸ್ಪಷ್ಟವಾಗಿ ಕೇಳಿಸಲಾರದಷ್ಟು ಕೊರಕೊರ ಸದ್ದಿನ ಅಡಚಣೆ. ಮನೆಯವರನ್ನು ಸಂಪರ್ಕಿಸುವ ಅಗತ್ಯ ಕಾಣದೆ ನಾನು ನಿರುಮ್ಮಕ್ತವಾಗಿ ಕೋಣೆ ಸೇರಿ ತಲೆಗೆ ಬಂದದ್ದನ್ನು ಗೀಚಲು ಕುಳಿತೆ.

ಇಂದು ಜುಲೈ ೧೫ನೇ ತಾರೀಖು. ನನ್ನ ಜೀವನಕ್ಕೆ, ಜೀವನ ದೃಷ್ಟಿ ಕೋನಕ್ಕೆ ತೀವ್ರತರ ತಿರುವು ಕೊಟ್ಟ ಮಹತ್ವದ ದಿನ. ಈ ದಿನ ಕೆಲವೇ ತಾಸುಗಳಲ್ಲಿ ಎಂತೆಂತಹ ದೃಶ್ಯಗಳನ್ನು ಕಂಡೆವೊ, ಎಂತೆಂತಹ ಅನುಭವಗಳನ್ನು ಪಡೆದೆವೊ- ಮನಸ್ಸಿನ ಮೇಲೆ ಸತತ ಆಶ್ಚರ್ಯದ ಸುರಿಮಳೆಯಾಗಿ ಮಾನವ ಸಹಜ ಸ್ವಭಾವವಾದ ಚಿತ್ತ ಸಂವಾದ ಕೆಲ ಕಾಲ ನಿಂತು ಹೋಗಿತ್ತು.

ಸಮಾಧಿಯೆಂಬುದರ ಕಿರು ಪರಿಚಯವಾಗಿತ್ತು. ವರ್ಷ- ತಿಂಗಳಲ್ಲಿ ಯೋಚಿಸುತ್ತಿದ್ದ ಕಾಲಮಾನ ಟಿಕಲಾಕೋಟೆಗೆ ಬರುವ ವೇಳೆಗೆ ದಿನದ ಲೆಕ್ಕದಲ್ಲಿ ಸರಿಯುತ್ತಿದ್ದುದು ಇಂದು ಕ್ಷಣಗಳ ಮಾನದಲ್ಲಿ ಜಾರಿ ಹೋಗುತ್ತಿತ್ತು. ಮನೋರಂಗದ ಮೇಲೇ ಈ ದಿನದ ಪ್ರತಿಕ್ಷಣವನ್ನೂ ಅದೆಷ್ಟು ಬಾರಿ ಮರು ಜೀವಿಸಿದ್ದೇನೋ-ಲೆಕ್ಕವಿಲ್ಲ. ವಾಸ್ತವವಾಗಿಯೇ ಮೊದಲಬಾರಿಗೆ ನೋಡ ಬೇಕೆಂದು, ದೆಹಲಿಯಲ್ಲಿ ತೋರಿಸಿದ ಸಾಕ್ಷ್ಯಚಿತ್ರವನ್ನೂ ಸಹ ನೋಡದೆ ಮನಸ್ಸು ಬಿಗಿಹಿಡಿದದ್ದು ಸಾರ್ಥಕ. ಪಟ್ಟ ಪರಿಶ್ರಮವನ್ನು ಮರೆಸಿ, ನಿರೀಕ್ಷೆಯನ್ನು ಮೀರಿ ಕಣ್ಮನ ತಣಿಸಿದ ಮಾನಸ ಸರೋವರ ಮತ್ತು ಕೈಲಾಸ ಶಿಖರಗಳ ಅಲೌಕಿಕ ಸೌಂದರ್ಯ – ಹಿತ್ತು ಆನಂದ ಕೊಟ್ಟ ದೃಶ್ಯ. ನೋವುಂಡ ಬಳಿಕ ಹೆತ್ತ ಮಕ್ಕಳ ಮುಖವನ್ನು ಮೊದಲ ಬಾರಿಗೆ ನೋಡಿದಾಗಿನ ಅನುಭವದ ತೀವ್ರತೆಯಿತ್ತು ಆ ಗಳಿಗೆಯಲ್ಲಿ.

ಬೆಳಗಿನ ಝಾವ ಐದಕ್ಕೆ ಹೊರಡುವ ನಿಶ್ಚಯವಾಗಿದ್ದುದರಿಂದ ಹಿಂದಿನ ರಾತ್ರಿಯೇ ಪ್ಯಾಕಿಂಗ್ ಮುಗಿಸಿ, ಪ್ರಯಾಣದ ಒಳಬಟ್ಟೆಗಳನ್ನು ತೊಟ್ಟು ಅಣಿಯಾಗಿ ಮಲಗುವಾಗಲೇ ತಡವಾಗಿತ್ತು. ಬೆಳಗ್ಗೆ ಪಕ್ಕದ ಕೋಣೆಯವರೂ ಬಾಗಿಲು ಬಡಿದು ಎಬ್ಬಿಸಿದಾಗಲೇ ನಾವು ನಾಲ್ವರು ಮಹಿಳಾ ಮಣಿಗಳಿಗೆ ಎಚ್ಚರವಾದದ್ದು. ನಮ್ಮಿಂದಾಗಿ ಹೊರಡಲು ತಡವಾಗ ಬಾರದೆಂದು ಗಡಿಬಿಡಿಯಲ್ಲಿ ಮುಖ ತೊಳೆದು, ಬೆಳಗಿನ ಉಪಹಾರಕ್ಕೆ ಸೊನ್ನೆ ಸುತ್ತಿ, ಬೂಟು ಧರಿಸಿ, ಬೆತ್ತ ಹಿಡಿದು ಹೊರಬಂದರೆ ಪುನಃ ಕೋಣೆಯೊಳಗೇ ಸೇರಿಕೊಳ್ಳುವಂತೆ ಮಾಡುವ ಚಳಿ, ಸುತ್ತಲೂ ಹರಡಿದ್ದ ಕತ್ತಲು. ಓಡಿ ಬಸ್ಸಿನೊಳಗೆ ನುಸುಳಿಕೊಂಡೆವು. ಬಸ್ಸು ಹೊರಟ ಮೇಲೂ ಇದ್ದ ನಿದ್ದೆಯ

ಮುಂಪರು, ಜೊತೆಗೆ ಹೊರಗಿನದೇನು ಸರಿಯಾಗಿ ಕಾಣಿಸದಂತೆ ಮಂಜು ಕವಿದ ಮಬ್ಬುಗತ್ತಲು. ಅರ್ಧ ತಾಸಿನ ಪ್ರಯಾಣದ ನಂತರವೇ ನಸುಬೆಳಕು ಹರಿದು ಪರಿಸರದ ಪರಚಯವಾದದ್ದು. ಶುಷ್ಕ ಮರುಭೂಮಿಯಲ್ಲಿ, ಬೋಳು ಬೆಟ್ಟಗಳ ನಡುವೆ, ಅಲ್ಲೊಂದು ಇಲ್ಲೊಂದು, ಹಿಮದ ಟೋಪಿ ಧರಿಸಿ ನಿಂತ ಬೆಟ್ಟಗಳು, ಅವುಗಳಿಂದ ಕರಗಿ ಬರುತ್ತಿದ್ದ ಒರತೆಗಳು, ಅವುಗಳ ತೇವ ಪಸರಿಸಿರುವವರೆಗೆ-ಐದಾರು ಅಡಿ ಅಗಲಕ್ಕೆ ಪಾಚಿಯ ಹಸಿರು ಪಟ್ಟಿ, ಮಿಕ್ಕಂತೆ ನೊರಜುಗಲ್ಲಿನ ಕಂದು ಬಣ್ಣ, ಅಲ್ಲಲ್ಲಿ ೨-೩ ಅಡಿ ವ್ಯಾಸದ ಹುಲ್ಲು ವೃತ್ತಗಳು- ಚಿರತೆಯ ಮೈಮೇಲಿನ ಮಚ್ಚೆಯಂತೆ ಚಿಬ್ಬು ಚಿಬ್ಬಲಾಗಿ ಬೆಳೆದ ಈ ಹುಲ್ಲಿನ ಬೇರೊಳಗೆ ಮನೆಮಾಡಿದ್ದ ಮೊಲಗಳು, ಮರ್ಮೊಟ್(ಗದ್ದೆ ಇಲಿಗಳಂತೆ)ಗಳು ಬಸ್ಸಿನ ಸದ್ದಿಗೆ ಪುಳಕ್ಕನೆ ಈಚೆ ಬಂದು ಹೆದರಿ ಜಿಗದೋಡಿ ಬೇರೊಂದು ಬಿಲದಲ್ಲಿ ಪಕ್ಕನೆ ನುಸುಳಿದ ಪರಿ ಮೋಜಿನದಾಗಿತ್ತು. ಅಂತೆಯೇ ಮರಳು ಏಡಿಗಳು, ಗುಬ್ಬಚ್ಚಿಗಳು ನೆಲದಲ್ಲೇ ತಮ್ಮ ಬೆಳಗಿನ ಕಾರ್ಯಕ್ರಮಗಳನ್ನು ನಡೆಸಿದ್ದವು. ಎಲ್ಲ ಪ್ರಾಣಿ ಪಕ್ಷಿಗಳ, ಕೀಟಗಳ ಜೀವನವು ನೆಲಮಟ್ಟದಲ್ಲೇ! ಈ ಮರು ಭೂಮಿಯಲ್ಲಿ ಮರಗಳಾಗಲೀ, ಪೊದೆಗಳಾಗಲೀ, ಕಡೆಗೆ ಎರಡಡಿ ಎತ್ತರದ ಕುರುಚಲು ಗಿಡಗಳೂ ಬೆಳೆಯಲಾರವು. ದಾಕ್ಷಾಯಿಣಿಯನ್ನು ಯಜ್ಞಕುಂಡದಲ್ಲಿ ಕಳೆದುಕೊಂಡ ಶಿವ ಭಸ್ಮಲೇಪಿತನಾಗಿ ಮೌನಿಯಾಗಿ ತನ್ನ ಸುತ್ತೆಲ್ಲ ಪಸರಿಸಿದ ಧೂಳಿನಲ್ಲಿ ದುಃಖವನ್ನು ಹರಡಿರಬಹುದೆನ್ನುವಂತಹ ಪರಿಸರ. ಗಿರಿಜೆಯ ಕಲ್ಪನೆಯೂ ಬಾರದಿರುಂತಹ ಸ್ಮಶಾನ ಸದೃಶ ಪ್ರದೇಶ. ಗಿರಿಜಾ ಜನನ, ಕಲ್ಯಾಣದ ಕಲ್ಪನೆಯೇನಿದ್ದರೂ ಹಿಮಾಲಯದ ದಕ್ಷಿಣಭಾಗದ ಮಂಗಳಮಯ ವಾತವರಣದಲ್ಲಿ, ಹಸಿರಿನ ಸಮೃದ್ಧಿಯಲ್ಲಿ , ನಾವು ಭಾರತೀಯರು ಪ್ರಕೃತಿಯ ವರದಾನ ಪಡೆದ ಪುಣ್ಯ ಜೀವಿಗಳು.

ಸುತ್ತೆಲ್ಲ ಬೆಟ್ಟಗಳ ನಡುವೆ ನಾವು ಮುಂದೆ ಸಾಗಿದಂತೆ ಕಲ್ಪನೆ ಗರಿಕೆದರಿ ಹಾರಿತ್ತು. ಬೆಳಗಿನ ಶಾಖವೇರಿದಂತೆ ಮೋಡಗಳು ಮೇಲೆ ಏರುತ್ತಿದ್ದವು. ಒಂದು ಮರಿಮೋಡ ಬೆಟ್ಟಗಳ ತೊಟ್ಟಿಲಲ್ಲಿನ್ನೂ ಮಲಗಿದ್ದರೆ ಮೇಲಿದ್ದ ತಾಯಿ ಮೋಡ ಮಗುವಿನೆಡೆಗೆ ಬಾಗಿದಂತೆ. ಮತ್ತೊಂದು ಹುಡುಗು ಮೋಡ ಬೆಟ್ಟವೊಂದು ಹೊದ್ದಿದ್ದ ಬಿಳಿ ತುಪ್ಪಳದ ಕಂಬಳಿಯನ್ನೆಳೆದು ಕೆಣಕಿದಂತೆ-ಗಾಳಿ-ಮೋಡಗಳ ಆಟ ನಡೆದಿತ್ತು. ಹಾಗೆಯೇ ಕತ್ತಲೆ -ಬೆಳಕಿನಾಟವೂ, ರವಿಯೂ ತನ್ನೊಡನೆ ಜಗಳವಾಡುತ್ತಾ ಮೇಲೇರಿದಂತೆ ತಮೋರಾಶಿಯು ಸೋಲುತ್ತಾ, ಬೆಟ್ಟಗಳ ಮೇಲೆ ಪಸರಿಸಿದ್ದ ಕತ್ತಲೆಯನ್ನು ತಾನೇ ನುಂಗಿ ನುಂಗಿ ಘನವಾಗುತ್ತಾ ಅಲ್ಲಲ್ಲಿ ನೆರಳಾಗಿ ನಿಂತು ಬೆಳಕನ್ನು ಎದರಿಸುತ್ತಾ ಕಡೆಗೆ ಭೂಮಿಯಲ್ಲಿ ಸಮಾಧಿಯಾಗಿತ್ತು. ರವಿಪ್ರಕಾಶದ ವಿಜಯವನ್ನು ಸಾರಲು ಬೋಳು ಬೆಟ್ಟಗಳ ಮೇಲೆ ಬಾನಿನಲ್ಲಿ ಹತ್ತು ಹಲವು ಬಣ್ಣಗಳ ಮಚಾಟ. ಮೋಡಗಳ ಸಂಭ್ರಮ. ರವಿ ಕಿರಣಗಳಿಂದ ಪರ್ವತಗಳ ಮುಖ ಮಾರ್ಜನ ನಡೆದಿತ್ತು. ರವಿ ಕಿರಣಗಳ ಆಟವೂ ಅನೋಘ! ರವಿ ತನ್ನ ಮಂತ್ರದಂಡದಿಂದ ವಜ್ರ ವೈಡೂರ್ಯಗಳ ರಾಶಿ ಒಟ್ಟಿರುವಂತೆ ಬೆಟ್ಟಗಳ ಕರಿಯ ಕಲ್ಲಿನ ತುಣುಕುಗಳು ಒಂದು ಕೊನದಲ್ಲಿ ಕಿರಣಗಳನ್ನು ಪ್ರತಿ ಫಲಿಸುತ್ತಿದ್ದವು. ಬಸ್ಸು ಮುಂದೆ ಸರಿದಂತೆ ಕೋನ ಬದಲಾಗಿ, 'ಈ ಕಲ್ಲುಗಳೇ ವಜ್ರವಾಗಿ ಹೊಳೆದವೇ?' ಎಂದು ಉದ್ಗರಿಸುವಂತಾಗಿತ್ತು. ಇದ್ದುದನ್ನು ಇಲ್ಲವಾಗಿಸಿ, ಇಲ್ಲದ್ದನ್ನು ತೋರಿಸುವ ಕಿರಣಗಳ ಕೈಚಳಕ!

ಹಲವು ಊರುಗಳಿಗೆ ಹೋಗುವ ಹೆದ್ದಾರಿಯಲ್ಲಿ ಸಾಗುತ್ತಿದ್ದರೂ ಹಬ್ಬಿ ಹರಡಿದ್ದ

ಬಂಜರು ಪ್ರದೇಶದಲ್ಲಿ ಎಲ್ಲೋ ಕಳೆದು ಹೋದಂತಹ ಭಾವನೆ. ಕಾಲು ದಾರಿಯಂತಿತ್ತು ಆ ಹೆದ್ದಾರಿ! ಕೈಮರವಿಲ್ಲ. ಹೆಸರಿನ ಫಲಕವಿಲ್ಲ. ಗುರುತಿಗೆಂದರೆ ಏರುತ್ತಿದ್ದ ಸೂರ್ಯನೊಬ್ಬನೇ! ಇದ್ದುದೊಂದೇ-ಬಟಾಬಯಲು. ದೂರದಲ್ಲಿ ಬೆಟ್ಟಗಳು. ಕಣ್ಣ ಮುಂದೆ ಚಾಚಿ ಬಿದ್ದ ಜೋಡಿ ಕಾಲುದಾರಿ-ವಾಹನಗಳ ಟೈರಿನ ಗುರುತು. ನಾಗರೀಕತೆಯ ಏಕೈಕ ಗುರುತು.

'ಮುಂದಿನ ತಿರುವಿನಲ್ಲಿ ಕೈಲಾಸ ಶಿಖರ ಕಾಣಿಸುವುದು. ಮೋಡ ಮುಚ್ಚಿರದಿರಲೆಂದು ಪ್ರಾರ್ಥಿಸಿ. ಮುಂದೆ ಹೋಗಿ ಬಲಕ್ಕೆ ತಿರುಗಿದರೆ ಮಾನಸ ಸರೋವರ. ಅಲ್ಲಿ ಅರ್ಧ ಗಂಟೆ ವಿರಾಮ' ಎಂದು ಗೈಡ್ ಡೇವಿಡ್ ವಿವರಿಸುತ್ತಿದ್ದಂತೆ ಬಸ್ಸು ಬಲಬದಿಗಿದ್ದ ಬೆಟ್ಟವನ್ನು ಬಳಸಿಕೊಂಡು ಬಯಲಿಗೆ ಬಂದು ನಿಂತಿತು. ಅಲ್ಲಿ ಆಗ ಕಂಡ ದೃಶ್ಯ ರೋಮಾಂಚನವಾಗಿತ್ತು. ಎದುರಿಗಿದ್ದುದು ಕಣ್ಣಿನಿಂದ ಕುಡಿಯಬಹುದೆನಿಸಿದ ದಟ್ಟ ನೀಲಿಯ ವಿಶಾಲ ಸರೋವರ 'ರಾಕ್ಷಸ ತಾಲ್!' ತೆರೆಗಳೇ ಇಲ್ಲದೆ ಬೆಳಗಿನ ಬಿಸಿಲಿನಲ್ಲಿ ಹೊಳೆದಿದ್ದ ನೀಲಿ ದರ್ಪಣ. ನಮ್ಮನ್ನು ಅಚ್ಚರಿಯ ಕಡಲಲ್ಲಿ ಮುಳಗಿಸಲೆಂದೇ ಡೇವಿಡ್ ರಾಕ್ಷಸ ತಾಲ್ ನ ಹೆಸರೇ ಎತ್ತಿರಲಿಲ್ಲವೇನೋ! ದೂರದ ಆಗಸದಲ್ಲಿ ಮೋಡಗಳು ಎದ್ದಿದ್ದು ಕೈಲಾಸ ಶಿಖರಕ್ಕೆ ಪರದೆ ಎಳೆದಿದ್ದ ಕಾರಣ ಶಿಖರ ದರ್ಶನವಾಗಲಿಲ್ಲ. ಆದರೆ ಅದರ ಬಗ್ಗೆ ಯೋಚಿಸಲು ಅವಕಾಶವೀಯದೆ ನಮ್ಮನ್ನಾವರಿಸಿತ್ತು ರಾಕ್ಷಸ ತಾಲ್ ನ ನೀಲ ಜಲ. ದೂರದಿಂದ ಅದರ ಹರವು ಮತ್ತು ಕಡು ನೀಲಿಯ ನೀರು ಹೊರ ಉಬ್ಬಿದಂತೆ ಕಾಣಿಸಿ ದೃಷ್ಟಿ ಭ್ರಮೆಯನ್ನುಂಟು ಮಾಡಿತ್ತು. ಅಸಾಧಾರಣ ನೀಲಿಯ ನಡುವೆ ಎದ್ದಿದ್ದ ಕಿತ್ತಳೆ ಕೆಂಪು ಬಣ್ಣದ ಬೆಟ್ಟಗಳ ದ್ವೀಪಗಳು ನೀಲಾಕಾಶವನ್ನು ಹೊತ್ತು ನಿಂತಿದ್ದವು. ಆ ನೀಲಾಕಾಶದಲ್ಲಿ, ಅಲ್ಲಲ್ಲಿ ಚದುರಿದ್ದ ಬೆಳಗಿನ ಗುಲಾಬಿ ಬಣ್ಣದ ಮೋಡಗಳು. ಯಾವುದಾದರು ವರ್ಣ ಚಿತ್ರದಲ್ಲಿ ನೋಡಿದ್ದರೆ ಎಷ್ಟು ಅಸಂಬದ್ಧ ವೆನಿಸಿಕೊಳ್ಳುತ್ತಿದ್ದ ದೃಶ್ಯ. ಆದರೆ ನಮ್ಮ ಕಣ್ಣೆದುರಿಗಿದ್ದುದು 'ಪ್ರಕೃತಿ ಸಹಜ' –ನೈಜ ಚಿತ್ರವಾಗಿತ್ತು. ಸತ್ಯವಾಗಿತ್ತು. ಈ ಸತ್ಯಕ್ಕೆ ಮಿಥ್ಯೆಯ ಸೋಗು ತಂದಿದ್ದು ಅಲ್ಲೆಲ್ಲೂ ಕಾಣಬರದಿದ್ದ ವೃಕ್ಷಲೋಕ-ಅದರ ಹರಿತ್ತು. ಯಾರದೋ ಮೋಡಿಗೊಳಗಾದವರಂತೆ ಎಲ್ಲರೂ- ಅದುವರೆಗೆ ಅಪವಿತ್ರವೆಂದು ಮೂಗೆಳೆದಿದ್ದವರೂ ರಾಕ್ಷಸ ತಾಲ್‌ನ ದಂಡೆಯನ್ನು ಸೇರಿದೆವು. ಬೇರೊಂದು ಲೋಕದ ಹೊಸ್ತಿಲಲ್ಲಿ ನಿಂತಂತಾಗಿತ್ತು. ನೀರು, ಗುಡ್ಡ-ಬೆಟ್ಟ ಮತ್ತು ಆಕಾಶವನ್ನು ಒಂದುಗೂಡಿಸುವ, ದೃಶ್ಯದಲ್ಲಿ ಐಕ್ಯತೆ ಸಾಧಿಸುವ ಅಂಶವಾದ ಜೈವಿಕ ಜಾಲ- ಮರ ಗಿಡಗಳೇ ಅಲ್ಲಿರಲಿಲ್ಲವಾಗಿ ಇಡೀ ಪರಿಸರ ವಿಲಕ್ಷಣವಾಗಿತ್ತು. ಸಾಲದೆಂದು ಬೆನ್ನ ಕಡೆಯಿಂದ ಬೀಸಿ ಬರುತ್ತಿದ್ದ ಕುಳಿರ್ಗಾಳಿ.

ರಾಕ್ಷಸ ತಾಲ್‌ನ ಅಂಚಿನಲ್ಲಿ ಐದಾರು ಬಣ್ಣಗಳ ಪಟ್ಟಿ- ನೇರಳೆ, ತಿಳಿ ನೀಲಿ, ತಿಳಿ ಹಸಿರು, ಬಿಳಿ ನಂತರ ತಾಲ್ ನಡುವಿನಲ್ಲಿ ಹೊಳಪಿನ ಕಡು ನೀಲಿ. ಈ ನೀರ್ದಾಣಕ್ಕೆ ಮತ್ತೊಂದು ಹೆಸರು ರಾವಣ ಹೃದಯ ಅನ್ವರ್ಥ ನಾಮ. ಇದೂ ರಾವಣನ ಹೃದಯದಂತೆ ರಾಗ ರಂಜಿತ, ಅವನ ಶಿವ ಭಕ್ತಿಯಂತೆ ಸ್ಥಿರ ಸಲಿಲ.

'ಇಲ್ಲಿ ನೋಡಿ! ಸೂರ್ಯನ ಬೆಳಕು ಹೇಗಿದೆ ನೋಡಿ!' ಎಂದು ಯಾರೋ ಏರುದನಿಯಿಟ್ಟು ಚಪ್ಪಾಳೆಯಿಕ್ಕಿ ಗಮನ ಸೆಳೆದರು. ಎಲ್ಲರೂ ಮನವನ್ನು ಬಲವಂತದಲ್ಲಿ ರಾವಣನ ಹೃದಯದಿಂದ ಕಿತ್ತು ಹೊರತಂದರೆ ಆ ಕ್ಷಣವೇ ಅದು ಪ್ರಕೃತಿಯ ಮತ್ತೊಂದು ಸೊಬಗಿನಲ್ಲಿ

ಕೇಳಿಸಿ ಕೊಂಡಿತು. ನಮ್ಮ ಬಲಗಿದ್ದ ಮಾಂಧಾತ ಪರ್ವತ ಶಿಖರಗಳ ಮೇಲಿನ ಹಿಮರಾಶಿಯ ಮೇಲೆ ಬಾಲ ಸೂರ್ಯನ ಹೊಂಬೆಳಕು ಬಿದ್ದು ಅವು ಚಿನ್ನದ ಗೋಪುರಗಳಾಗಿದ್ದವು. ನೋಡನೋಡುತ್ತಲೇ ಅವು ರಜತಾಚಲವಾದವು. ಪ್ರಕೃತಿ ನಮ್ಮ ಇರುವನ್ನು ಪ್ರಶ್ನಿಸಿದಂತಿತ್ತು. ನೀನಾರೋ ಹುಲುಮಾನವ? ನಮ್ಮನ್ನು ಪೂರ್ಣರೂಪದಲ್ಲಿ ನೋಡುವುದು ನಿನ್ನಳವಲ್ಲ. ಇದು ನಾವಾಗಿ ಕೃಪೆ ಮಾಡಿ ನಿನಗೆ ಕೊಟ್ಟ ದರ್ಶನ–ನಿನ್ನ ಶಕ್ತಿಗೆ ತಕ್ಕಂತೆ. ಇಷ್ಟಕ್ಕೇ ಈ ಪರಿ ಹಿಗ್ಗೇ? ಎಂದು ಗಿರಿ ಶಿಖರಗಳು, ನಿರ್ವಾಣವು ಕೇಳಿದಂತಿತ್ತು. ಇಂತಹ ಜಾಗಕ್ಕೆ ಒಂಟಿಯಾಗಿ ಬಂದಿದ್ದರೆ ಬುದ್ಧಿ ಭ್ರಮಣೆಯಾಗುತ್ತಿತ್ತು, ಇಲ್ಲವೇ ಜೀವ ಸಮಾಧಿಗಿಳಿದು ಮೇಲೇರಲಾಗದೆ ಲಯವಾಗಿ ಹೋಗುತ್ತಿತ್ತು. ಸಹಯಾತ್ರಿಗಳ ಮಾತು, ಸನಿಹದಲ್ಲಿದ್ದವರ ಸ್ಪರ್ಶದಿಂದಾಗಿ ಇದು ನಾವಿರುವ ಭೂಮಿಯ ಒಂದು ಭಾಗ– ಮನುಷ್ಯರು ಎಂಬ ಪ್ರಜ್ಞೆ ಮನವನ್ನು ಹಿಡಿದು ನಿಲ್ಲಿಸಿತ್ತು. ಮುಂದೆ ನೋಡಲಿದ್ದ ಕೈಲಾಸ ಪರ್ವತ ಹಾಗೂ ಮಾನಸ ಸರೋವರದ ದಿವ್ಯತೆಗೆ ಮನಸ್ಸನ್ನು ಅಣಿಗೊಳಿಸಲು ಪ್ರಕೃತಿದೇವಿಯು ಹಾಡಿದ ಭವ್ಯ ನಾಂದೀ ಗೀತೆಯಾಗಿದ್ದುವು ಮಾಂಧಾತ ಪರ್ವತ ಹಾಗೂ ರಾಕ್ಷಸ ತಾಲ್. ಇಬ್ಬರೂ ಮಹಾ ಶಿವಭಕ್ತರು. ಮಾಂಧಾತ ಮತ್ತು ರಾವಣ–ಕೈಲಾಸಯುಗಳದಲ್ಲಿ ನೆಲೆನಿಂತರೆನ್ನುವುದು ಪ್ರಾಕೃತಿಕ ಸೌಂದರ್ಯದ ತಾಣಗಳಿಗೆ ಮಾನವ ಕಲ್ಪನೆಯ ಅಲಂಕಾರಗೈದಂತೆ.

'ರಾಕ್ಷಸ ತಾಲ್ ನ ಟಿಬೆಟೀ ಹೆಸರು 'ಲಾಂಗಾಕ್ ತ್ಸೊ' – ಐದು ಬೆಟ್ಟಗಳ ಸರೋವರ. ಹೊರಗೆ ಕಾಣಬರುವುದು ಎರಡೇ ಬೆಟ್ಟಗಳು. ಅಂಕುಡೊಂಕಾದ ತೀರದ ಈ ಸರೋವರದ ಸುತ್ತಳತೆ ಸುಮಾರು ೧೨೫ ಕಿ.ಮೀ ಉದ್ದ ೨೦ ಕಿ.ಮೀ ಅಗಲದ ಈ ಸರೋವರದ ಹೆಚ್ಚುವರಿನೀರು ವಾಯುವ್ಯ ದಿಕ್ಕಿನಲ್ಲಿ ಸಟ್ಲೆಜ್ ನದಿಯಾಗಿ ಹೊರ ಹರಿಯುತ್ತದೆ. ನದಿಯ ಉಗಮ ಸ್ಥಾನ ಜೌಗಿನಿಂದ ಕೂಡಿದ್ದು ಸನಿಹದಲ್ಲಿ ಹಲವಾರು ಅಂತರಜಲ ಬುಗ್ಗೆಗಳು ಇವೆ. ಬೇಸಿಗೆಯಲ್ಲಿ ನಾವುಕಂಡ ರಮಣೀಯ ಶಾಂತ ಸರೋವರ ಬಿಸಿಲಕಾಲ ಮುಗಿದಂತೆ ಉಷ್ಣಾಂಶ ಕಡಿಮೆಯಾದಂತೆ ದಕ್ಷಿಣದ ಚಳಿಗಾಳಿ ಬೀಸಿಬಂದು ಸರೋವರವನ್ನು ಪ್ರಕ್ಷುಬ್ಧ ಮಾಡಿ ಹೆದ್ದರೆಗಳನ್ನೆಬ್ಬಿಸಿಬಿಡುತ್ತದೆಯಂತೆ. ರುದ್ರತೆ ತಾಂಡವಾಡುತ್ತಿದ್ದಿರಬೇಕು. ಇಡೀ ಚಳಿಗಾಲ ಸರೋವರದ ರಾಕ್ಷಸತನ ಪ್ರದರ್ಶನಗೊಳ್ಳುವುದು. ಹಿಮಗಾಲದಲ್ಲಿ ನೀರು ಹೆಪ್ಪುಗಟ್ಟಿ ಶಾಂತಿಯೇ ಮೈವೆತ್ತಂತೆ ಮತ್ತೆ ಸ್ತಬ್ಧತೆ. ಸರೋವರದ ತೀರದ ಗುಂಟ ಹಲವು ಬಾರಿ ಸುತ್ತಿ ಬಂದ ಪ್ರವಾಸೀ–ಶೋಧಕ ಶ್ರೀ ಪ್ರಣವಾನಂದರ ವರ್ಣನೆಯಂತೆ ರಾಕ್ಷಸ ತಾಲದ ತೀರಗಳಲ್ಲಿ ಭೂ ಶಾಸ್ತ್ರದ ಎಲ್ಲ ಪಾರಿಭಾಷಿಕ ಪದಗಳ–ಕೊಲ್ಲಿ, ಆಖಾತ, ಪರ್ಯಾಯ ದ್ವೀಪ, ಜಲಸಂಧಿ, ಭೂಶಿರ, ಭೂಕಂಠ–ಇತ್ಯಾದಿ–ಪದಗಳ ಮಾದರಿಗಳು ದೊರೆಯುತ್ತವೆ. ಅಂತೆಯೇ ಅದರ ಹಿಮಗಲ್ಲುಬಂಡೆಗಳೂ ವೈವಿಧ್ಯಮಯ.

ಟಕಲಾಕೋಟ್‌ನಿಂದ ೧೦೦ಕಿ.ಮೀ ದೂರದಲ್ಲಿರುವ ಮಾಂಧಾತ ಪರ್ವತ ಸಾಲಿನಲ್ಲಿ ಅತಿ ಎತ್ತರದ ಶಿಖರಗಳು ೨೫,೩೫೫ ಅಡಿ, ೨೨,೧೬೦ ಅಡಿಗಳಿಷ್ಟಿವೆ. ಮಾಂಧಾತ ಮುನಿಗಳು ಶಿವನನ್ನು ಕುರಿತು ತಪಸ್ಸು ಮಾಡಲು ಈ ಪರ್ವತಗಳಲ್ಲಿ ಕುಳಿತರೆಂದು ಪ್ರತೀತಿ. ಹಾಗಾಗಿ ಈ ಶ್ರೇಣಿಗೆ ಆ ಮುನಿಯ ಹೆಸರು. ಟಿಬೆಟೀ ಭಾಷೆಯಲ್ಲಿ 'ಗೊ' ಎಂದರೆ ಪ್ರಮುಖ 'ಲ್ಹಾ' ಎಂದರೆ ದೇವ – ದೇವ ಗೊರ್ಲಾ– ರಕ್ಷಕ ದೇವರ ಸನ್ನಿಧಿ. ಈ ದೇವರ ಹೆಸರು ಸಂಗ್ಬುಲ್. ಗುರ್ಲಾ–ಲಾ–ಅಥವಾ ಗುರ್ಲಾ ಪಾಸ್ ಎತ್ತರದಿಂದ(೧೬,೨೦೦ ಅಡಿಗಳು ಸುತ್ತಲಿನ ಪ್ರದೇಶದ ಸರ್ವತೋಮುಖ ದರ್ಶನ ಅತಿಶಯದ್ದಾಗಿರಬೇಕು. ಎದುರಿನ ಬಲಕ್ಕೆ ನೀಲಮಣಿಯಂತೆ ಹೊಳೆವ

ಮಾನಸ ಸರೋವರ. ಎಡಕ್ಕೆ ಅಷ್ಟ ಸುಂದರ ರಾಕ್ಷಸ ತಾಲ. ದೂರದ ಉತ್ತರಕ್ಕೆ ಕಾಣುವ ರಜತಾಲ ಕೈಲಾಸ ಶಿಖರದ ವೈಭವ ಪೂರ್ಣ ನಿಲವು. ದಕ್ಷಿಣಕ್ಕ ಬಸ್ಸಿಗಂಟಿದಂತ ಮೇಲೆದ್ದಿರುವ ಸಪ್ತಧ ದೈತ್ಯ ಮಾಂಧಾತ ಪರ್ವತ ಶಿಖರಗಳು. ಈ ನೋಟವೊಂದೇ ಸಾಕು ತಮ್ಮಲ್ಲಿಗೆ ಪ್ರವಾಸ ಕೈಗೊಳ್ಳುವಂತೆ ನಮ್ಮನ್ನು ಪ್ರಚೋದಿಸಲು.

ಕೈಲಾಸ ಮಾನಸ ಯಾತ್ರೆಯ ಆರಂಭದಿಂದಲೂ ಕೈಲಾಸ ಮಾನಸ ಸರೋವರದ ಬಗೆಗೆ ಮಾತ್ರವೇ ವಿವರ-ವಿಚಾರವಿನಿಮಯ ನಡೆದಿದ್ದು, ನಮ್ಮ ಲಕ್ಷ್ಯವೆಲ್ಲಾ ಇವುಗಳಲ್ಲೇ ಕೇಂದ್ರಿತವಾಗಿತ್ತು. ಒಂದೆರಡು ಬಾರಿ ರಾಕ್ಷಸ ತಾಲದ ಬಗ್ಗೆ ಪೌರಾಣಿಕ ಹಿನ್ನಲೆಯನ್ನು ಕುರಿತು ಯಾತ್ರಿಗಳಲ್ಲಿ ಚರ್ಚೆ ನಡೆದಿತ್ತು. ರಾವಣನು ವಿಸರ್ಜಿಸಿದ ನೀರು, ಅಪವಿತ್ರ ಜಲ ರಾಕ್ಷಸರ ಸರೋವರ ಎಂಬ ಪೂರ್ವಾಗ್ರಹ ಪೀಡಿತ ದೃಷ್ಟಿಕೋನ ಹಲವರಿಗಿತ್ತು. ಆದರೆ ನಾವೊಂದ್ವೆರು ಜನ ದಾಕ್ಷಿಣಾತ್ಯರಿಗೆ, ರಾವಣನು ಸಂಧ್ಯಾವಂದನೆಗಾಗಿ ನಿಂತನೆಂಬ ಕಥೆಯನ್ನು ಕೇಳಿದ್ದವರಿಗೆ(ಕುವೆಂಪು ಅವರ ರಾಮಾಯಣ ದರ್ಶನದ ಸಾಧಕ ರಾವಣನ ಪರಿಚಯವಿದ್ದ ನನಗೆ) ಈ ರೀತಿಯ ಹೀನಾಯ ಭಾವನೆಯಿರಲಿಲ್ಲವಾಗಿ ರಾಕ್ಷಸ ತಾಲ್ ಅನಿರೀಕ್ಷಿತ ಅವರ್ಣನೀಯ ಹರ್ಷ ಆನಂದ ನೀಡಿದ ನಿಸರ್ಗ ಸೌಂದರ್ಯ ತಾಣವಾಗಿತ್ತು. ಅಮಂಗಳ-ಅಪವಿತ್ರವೆಂಬ ಭಾವನೆ ಮಾನವ ಬುದ್ಧಿ ಮನಸ್ಸಿಗಷ್ಟೆ ಸೀಮಿತ ತಾನೇ! ಪ್ರಕೃತಿಯಲ್ಲಿ ಯಾವುದೂ ಅಮಂಗಳವಲ್ಲ, ಅಥವಾ ಅದುದ್ದೇ ಚೆಲುವಿಲ್ಲದಿಲ್ಲ. ನೋಡಿ ಆನಂದಿಸುವ ಸೌಂದರ್ಯ ದೃಷ್ಟಿ ಬೇಕಷ್ಟೆ. ಸಮದೃಷ್ಟಿಯಲ್ಲೋ ಒಟ್ಟಿನಲ್ಲಿ ದಕ್ಷಿಣದ ವ್ಯಕ್ತಿತ್ವವೊಂದು ಉತ್ತರದ ತುದಿಯ ಕೈಲಾಸ ಶಿಖರದಡಿಯಲ್ಲಿ ತನ್ನ ಹೃದಯವಿಟ್ಟ ಕಲ್ಪನೆಯೇ ರಮ್ಯವಾದುದು. ಭಾರತೀಯ ಸಮಷ್ಟಿ ಪ್ರಜ್ಞೆಯಲ್ಲಿ ರಾವಣನ ಚಿತ್‌ಶಕ್ತಿಯ ದ್ಯೋತಕವದು.

ಚೀನೀ ಗೈಡ್ ಚಾನ್ ಕೂಗಿ ಕೂಗಿ ಹೊರಡಿಸದಿದ್ದರೆ ಇನ್ನೂ ಬಹಳ ಹೊತ್ತು ನಿಲ್ಲುತ್ತಿದ್ದೆವೇನೊ. ಭಕ್ತರ ದರ್ಶನವನ್ನು ಮೊದಲು ಮಾಡಿ ನಂತರ ದೇವರ ಸನ್ನಿಧಿಗೆ ಬರಬೇಕೆಂಬ ಸಂಪ್ರದಾಯ ಇಂದು ಆಯಾಚಿತ ಹಾಗೂ ಅನಿವಾರ್ಯವಾಗಿ ನಡೆದಿತ್ತು. ರಾವಣ ಹೃದಯ ದರ್ಶನ, ಮಾಂಧಾತ ದರ್ಶನನಂತರವೇ ಮಾನಸ ಸರೋವರ ಮತ್ತು ಕೈಲಾಸ ಶಿಖರದರ್ಶನಕ್ಕೆ ಅವಕಾಶವಾಗಿತ್ತು.

ಬಸ್ಸು ನೂರಜುಗಲ್ಲಿನ ಕಚ್ಚಾ ರಸ್ತೆ-ಅಲ್ಲಲ್ಲ-ಇಂತರ ವಾಹನಗಳು ಹಾದು ಹೋದ ಜಾಡಿನಲ್ಲಿ ಮುಂದುವರಿದಂತೆ ಇಡೀ ದೇಹವು ತಲೆ ಚಿಪ್ಪಿನೊಳಗಿನ ಮೆದುಳೂ ಸಹ ವಿವಿಧ ರೀತಿಯ ಕಂಪನಕ್ಕೊಳಗಾಗಿತ್ತು. ಕಿಟಕಿ ಗಾಜುಗಳ ಅಲುಗಾಟದ ಸದ್ದಿನಿಂದ ತಲೆ ಧಿಮಗುಡುತ್ತಿತ್ತು. ಇದೇ ರೀತಿಯ ಮುಕ್ಕಾಲು ಗಂಟೆ ಪ್ರಯಾಣದ ಬಳಿಕ ಜೈದಿ ಶಿಬಿರದಲ್ಲಿ ಈ ವೈಬ್ರೇಟರ್ ನಿಂದ ತಾತ್ಕಾಲಿಕ ಬಿಡುಗಡೆ.

ನಾಲ್ಕು ತಿಂಗಳ ಕಾಯುವಿಕೆ, ಐದಾರು ವಾರಗಳ ತಯಾರಿ, ಕೆಲವು ದಿನಗಳ ಚಾರಣದ ನಂತರ ನನ್ನ ಅನೇಕ ವರ್ಷಗಳ ಕನಸು ನನಸಾಗಿತ್ತು. ಮಾನಸ ಸರೋವರದ ಬಳಿಸಾರಿದೆವು. ಕೆಲವೇ ನಿಮಿಷಗಳ ಹಿಂದೆ ನೋಡಿದ್ದ ಸೌಂದರ್ಯದ ನೆಲೆಬೀಡಾದ ರಾಕ್ಷಸ ತಾಲ್ ಶಿವನ ಕೈಯಲಗಿನಂತೆ ಹೊಳೆದು ಬುದ್ಧಿ, ಮನಸ್ಸು, ಹೃದಯಗಳಿಗೆ ಮಾಡಿದ ಶಸ್ತ್ರಕ್ರಿಯೆಯಿಂದಾಗಿ ಅವುಗಳಲ್ಲಿದ್ದ ಮಾಂದ್ಯತೆಯನ್ನು ನೀಗಿಕೊಂಡು ಬಸವಳಿದಿದ್ದ ಯಾತ್ರಿಗಳೆಲ್ಲಾ ಮಾಂತ್ರಿಕ ಶಕ್ತಿಗೊಳಗಾದವರಂತೆ

ಬಸ್ಸಿನಿಂದಿಳಿದು ಮಾನಸ ಸರೋವರದ ಅಂಚಿಗೆ ನಡೆದೆವು.

ಬಹುದೂರದವರೆಗೆ ಹರಡಿದ್ದ ವಿಶಾಲ ಸರೋವರ ಪ್ರಶಾಂತವಾಗಿತ್ತು, ಶಿವನ ಅಭಯ ಹಸ್ತದಂತೆ. ಆ ಜಲವಿಸ್ತಾರದ ನೀಲಿ ನಿಧಾನವಾಗಿ ಕಣ್ಣುಗಳನ್ನು ತುಂಬಿ ಅರಿವಿನಾಳಕ್ಕೆ ಹರಿದಿತ್ತು. ಹೃದಯ ಬುದ್ಧಿ ಮನಸ್ಸು ಸಮಾಹಿತವಾಗಿ ಸೌಂದರ್ಯಾನು ಸಂಧಾನ ನಡೆಸಿದ್ದವು. ಕಾಲವು ನಿಂತು ಅನಂತತೆಯ ಪರಿಚಯ ಮಾಡಿಕೊಟ್ಟಿತ್ತು. ನಾಲ್ಕೈದು ನಿಮಿಷಗಳೇ ಉರುಳಿರಬೇಕು. ಮನಸ್ಸು ಇಹಕ್ಕೆ ಬಂದ ನಂತರ ಎಲ್ಲರೂ ಮಾಡಿದ ಮೊದಲ ಕಾರ್ಯ– ಆಗಸಕ್ಕೆ ಕೈಯೆತ್ತಿ 'ಹರಹರ ಮಹಾದೇವ' ಎಂದು ಉಗ್ಗಡಿಸಿದುದು. ಎಲ್ಲರ ಕಣ್ಣಲ್ಲೂ ನೀರು. ಒಬ್ಬರನ್ನೊಬ್ಬರು ಬಿಗಿದಪ್ಪಿದೆವು. ಎಲ್ಲರ ಮುಖದಲ್ಲೂ ಧನ್ಯತಾಭಾವ. ಐದಾರು ನಿಮಿಷಗಳು, ನಮ್ಮ ಆವೇಶದ ಉದ್ಗಾರಗಳು ತಗ್ಗಿದಂತಾದುದು ಮತ್ತೆ ಪರಿತು. ನಮ್ಮ ಎಡ ಬದಿಯ ದಿಗಂತದಲ್ಲಿದ್ದ ಮೋಡ ಸರಿಯತೊಡಗಿ ದೂರದ ಕೈಲಾಸ ಶಿಖರದ ಬೆಳ್ಳಿ ಗುಮ್ಮಟ ನಿಧಾನವಾಗಿ ಅನಾವರಣಗೊಳ್ಳುತ್ತಿತ್ತು. ಪ್ರಕೃತಿ ಬಹು ನಾಟಕೀಯವಾಗಿ ಕೈಲಾಸಪತಿಯ ಸಭಾಸ್ಥಾನವನ್ನು ಪರಿಚಯಿಸಿದಳು. ಮೋಡದ ತೆರೆಯಲ್ಲಿನ ಮೋಹಕತೆಯನ್ನು ವಿಶದೀಕರಿಸಿದಳು.

ರಾಕ್ಷಸತಾಲದ ಅನುಭವ ಒಂದು 'ಶಾಕ್‌ಟ್ರೀಟ್‌ಮೆಂಟ್' . ಪ್ರಕೃತಿಯನ್ನು, ಪ್ರಪಂಚವನ್ನು ಹೊಸ ನಿಟ್ಟಿನಲ್ಲಿ ನೋಡುವಂತೆ ಪ್ರಚೋದಿಸಿದ ಅನುಭವ. ಮಾನಸ ಸರೋವರವಾದರೋ ನಮ್ಮನ್ನು ಈ ರೀತಿ ಧೃತಿಗೆಡಿಸಲಿಲ್ಲ. ಅಸ್ತಿತ್ವವನ್ನು ಪ್ರಶ್ನಿಸಲಿಲ್ಲ. ಬದಲಿಗೆ ಶಾಂತಿ-ಸಮಾಧಾನ ತಂದಿತ್ತು. ಕೇವಲ ಆರೇಳು ಕಿ.ಮೀ ಅಂತರದಲ್ಲಿರುವ ಎರಡು ಸರೋವರಗಳು ನಮ್ಮಲ್ಲಿ ಈ ರೀತಿಯ ಭಿನ್ನ ಪ್ರತಿಕ್ರಿಯೆ ಮೂಡಿಸುವ ಕಾರಣ ಬಹುತೇಕ ಅವುಗಳ ಬಗೆಗೆ ನಮಗಿರುವ ಸಾಂಸ್ಕೃತಿಕ ಹಿನ್ನೆಲೆಯ ಭಾವನೆಗಳೇ ಆದರೂ ಭೌಗೋಳಿಕ ಕಾರಣವೂ ಉಂಟು.

ರಾಕ್ಷಸತಾಲದ ದಕ್ಷಿಣಕ್ಕೆ ಬಯಲು ಇದ್ದು ಅತ್ತ ಕಡೆಯಿಂದ ಬೀಸಿ ಬರುವ ಚಳಿಗಾಳಿ ಸರೋವರದ ಏರಿಯ ಮೇಲೆ ನಿಂತವರಿಗೆ ನಡುಕ ತರುವುದು ಸ್ವಾಭಾವಿಕ. ಆದರೆ ಮಾನಸಕ್ಕೆ ಸುತ್ತಲೂ ಬೆಟ್ಟಗಳಿದ್ದು ಅದರಲ್ಲೂ ದಕ್ಷಿಣದ ತಣ್ಣನೆಯ ಬೀಸುಗಾಳಿಗೆ ತಡೆಯಾಗಿ ಮಾಂಧಾತ ಪರ್ವತ ಸಾಲು ರಕ್ಷಣೆ ನೀಡುತ್ತವೆ. ಇಲ್ಲಿ ನಿಂತವರಿಗೆ ತೊಟ್ಟಿಲಲ್ಲಿರುವಂತೆ ಕ್ಷೇಮಭಾವ ಮೂಡುವುದು ಸಹಜ. ರಾಕ್ಷಸತಾಲದ ಮಧ್ಯೆ ತಲೆಯೆತ್ತಿರುವ ಬೋಳು ಗುಡ್ಡಗಳಂತೆ ಮಾನಸದ ಮಧ್ಯದಲ್ಲಿ ಯಾವ ಅಡೆತಡೆಯೂ ಇಳದೆ ದೃಷ್ಟಿ ಸರೋವರದ ಉದ್ದಗಲಕ್ಕೂ ಹರಿದಾಡಬಹುದು. ಆಕಾಶದ ದಟ್ಟನೀಲಿಯನ್ನೇ ಸೀರೆಯಾಗಿ ಸರಸ್ಸಿಗೆ ಉಡಿಸಿ ಅದರಲ್ಲಿ ಬೆಳಗಿನ ಚಿನ್ನ ಬೆಳ್ಳಿಯ ಎಳೆ ಎಳೆದು ಕಿರುತೆರೆಗಳ ಬೆಳ್ಳಿ ಬುಟ್ಟಾಗಳನ್ನು ನೇಯುವ ರವಿ, ಸಂಜೆಗೆ ಮುಗಿಲಿನ ಬಣ್ಣ ಬಣ್ಣದ ಸೆರಗನ್ನು ಹೊದಿಸುವನು. ಈ ಸೀರೆಯುಟ್ಟ ಮಾನಸ ಸರಸಿಯ ದಿವ್ಯ ಸೌಂದರ್ಯವನ್ನು ಮನಗಾಣಲು ಸಾಧ್ಯವಾಗುವುದು ಅಡೆತಡೆಯಿಲ್ಲದ ನೀರ ಹಾಸಿನಿಂದಾಗಿಯೇ. ಮನವನ್ನು ಸಮಾಧಿಗಿಳಿಸುವ ವಿಶಾಲ ಹಾಸು.

ಮೊದಲಿಗೆ ರಾಕ್ಷಸತಾಲ ಮತ್ತು ಮಾನಸ ಸರೋವರ ಒಂದೇ ಜಲರಾಶಿಯಾಗಿದ್ದು, ನಂತರದಲ್ಲಿ ಉತ್ಕ್ರಾಂತಿಯಿಂದಾಗಿ ಜಲರಾಶಿಯ ನಡುವೆ ಬೆಟ್ಟಗಳ ಸಾಲು ಎದ್ದು ಭಿನ್ನ ಸರೋವರಗಳಾದುವೆಂಬ ವಿಚಾರಸರಣಿಗೆ ಅನೇಕ ವಾಸ್ತವಾಂಶಗಳ ಆಧಾರವಿದೆ. ಎರಡೂ ಸರೋವರಗಳ

ನೀರಿನ ಗುಣ, ಮಣ್ಣಿನ ಗುಣ, ರಚನೆ, ಭೂಮಟ್ಟಗಳು ಒಂದೇ. ಪರಿಸರದ ಹವಾಮಾನ ಒಂದೇ. ಮಾನಸ ಸರೋವರದಿಂದ ಹೊರಹರಿದು ಬರುವ ಹೆಚ್ಚಿನ ನೀರು 'ಗಂಗಾಛು' ನದಿಯಾಗಿ ಹರಿದು ಸುತ್ತಿಬಳಸಿ, ಒಂಬತ್ತು ಕಿ.ಮೀ ನ ದಾರಿ ಸವೆಸಿ ರಾಕ್ಷಸತಾಲಕ್ಕೆ ಸೇರುವುದು. ಜೊತೆಗೆ ಭೂಗತ ತೊರೆಗಳು ಕೂಡ ಮಾನಸ ಸರೋವರದಿಂದ ನೀರನ್ನು ರಾಕ್ಷಸತಾಲಕ್ಕೆ ಒದಗಿಸುತ್ತವೆ.

ಟಿಬೆಟೀ ಪುರಾಣದಲ್ಲಿರುವಂತೆ ಲಾಂಗಕ್ ತ್ಸೊ (ರಾಕ್ಷಸತಾಲ) ಮೊದಲು ರಾಕ್ಷಸರ ಸರೋವರವಾಗಿದ್ದು ಅಪವಿತ್ರವಾಗಿತ್ತು. ಒಮ್ಮೆ ದೇವತೆಗಳ ಪವಿತ್ರ ಸರೋವರ ಮಾನಸಸದಲ್ಲಿದ್ದ ಎರಡು ಮೀನುಗಳು ಜಗಳವಾಡುತ್ತ ಹೊರಬಿದ್ದು ಒಂದನ್ನೊಂದು ಅಟ್ಟಿಸಿಕೊಂಡು ಬಂದು ರಾಕ್ಷಸರ ಸರೋವರದಲ್ಲಿ ಬಿದ್ದವು. ಅವುಗಳು ಬಂದ ದಾರಿಯಲ್ಲೇ ಮಾನಸದ ನೀರೂ ಹರಿದುಬಂದು ರಾಕ್ಷಸ ಸರೋವರಕ್ಕೆ ಸೇರಿತು. ಅಲ್ಲಿನ ಅಪವಿತ್ರತೆಯನ್ನು ತೊಡೆದುಹಾಕಿತು. ಅಂದಿನಿಂದ ರಾಕ್ಷಸತಾಲದ ನೀರನ್ನು ಎಲ್ಲ ಜೀವಿಗಳು ಕುಡಿಯುವಂತಾಯಿತು. ಹಿಂದೂ ನಂಬಿಕೆಯಂತೆ ರಾಕ್ಷಸತಾಲ ಇಂದಿಗೂ ಅಪವಿತ್ರವಾಗಿಯೇ ಉಳಿದು ಅದಕ್ಕೆ ಸಲ್ಲಬೇಕಾದ ಮಾನ್ಯತೆ ಇಲ್ಲದೇ ಹೋದರೂ ಟಿಬೆಟೀಯರ ನಂಬಿಕೆಯನುಸಾರ ಅದು ಪವಿತ್ರವಾದುದರ ಕುರುಹಾಗಿ ಅದರ ದಂಡೆಯ ಮೇಲಿರುವ 'ಚೆಪ್ಗ್ಯ ಗೊಂಪಾ' ನಿಂತಿದೆ. ಹಿಮಗಾಲದಲ್ಲಿ ಅದರ ಹೆಪ್ಪುಗಟ್ಟಿದ ನೀರು ಉದ್ದಗಲಕ್ಕೂ ಜನರ ಓಡಾಟ, ಯಾಕ್, ಕುದುರೆ, ಕುರಿಗಳ ಮೇಲೆ ಸಮಾನು ಸಾಗಾಟ, ವ್ಯಾಪಾರ, ತಾಲದ ಮಧ್ಯದ ದ್ವೀಪಗಳಲ್ಲಿ ಸಿಗುವ ಬಾತುಕೋಳಿಗಳ ಮೊಟ್ಟೆ ಸಂಗ್ರಹಣೆ ಎಲ್ಲವೂ ನಡೆಯುತ್ತದೆ.

ಮತ್ತೊಮ್ಮೆ ಸರದಾರ ಡೇವಿಡ್‌ನ ಅವಸರಿಸುವ ಕೂಗಿಗೆ ಓಗೊಟ್ಟು ಜೈದಿ ಶಿಬಿರದ ಬಳಿ ಮರಳಿದ್ದಾಯಿತು. ಇದೇ ಜಾಗದಲ್ಲಿ ಗೆಳತಿ ನಿರ್ಮಲಾದೇವಿ ಹಾಗು ಬಂಗಾಳದ ಅರ್ಕಬ್ರತ ಚಟರ್ಜೀ ಅವರು ವೈದ್ಯಕೀಯ ಕಾರಣಕ್ಕಾಗಿ ಎರಡು ದಿನ ತಂಗುವವರಿದ್ದರು. ಮಾನಸ ಸರೋವರದ ಪ್ರದಕ್ಷಿಣೆಗೆ ಅನುಮತಿ ಸಿಕ್ಕಿರಲಿಲ್ಲ. ಇದುವರೆಗೂ ಕೇವಲ ಪುರುಷ ಪ್ರಯತ್ನದಲ್ಲಿ ಶ್ರದ್ಧೆಯಿದ್ದವಳಿಗೆ ದೃಢ ಸಂಕಲ್ಪದಲ್ಲಿ ವಿಶ್ವಾಸವಿದ್ದವಳಿಗೆ ಅದೃಷ್ಟದಾಟದ ಬಗೆಗೂ ನಂಬಿಕೆ ಮೂಡತೊಡಗಿತು.

ರಜೆ ಸಿಗದೆ ಮೈಸೂರಿನಲ್ಲೇ ನಿಂತ ಪತಿಯವರು, ದೆಹಲಿಯವರೆಗೆ ಬಂದು ವೈದ್ಯಕೀಯ ತಪಾಸಣೆಯಲ್ಲಿ ತೇರ್ಗಡೆಯಾಗದೆ ಹಿಮುರುಗಿದ ಇಬ್ಬರು ಅಭ್ಯರ್ಥಿಗಳು, ಅಲ್ಮೋರಾವರೆಗೆ ಬಂದು ಅಪಘಾತಕ್ಕೀಡಾಗಿ ಮರಳಿದ ಸಹಯಾತ್ರಿಯೊಬ್ಬರು, ಗುಂಜಿಯಲ್ಲಿನ ತಪಾಸಣೆಯಲ್ಲಿ ಪರಿಕ್ರಮಾಗೆ ಅನುಮತಿ ಸಿಗದೆ ಕೇವಲ ದರ್ಶನ ಮಾತ್ರ ಮಾಡಲು ಬಂದ ಇಬ್ಬರು ಯಾತ್ರಿಗಳು–ಇಂತೆಲ್ಲ ಕಾರಣಕ್ಕಾಗಿ ಹಿಂದುಳಿದವರನ್ನು ನೋಡಿದ ನನಗೆ ಮಾನಸ ಸರೋವರ–ಕೈಲಾಸ ಪರ್ವತದ ಪ್ರದಕ್ಷಿಣೆಯ ಅದೃಷ್ಟ ಪಿದ್ದರೆ ಸಾಕು ಎಂದು ಹಾರೈಸುವಂತಾಗಿತ್ತು. ಸಿಕ್ಕಿದಷ್ಟಕ್ಕೆ ಧನ್ಯತೆಯೂ ಬಂದಿತ್ತು. ಮುಂದಿನ ಪ್ರವಾಸದ ಪ್ರತಿಕ್ಷಣವನ್ನೂ ಪೂರ್ಣ ರೂಪದಲ್ಲಿ ಅನುಭವಿಸಿ ಹೃದ್ಗತ ಮಾಡಿಕೊಳ್ಳುವ ಸಂಕಲ್ಪವೂ ದೃಢವಾಗುತ್ತಿತ್ತು.

ಜೈದಿಯಿಂದ 'ಹೋರೆ' ಶಿಬಿರಕ್ಕೆ ಎರಡು ಗಂಟೆಗಳ ಬಸ್ ಪ್ರಯಾಣ ಕಣ್ಣಿನ ಕ್ಯಾಮರಾ ಮನಃ ಪಟಲದ ಮೇಲೆ ಪರಿಸರದ ದೃಶ್ಯಗಳನ್ನು ನಿರಂತರ ಕ್ಲಿಕ್ಕಿಸುತ್ತಿತ್ತು. ಎಂಟು ಕಿ.ಮೀ ನ ಬೋಳು ದಾರಿ ಸವೆದ ಮೇಲೆ ದೂರದಲ್ಲಿ ಕಂಡದ್ದು 'ಪರಯಾ' ಬಯಲು. ಕೈಲಾಸ

ಪರ್ವತ ಮತ್ತು ಮಾನಸ ಸರೋವರದ ನಡುವೆ ಇರುವ ಈ ಬಯಲು ಪ್ರದೇಶದ ಹುಲ್ಲುಗಾವಲುಗಳಲ್ಲಿ ಬೇಸಿಗೆಯ ಕಾಲದಲ್ಲಿ ದನಗಾಹಿಗಳು ತಮ್ಮ ಕಪ್ಪು ಗುಡಾರಗಳನ್ನು ಹಾಕಿ ಮಂದೆಗಳನ್ನು ಮೇಯಿಸುವರು. ಒಮ್ಮೊಮ್ಮೆ ಟಿಬೆಟಿನ ವಿಶಿಷ್ಟ ಪ್ರಾಣಿ 'ಖ್ಯಾಂಗ್' – ಕಾಡು ಕುದುರೆ–ಕಾಡು ಕತ್ತೆಯ ಮಿಶ್ರ ತಳಿ –ಇಲ್ಲಿ ಮೇಯುವುದನ್ನು ಕಾಣಬಹುದು. ಸಪಾಟದ ಮೈದಾನಗಳು ವಿಮಾನಗಳು ಸಲೀಸಾಗಿ ಹಾರಾಟ ಮಾಡಬಹುದಾದಷ್ಟು ವಿಸ್ತಾರವಾಗಿವೆ. ಈ ಬಯಲಿನಲ್ಲಿ ಅಲೆಮಾರಿಗಳ ಐದಾರು ಡೇರೆಗಳು ಕಂಡು ಬಂದವು. ಡೇರೆಯ ಮುಂದೆ ವಯಸ್ಸಾದ ಹೆಂಗಸರು ಕಾಲು ಚಾಚಿ ಕುಳಿತು ತಕಲಿಯಲ್ಲಿ ಉಣ್ಣೆಯ ದಾರವನ್ನು ಹೊಸೆಯುತ್ತಾ ಹರಟುತ್ತಿದ್ದರು. ಅಲ್ಲೇ ಆರು ಏಳು ಮಕ್ಕಳು ಆಟವಾಡುತ್ತಿದ್ದವು. ಹೆಂಗಸರ ಕಾಲ ಬಳಿ ಮೂರು ಭೂತಾಕಾರದ ಮ್ಯಾಸ್ಟಿಫ್ ನಾಯಿಗಳು ಬಿಸಿಲು ಕಾಯಿಸುತ್ತಾ ಮಲಗಿದ್ದವು. ದನಗಾಹಿಗಳ ಗುಂಪಿನಲ್ಲಿ ನಾಯಿಗಳು ಅಮೂಲ್ಯ ನಿಧಿಯಂತೆ. ಮಂದೆ ಕಾಯಲು, ಕಳ್ಳಕಾಕರೊಡನೆ ಹೋರಾಡಲು, ಮಕ್ಕಳ ಮೇಲೆ ಕಣ್ಣಿಡಲು, ಮುದುಕರಿಗೆ ಸಂಗಾತಿಯಾಗಿ ಕುಟುಂಬದ ಸದಸ್ಯರಷ್ಟೇ ಮಹತ್ವ ಪಡೆಯುತ್ತವೆ. ಅಂತೆಯೇ ಅಪರಿಚಿತರಿಗೆ ಯಮಕಿಂಕರರಂತೆ ಉಗ್ರರೂಪಿಗಳು, ಸಿಗಿದು ಹಾಕಲು ಹಿಂಜರಿಯವು.

ಕಚ್ಚಾ ರಸ್ತೆಯ ಕಲ್ಲುಗಳ ಮೇಲೆ ಸಾಗಿದ್ದ ಬಸ್ಸಿನಲ್ಲಿ ಇನ್ನೂ ಎಷ್ಟು ದೂರ ಈ ಕಂಪನದ ಪಯಣ ಎಂದುಕೊಳ್ಳುತ್ತಿದ್ದಾಗಲೇ ಬಸ್ಸು ಬಯಲಿನಲ್ಲಿದ್ದ ಒಂದು ಕಾಂಪೌಂಡ್‌ನಲ್ಲಿ ನುಗ್ಗಿ ಗಕ್ಕೆಂದು ನಿಂತಿತು. ಎದುರಿಗೆ ೩ ಕೋಣೆಯ ಸಾಲು, ಪಕ್ಕಕ್ಕೆ ಮತ್ತೂ ಮೂರು ಕೋಣೆ ಸಾಲೊಂದು. ಅದೇ ಹೋರೆ! ನಮ್ಮ ತಂಗುದಾಣ?! ಅಲ್ಲಾಗಲೇ ನೆರೆದಿದ್ದ ಹೋರೆಯ 'ಸ್ವಾಗತ ಸಮಿತಿ'ಯನ್ನು ಕಂಡು ಹೌಹಾರಿತು ಮನ. ದೇಹವು 'ಬಸ್ಸಿನಲ್ಲಿ ಕುಳಿತು ನಖಶಿಖಾಂತ ಕಂಪಿಸಿದ್ದು ಸಾಕು ಕೆಳಗಿಳಿಯುವಾ' ಎಂದರೆ (ಮನಸ್ಸು) ಅಲ್ಲಿ ನೆರೆದಿದ್ದ ಜನರನ್ನು ನೋಡಿದ ಮನಸ್ಸು 'ಬಸ್ಸಿನೊಳಗೇ ಕುಳಿತಿರುವಾ' ಎಂದು ಸ್ವರಕ್ಷಣೆಯ ಭಾವಕ್ಕೆ ತೆಕ್ಕೆ ಬಿದ್ದಿತ್ತು. ಆದರೆ ಗುರಿ ಮುಟ್ಟಿದ ಮೇಲೆಯೂ ಹಾದಿಯಲ್ಲೇ ನಿಲ್ಲುವುದಂತೂ ಸಾಧ್ಯವಿಲ್ಲವಲ್ಲ. ಮನಸ್ಸು ಗಟ್ಟಿಮಾಡಿ ಕೆಳಗಿಳಿದೆವು.

ಮೊದಲ ಬಾರಿಗೆ ಶಿವನ ಪರಿವಾರದ ನಿಕಟ ಪರಿಚಯವಾಯಿತು. ನಾವಿಳಿದುಕೊಂಡ ಮನೆಯ ಅಂಗಳಕ್ಕೆ ದೂರದ ಹಳ್ಳಿಗಳಿಂದ ಬಂದಿದ್ದ ಈ ಹಳ್ಳಿಗರು ನಮಗಾಗಿ ಕುದುರೆಗಳನ್ನು ಬಾಡಿಗೆಗೆ ತರುವವರಿದ್ದರು. ಟಿಬೆಟ್ಟಿನಲ್ಲೇ ಅತಿ ಹಿಂದುಳಿದ ಬುಡುಕಟ್ಟಿನವರಿರಬೇಕು. ಅಥವಾ ಸಭ್ಯತೆಯ ಗಾಳಿ ಬೀಸದ ನಿಸರ್ಗ ಶಿಶುಗಳಿರಬೇಕು. ಅವರ ಇರಸರಿಕೆ, ಪೊಬಚುತನ, ಅಪ್ರೌಢ ನಡುವಳಿಕೆ, ಎಂದೂ ನೀರೂ ಕಾಣದ ಉಡುಪುಗಳು, ಹತ್ತಿರ ಬಂದರೆ ಮಾಂಸಾಹಾರಿಯ ವಿಶಿಷ್ಟ ವಾಸನೆ, ಕೈಸನ್ನೆಯ ಸಂಭಾಷಣೆ, ಸಾಲದೆಂದು ಅವರ ನಡುಪಟ್ಟಿಯಲ್ಲಿ ತೂಗಾಡುತ್ತಿದ್ದ ಕತ್ತಿ ಕಠಾರಿಗಳು. ಇವರ ಜೊತೆ ಎರಡು ದಿನದ ಕಾಲ್ನಡಿಗೆ ಹೇಗೆಂದು ಹೆದರಿದ್ದೆವು. ಚಿಕ್ಕ ಮಕ್ಕಳಿಗೂ ಚಾಕು, ಕೋಲು, ಗಾಜಿನ ಚೂರುಗಳೇ ಆಟಿಕೆಗಳು! ಇವರು ರುದ್ರರು–ಭಯಂಕರರು.

ಮೊದಲೇ ನಿರ್ಧರಿಸಿದ್ದಂತೆ 'ಬಿ' ಗ್ರೂಪಿನವರು ಸಾಮಾನು ಸರಂಜಾಮು ಸಹಿತ ಇಳಿದುಕೊಂಡು 'ಎ' ಗ್ರೂಪಿಗೆ ಸುಖ ಪ್ರಯಾಣ ಹಾಗೂ ಕೈಲಾಸ ಶಿಖರದ ಪೂರ್ಣದರ್ಶನಕ್ಕಾಗಿ ಹಾರೈಸುತ್ತಾ ವಿದಾಯ ಹೇಳಿದಾಗ ನೆಂಟರನ್ನು ಕಳಿಸಿ ಕೊಟ್ಟಂತಾಗಿ ಮನಸ್ಸು ಭಣಗುಟ್ಟಿತ್ತು. ಹದಿನೇಳು ದಿನಗಳ ಒಡನಾಟದ ನಂತರ ಮೊದಲ ಬಾರಿಗೆ ಅಗಲಿಕೆಯ ಅನುಭವ. ಎಲ್ಲರೂ

ಮತ್ತೆ ಕ್ಷೇಮವಾಗಿ ಸುಮುಖಿರಾಗಿ ಒಂದಾಗುವ ಹರಕೆ ಹೊತ್ತೆವು.

ಇಂದು ಮಧ್ಯಾಹ್ನದ ಊಟ ಸ್ವಯಂಪಾಕ. ಬಹಳ ದಿನಗಳ ನಂತರ ಅಡಿಗೆ ನಾವೇ ಮಾಡಿಕೊಳ್ಳಬೇಕಾದ ಸನ್ನಿವೇಶ, ಮಾಡಿದ್ದು ? ಪುಟಗೋಸಿ ಮ್ಯಾಗ್ಗಿ ಸೂಪ್ ಮತ್ತು ಮ್ಯಾಗ್ಗಿ ನೂಡಲ್ಸ್. ಏನೋ ಸಾಧಿಸಿದ ಹೆಮ್ಮೆ ಅಲ್ಲಿನ ಪರಿಸ್ಥಿತಿಗೆ ಅದೂ ಹೆಚ್ಚೇ! ಟಕಲಾಕೋಟ್‌ನ ಬುರಾಂಗ್ ಹೋಟೆಲಿನಿಂದ ತಂದ ಪಾತ್ರೆಗಳಲ್ಲಿ ನಮ್ಮಲ್ಲಿದ್ದುದು ಎರಡೇ. ಚಿಕ್ಕದು, ನೀರು ಕಾಯಿಸಲು ಮತ್ತು ಹಾಲಿನ ಪುಡಿಯಿಂದ ಹಾಲು ಮಾಡಲು. ಮತ್ತೊಂದರಲ್ಲಿ ಮಿಕ್ಕೆಲ್ಲ ಪಂಚ ಭಕ್ಷ್ಯ ಪರಮಾನ್ನಗಳೂ. ಅಗ್ನಿ? ಸೀಮೆ ಎಣ್ಣೆಯಿದ್ದ ಕುಡಿಕೆಯ ಪಕ್ಕದಿಂದ ಹೊರಟುಕೊಂಡ ಕೊಳವೆಯ ತುದಿಯಲ್ಲಿ ಅತ್ತಿತ್ತ ಹರಿದಾಡುವ ಉರಿನಾಲಗೆ. ೧೯ ನೇ ಶತಮಾನದ ಸ್ಟೌ ಇರಬೇಕು. ಪಾತ್ರೆಗೆ ಬಗಲಿನಿಂದ ಕಾವು ತಗುಲಿ ನೀರು ಕುದಿಯಬೇಕು. ಕುದಿಯುವ ಮುಂಚೆಯೇ 'ಆಯಿತೇ ನಿಮ್ಮ ಅಡಿಗೆ? ಸ್ಟೌ ಇತ್ತ ಕೊಡಿ' ಎಂದು ಅವಸರಿಸುವ ಶಿಬಿರ ವ್ಯವಸ್ಥಾಪಕ. ಪ್ರಥಮ ಬಾರಿಗೆ ಗಂಜಿಯಂತಹ ಸೂಪನ್ನು ತಟ್ಟೆಯಲ್ಲಿ 'ತಿಂದ' ಮಜಾ ! ನಂತರ ಅದೇ ಮಸಾಲೆಯ ನೂಡಲ್ಸ್. ರಾತ್ರಿಗೆ ಮತ್ತದೇ ಸೂಪ್, ನೂಡಲ್ಸ್. ಮಾಡಿದ್ದುಣ್ಣುವ ಮಹರಾಯರೇ ಆಗಿದ್ದೆವೆಲ್ಲರೂ. ಈ ಸೂಪ್ ನೂಡಲ್ಸ್‌ನ ಚಕ್ಕರ್ ಆರೇಳು ದಿನಗಳವರೆಗೆ ಅನುಭವಿಸಬೇಕೆಂಬ ಜ್ಞಾನೋದಯವಾಗಿ ಇವೆರಡಕ್ಕೇ ಸುಳ್ಳಿನ ಈರುಳ್ಳಿ ಹುಳಿ, ಹಾಸ್ಯದ ಪಾಯಸ, ಉಪಚಾರದ ಉಪ್ಪಿನಕಾಯಿ, ಬಾಯಿತುಂಬಿ ಹೇಳಿದ ಮೊಸರು ಭರ್ಜರಿಯಾಗಿ ಸೇರಿಸುತ್ತಿದ್ದೆವು. ಆಗೊಮ್ಮೆ ಈಗೊಮ್ಮೆ ಪ್ರಿಕುಕ್ಡ್ ಸೂಜಿ ಹಲ್ವ, ಪೌವ್ವಾ ಖೀರ್(ಪಾಡರ್ ಹಾಲಿನಲ್ಲಿ ನೆನೆದ ಅವಲಕ್ಕಿಯಷ್ಟೆ?) ಅರ್ಧ ಬೆಂದ ಹೆಸರು ಬೇಳೆಯ ಖಿಚಡಿ ತಟ್ಟೆಯಲ್ಲಿ ಕಂಡು ಬರುತ್ತಿದ್ದವು. ಒಂದೇ ಒಂದು ಬಾರಿ ಉಪಮಾ–ಅಬ್ಬೇಪಾರಿ ಉಪ್ಪಿಟ್ಟು–ತಿಂದಾಗ ಮನೆಯಲ್ಲಿ ಮಾಡಿದ ಉಪ್ಪಿಟ್ಟನ್ನು 'ಉಪ್ಪಿಂಡ' ಎಂದು ಇನ್ನೆಂದೂ ಮೂದಲಿಸಬಾರದೆಂದು ನಿರ್ಧರಿಸಿದೆ. ಮನೆಯಲ್ಲೇ ಮಾಡಿಕೊಂಡು ತಂದಿದ್ದ ಹುಳಿಯನ್ನದ ಗೊಜ್ಜಿನಲ್ಲಿ ತಯಾರಿಸಿದ ಪುಳಿಯೊಗರೆ ಕೆಂಪು ಬಣ್ಣದ ಪುಳಿಮುದ್ದೆಯಾಗಿ ಮಾರ್ಪಾಡಾಗಿದ್ದರೂ ಎಲ್ಲರೂ ನುಂಗುತ್ತಲೇ ಚಪ್ಪರಿಸಿ ಕೊಟ್ಟ ಹೆಸರು 'ಇಮಲಿಕಾ ಲಾಲ್ ಹಲ್ವಾ' . ಹಳೆಯ ಕಾಲದ ವಿವಿಧ ನಮೂನೆಯ ಒಲೆಗಳ ಮೇಲೆ ಒಂದೊಂದು ಹೊತ್ತಿಗೆ ಒಂದೊಂದು ರೀತಿಯಲ್ಲಿ ಅನಿರೀಕ್ಷಿತ ಪರಿಣಾಮದ ಅಡುಗೆಯ ದಾಸೋಹ. ಶಿವದತ್ತ–ಶಿವಾರ್ಪಿತ ಸುಗ್ರಾಸ ಭೋಜನ ನಮಗೆ. ಏಳು ದಿನದ ಸ್ವಯಂಪಾಕದ ವೈಖರಿಯ ಅನುಭವಗಳು, ಬಾಳಿನುದ್ದಕ್ಕೂ ಮಾಡಬೇಕಾದ ಅಡಿಗೆ ಕೆಲಸದ ಬೇಸರಿಕೆಯನ್ನು ನೀಗುವ ಪ್ರಥಮ ದರ್ಜೆಯ ಹಾಸ್ಯ ಪ್ರಸಂಗಗಳು.

ಮತ್ತದೇ ಬೇಸರದ ಊಟವಾದರೂ ಮತ್ತದೇ ಸಂಜೆಯಾಗದಿದ್ದ ಅಪೂರ್ವ ಸಂಧ್ಯಾ ಸಮಯಗಳು. ಒಂದೊಂದು ಸಂಜೆಯೂ ಹತ್ತು ರೀಲುಗಳ ಫೋಟೋ ತೆಗೆಯುವಂತಹವು. ಸೂರ್ಯದೇವನ ಕೃಪೆಗಾಗಿ ತಪಗೈದವರಿಗೂ ಸಿಗುವುದೋ ಇಲ್ಲವೋ ಅಂತಹ ದೃಶ್ಯಗಳು ನಮಗಾಗಿ ಆಗಸದಲ್ಲಿ ತೆರೆದು ಕೊಂಡಿದ್ದವು. ಶುಭ್ರ ನೀಲ ಪರದೆಯ ಮೇಲೆ ನಮ್ಮ ಕಲ್ಪನೆಗೆ ತಿದಿಯೊತ್ತುವ ನೇಸರ. ನೋಡ ನೋಡುತ್ತಲೇ ಮೋಡಗಳ ಆಕಾರ ಬದಲಿಸುತ್ತ ನವ ನವೋಲ್ಲೇಖನ ಮಾಡುವ ಕವಿ–ಮಾರುತ. ಸ್ವರ್ಗ ದರ್ಶನ ನೀಡಿದ ಸಂಜೆಗಳು.

ಟಿಬೆಟ್ಟಿನ ಮೊದಲ ಎರಡು ರಾತ್ರಿಗಳನ್ನು ಟಕಲಾಕೋಟ್‌ನ ವಿದ್ಯುತ್ ದೀಪದಲ್ಲಿ,

ಹೋಟೆಲಿನ ಸುಪ್ಪತ್ತಿಗೆಯಲ್ಲಿ, 'ಟಾಯ್ಲೆಟ್ಟಿ'ನ ಸೌಲಭ್ಯದೊಂದಿಗೆ ಕಳೆದಿದ್ದೆವು. ಯಾತ್ರೆಯ ನಿಜವಾದ ಅನುಭವ, ಜನ ವಸತಿಯ ಪರಿಚಯವಾದದ್ದು ಹೊರೆಯಲ್ಲಿ, ಮೇಣದ ಬತ್ತಿಯ ಮಿಣುಗುತ್ತಿದ್ದ ಬೆಳಕಿನಲ್ಲಿ. ಹೊರಗೆ ಆಷಾಢ ಮಾಸದ ಅಮಾವಾಸ್ಯೆ ಕತ್ತಲು ಕಾರಿರುಳು. ಹಗಲಿನ ಬಾನ ಬಣ್ಣಗಳಂತೆ ರಾತ್ರಿಯ ಕಪ್ಪೂ ಸಾಂದ್ರ. ಕೈಯಲ್ಲಿ ಮೊಗೆಯುವಷ್ಟು. ವಿರಳ ಹವೆಯಿಂದಾಗಿ ಆಕಾಶದಲ್ಲಿನ ನಕ್ಷತ್ರಗಳು ತಲೆಯನ್ನು ಸವರಿದಂತೆ ನಿಕಟ, ಸ್ಪಷ್ಟ. ಜಗತ್ತಿನ ಛಾವಣಿಯ ಮೇಲೆ ನಿಂತವರಿಗೆ ತಾರೆಗಳು ಕೈಗೆಟುಕದಿದ್ದಾವೇ? ಚಳಿ ಹೆಚ್ಚಾದಂತೆನಿಸಿ ಬೆಚ್ಚಗಿನ ಹಾಸಿಗೆಯೊಳಗೆ ತೂರಿಕೊಳ್ಳಲು ದೇಹ ಬಯಸುತ್ತಿತ್ತು. ಆದರೆ ಬೆಳ್ಳಿ ಚುಕ್ಕೆಗಳನ್ನು ನೇಯ್ದು ರಾತ್ರಿರಾಣಿಯ ಸೆರಗಿನಲ್ಲಿ ಸಿಕ್ಕಿಕೊಂಡಿದ್ದ ಮನಸಕ್ಕೆ ಎಂತಹ ಚಳಿ? ಕಡೆಗೂ ಸೊಗಸಾದ ರೇಷ್ಮೆಯ ರಜಾಯಿಗಳಿಗೇ ಜಯವಾಗಿ ಒಬ್ಬೊಬ್ಬರೇ ತಂತಮ್ಮ ಹಾಸಿಗೆಯೊಳಗೆ ತೂರಿಕೊಂಡಿದ್ದೆವು. ನಾವು ಟಿಬೆಟ್ಟಿನಲ್ಲಿದ್ದಷ್ಟು ದಿನವೂ ವಿದೇಶಿಯರು(ಅದರಲ್ಲೂ ಭಾರತೀಯರು!) ಎಂಬ ಅಸಡ್ಡೆ ತೋರದೆ, ಮೆತ್ತಗಿನ, ಕೊಳಕಿಲ್ಲದ ಹಾಸಿಗೆ-ಹೊದಿಕೆಗಳು, ತಲೆ ದಿಂಬುಗಳನ್ನು ಒದಗಿಸುತ್ತಿದ್ದುದು ಶಿವ ಕೃಪೆ. ದಿನವೆಲ್ಲ ಅಲೆದಲೆದು ದಣಿದ ದೇಹವನ್ನು ಈ ಬಗೆಯ ಬೆಚ್ಚಗಿನ ಗೂಡಿನಲ್ಲಿಟ್ಟು, ಹೊರಗಿನ ಚಳಿಯನ್ನು ಆಸ್ವಾದಿಸುತ್ತ ಸುಖ ನಿದ್ರೆ ತೆಗೆಯವುದಕ್ಕಾದರೂ ಇನ್ನೊಮ್ಮೆ ಟಿಬೆಟ್ಟಿಗೆ ಹೋಗಬೇಕು!

ನಮ್ಮನ್ನು ನೋಡಲೆಂದು ಬಂದಿದ್ದ ಹೋರೆಯ ಜನ ಸಂಜೆಯಾಗುತ್ತಿದ್ದಂತೆ, ಬಂದಂತೆಯೇ ಬಯಲಿನಲ್ಲಿ ಕರಗಿ ಹೋದರು. ಮತ್ತೆ ಅವರ ಮುಖ ದರ್ಶನ, ಮಾರನೆಯ ದಿನ ಬೆಳಗಿನ ಝಾವ ಕೋಣೆಯ ಕಿಟಕಿಯಲ್ಲಿ(ಅವರ ಇಣುಕಿ ನೋಡುವ ಸ್ವಭಾವ ಮಕ್ಕಳ ಮುಗ್ಧ ಸ್ವಭಾವದಂತೆ) ಹೊರ ಬಂದಾಗ ಕಂಡದ್ದು ಅಂಗಳದ ತುಂಬೆಲ್ಲ ನಿಂತು ಬಿಸಿಯುಸಿರಿನ ಹೊಗೆ ಕಾರುತ್ತಿದ್ದ ಅಶ್ವ ಪರಿವಾರ. ೧೮-೨೦ ಕುದುರೆಗಳ ಹಿಂದೆ ಮುಂದೆ ಹರಿಹಾಯುತ್ತಿದ್ದ ೭-೮ ಮರಿಗಳು. ಹಿಂದಿನ ದಿನದ ಸ್ವಾಗತ ಸಮಿತಿ ಇಂದು ಅಶ್ವತಜ್ಞದಳವಾಗಿ ನಮ್ಮೊಡನೆ ಹೊರಟು ನಿಂತಿತ್ತು. ಶ್ರೀ ಸಾಮಾನ್ಯನ ಸಂಪ್ರದಾಯದ ಉಡುಗೆ ತೊಡಿಗೆ ತೊಟ್ಟು ಬಂದಿದ್ದರೆಲ್ಲರೂ. ೧೫,೦೦೦ ಅಡಿಗಳೆತ್ತರದ-ಪ್ರದೇಶದ ಚಳಿಯಿಂದಾಗಿ ಇಲ್ಲಿನ ಜನ ಉಣ್ಣೆಯ ನಿಲುವಂಗಿ ಧರಿಸುವರು. ಅದರ ಮೇಲೆ ಒಂದಡಿ ಅಗಲದ ನಡುಪಟ್ಟಿ ಕಮರ್ ಬಂದ್ ತೊಟ್ಟ ಷರಾಯಿಯ ಮೇಲೆ ಮೊಣಕಾಲನ್ನೂ ಮುಚ್ಚುವಂತೆ ಯಾವಾಗಲೂ ಧರಿಸುವ ದಪ್ಪ ಉಣ್ಣೆಯ ಪಾಪಾಸು 'ಲ್ಹಾಮ್'. ಇದನ್ನು ಧರಿಸಿಯೇ ಗರ್ಭಗುಡಿಗೂ ಹೋಗಬಹುದು. ಚಳಿಗಾಲದಲ್ಲಿ ನಿಲುವಂಗಿಯ ಮೇಲೆ ಕೋಟು, ತಲೆಗೆ ಕುರಿ ಚರ್ಮದ ಟೋಪಿ, ಅದಕ್ಕೆ ಸೇರಿಕೊಂಡಂತೆ ಕಿವಿಯನ್ನು ಮುಚ್ಚುವಂತಹ ಮಡಿಕೆ ಹೆಂಗಸರದೂ ಇದೇ ಉಡಿಗೆ. ಕೆಲವೇಳೆ ಷರಾಯಿಯ ಬದಲಿಗೆ ದಪ್ಪ ಉಣ್ಣೆಯ ಲಂಗ. ಅದರ ಮೇಲೆ ಮುಂದಕ್ಕೆ ಸೊಂಟದಿಂದ ಪಾದದವರೆಗೆ ಇಳಿಬಿದ್ದ ಬಣ್ಣದ ಅಡ್ಡಪಟ್ಟಿಗಳಿರುವ ಉಣ್ಣೆ ಬಟ್ಟೆಯ ತುಂಡು. ಬೆನ್ನ ಮೇಲೆ ಮೇಕೆ ಚರ್ಮದ ಹೊದಿಕೆ-ಇದ್ದರೆ. ಶ್ರೀಮಂತರು, ಮೇಲಧಿಕಾರಿಗಳಾದ ಲಾಮಾಗಳು ಮಾತ್ರ ಬೆಲೆಯುಳ್ಳ ರೇಷ್ಮೆ ಉಡುಪುಗಳನ್ನು ಧರಿಸುವರು. ಗಂಡಸರು ಹೆಂಗಸರು ಎಂಬ ಭೇದವಿಲ್ಲದೆ ಎಲ್ಲರೂ ವಿವಿಧ ಮಣಿಗಳ ಆಭೂಷಣಗಳನ್ನು ತೊಡುವರು. ಸೊಂಟಕ್ಕೆ ಕತ್ತಿ-ಕಠಾರಿ-ಚಾಕು ಸಿಗಿಸುವರು.

ಸಜ್ಜಾಗಿ ಬಂದಿದ್ದ ಅಶ್ವಗಳ ಮೇಲೆ ನಮ್ಮನ್ನು ಕೂರಿಸುವ ತವಕ ಅವರಿಗೆ. ನಮ್ಮ

ಬೆಳಗಿನ ಪ್ರಾರ್ಥನೆಯಾದಷ್ಟೇ ತಡ ಅಶ್ವಾರೋಹಿಗಳನ್ನಾಗಿಸಿ ತಾವು ಪದಾತಿಗಳಾಗಿ ನಡೆಯತೊಡಗಿದರು. ಶಿವಸೇನೆ ನಡೆದಿತ್ತು ಬಯಲಿನಲ್ಲಿ ದೂರದ ಬೆಟ್ಟಸಾಲಿನ ದಿಕ್ಕಿಗೆ. ಅರುಣೋದಯದೊಡನೆ ರವಿಯ ರಥವೂ ಹೊರಟಿತ್ತು ಬಾನ ಬಯಲಲ್ಲಿ, ದೂರದ ಪಶ್ಚಿಮ ದಿಕ್ಕಿಗೆ.

ಪ್ರವಾಸೀ ತಂಡದೊಂದಿಗೆ ನಡೆದಿದ್ದ ಕುದುರೆ ಮರಿಗಳ ಸಡಗರ, ಚೆಲ್ಲಾಟ, ತುಂಬಿದ ಕೆಚ್ಚಲಿಗೆ ಬಾಯಿ ಹಾಕುವ ಅವುಗಳ ನೆಗೆದಾಟ, ಬಳಿಗೆ ಬಂದ ಇತರ ಮರಿಗಳೊಡನೆ ಮನುಜರೊಡನೆ ಖಾಲಿ ಗುದ್ದಾಟ, ಒದೆದಾಟ, ಅರ್ಥವಿಲ್ಲದ ಜಿಗಿತ, ಓಟ–ಮನಕದಿಯುವ ಮಕ್ಕಳು ಮಕ್ಕಳೇ! ಯಾವುದೇ ಪ್ರಾಣಿಯದಾಗಲಿ. ಎಳೆಯರ ಮುಗ್ಧತೆ ಮನವ್ರೊಲಿಸುವಂತಹದು. ಅಮ್ಮನ ಜೊತೆಗಾಗಿ ಹಂಬಲಿಸಿ ಈ ಕಂದಮ್ಮಗಳು ಸರೋವರದ ಪ್ರದಕ್ಷಿಣೆಗೆ ತೊಡಗಿದ್ದವು.

ಸುಮಾರು ಎರಡುತಾಸಿನ ನಡಿಗೆಯ ನಂತರವೇ ನಮಗೆ ಸೂರ್ಯ ದರ್ಶನ, ಕೈಲಾಸ ಶಿಖರ ದರ್ಶನ ದೊರೆತದ್ದು. ಚಿದಂಬರನ ಸಭೆಗೆ ಪ್ರವೇಶ ಪಡೆದಂತಾಯಿತು. ಬೆಳಗಿನ ಓಲಗಕ್ಕೆ ನೀಲಜಲದರ್ಪಣವಾಗಿ ಅದರಲ್ಲಿ ಮುಗಿಲ ನೀರೆಯರು ನರ್ತನಮಾಡಿದ್ದರು. ಎಷ್ಟೆಷ್ಟು ನೋಡಿದರೂ ಎಲ್ಲೆಲ್ಲಿ ನಿಂತು ನೋಡಿದರೂ ಹೊಸ ಹೊಸದಾಗಿ ಕಾಣುತ್ತಿದ್ದ ಸರೋವರದ ಚಿತ್ರ ದಂಗು ಬಡಿಸುತ್ತಿತ್ತು. ಸರೋವರದಾಚೆಗೆ ದೂರದಲ್ಲಿದ್ದ ಬೆಟ್ಟಸಾಲಿನ ಮೇಲೆ ಪ್ರಕಾಶ ಬಿದ್ದು ಅವೆಲ್ಲಾ ಬೆಳಕಿನಲ್ಲಿ ಮಿಂದು ನಿಂತಿದ್ದವು. ಇಡೀ ದೃಶ್ಯ ಚಿತ್ರವತ್ತಾಗಿತ್ತು.

೧೫,೦೦೦ ಅಡಿಗಳ ಎತ್ತರದಲ್ಲಿರುವ ಅತಿ ದೊಡ್ಡ ಸಿಹಿನೀರಿನ ಈ ಸರೋವರದ ವಿಸ್ತೀರ್ಣ ೪೧೫ ಚದರ ಕಿ.ಮೀ.ಇಷ್ಟು ವಿಸ್ತಾರವಾದ ಸರೋವರವಾದರೂ ಅಲೆಗಳೇ ಇಲ್ಲದೆ ಕಡುನೀಲಿಯ ಗಾಜಿನಂತಿದ್ದುದರಿಂದ ಮೂರು ಆಯಕಟ್ಟಿನ ದೃಶ್ಯದಂತಿರದೆ ಎರಡು ಆಯಕಟ್ಟಿನ ಚಿತ್ರದಂತಿತ್ತು. ಕಣ್ಣು ಮೂರನೆಯ ಆಯಕಟ್ಟಿನ ಆಳವನ್ನರಿಯದಾಗಿತ್ತು. ಬಾನಿನಲ್ಲಿದ್ದ ಮೋಡಗಳ ಬಿಂಬ ನೀರಿನಲ್ಲಿದ್ದುದೇ ಅಲ್ಲದೇ ಆಗಾಗ ನೀಲಿ ಬಣ್ಣವೂ ಬದಲಾಗುತ್ತಿತ್ತು. ಸರೋವರದ ಅಂಚಿನುದ್ದಕ್ಕೂ ಕುಚ್ಚು ಕಟ್ಟಿದಂತೆ ತೋರಿದ್ದ ಬೆಟ್ಟಗಳ ಸಾಲು. ನಮ್ಮನ್ನು ಕಲ್ಪನಾಲೋಕಕ್ಕೊಯ್ಯುವ ಮ್ಯಾಜಿಕ್ ಕಾರ್ಪೆಟ್ ಆಗಿದ್ದ ಮಾನಸ ಸರೋವರ ಚಿರಂತನ ಆದರೂ ಚಿರನೂತನ ಸರೋವರ. ಮಳೆಗಾಲದಲ್ಲಿ ಇಲ್ಲಿಗೆ ಬರುವ ಹಂಸಗಳ ಹಿಂಡು ಈ ನೀರ್ದಾಣವನ್ನು ಮತ್ತೂ ಮನೋಹರವಾಗಿಸುತ್ತದೆ. ಸುತ್ತಲಿನ ಗಾಂಗ್ಡೆಸ್ ಬೆಟ್ಟಗಳಿಂದ ಕರಗಿಬರುವ ಹಿಮ ಜಲದಿಂದಾಗಿ ಸರೋವರದ ನೀರು ತಿಳಿಯಾಗಿದ್ದು ೩೦ ಅಡಿ ಆಳದಲ್ಲಿರುವ ಕಲ್ಲು, ಈಜಾಡುವ ಮೀನು ಕೂಡ ಸ್ಪಷ್ಟವಾಗಿ ಕಾಣುತ್ತಿತ್ತು.

ಭರತ ಖಂಡಕ್ಕೆ ಏಷಿಯಾ ಮೈನರ್‌ನಿಂದ ಆರ್ಯರು ಬಂದ ಕಾಲದಿಂದಲೂ ಕೈಲಾಸ ಮಾನಸ ಪ್ರದೇಶವನ್ನು ಹಿಂದೂ ಪುರಾಣಗಳಲ್ಲಿ ಅತ್ಯಂತ ಪವಿತ್ರ ಕ್ಷೇತ್ರವೆಂದು ಪರಿಗಣಿಸಲಾಗಿದೆ. ಸ್ಕಂದ ಪುರಾಣದಲ್ಲಿ ಮಾನಸ ಖಂಡದಲ್ಲಿ ಇದರ ಮಹಿಮೆಯನ್ನು ವರ್ಣಿಸಲಾಗಿದೆ. ಒಮ್ಮೆ ಸನಕ, ಸನಂದನ, ಸನತ್ಕುಮಾರ, ಸನತ್ಸುಜಾತ ಎಂಬ ಬ್ರಹ್ಮನ ಮಾನಸ ಪುತ್ರರು ಶಿವನನ್ನು ಕುರಿತು ತಪಸ್ಸಿಗೆ ತೊಡಗಿದಾಗ ಹನ್ನೆರಡು ವರ್ಷಗಳು ಮಳೆಯಾಗದೆ, ಸುತ್ತಲಿನ ನದಿಗಳೆಲ್ಲ ಒಣಗಿ ಹೋದುವಂತೆ. ಈ ಋಷಿಗಳು ಸ್ನಾನಾದಿಗಳಿಗೆ ದೂರದ ಮಂದಾಕಿನಿ ನದಿಯವರೆಗೆ ದಿನವೂ ಹೋಗಿ ಬರುವಲ್ಲಿ ಕಾಲ ವ್ಯರ್ಥವಾಗಿ ತಪಸ್ಸಿಗೆ ಅನಾನುಕೂಲವಾಗುತ್ತಿತ್ತು. ಇದನ್ನು ನಿವಾರಿಸಲು ಋಷಿಗಳು ಬ್ರಹ್ಮನನ್ನು ಪ್ರಾರ್ಥಿಸಿದಾಗ ಬ್ರಹ್ಮನ ಸಂಕಲ್ಪದಂತೆ ಕೈಲಾಸ ಪ್ರದೇಶದಲ್ಲೇ ಸೃಷ್ಟಿಯಾದ

ಸರೋವರವೇ ಮಾನಸ ಸರೋವರ.

ಮತ್ತೊಂದು ಪುರಾಣದಂತೆ ಮಾಂಧಾತ ಮುನಿಗಳು ಈ ಸರೋವರವನ್ನು ಮೊದಲು ಕಂಡು ಇದರ ದಡದಲ್ಲಿ ಕುಳಿತು ಶಿವನನ್ನು ಕುರಿತು ತಪಸ್ಸು ಮಾಡಿದರೆಂಬ ಪ್ರತೀತಿ. ಈ ಮುನಿಯ ತಪಸ್ಸಿಗೆ ಕುಳಿತ ಸ್ಥಳದ ಹಿಂಬದಿಯಲ್ಲಿನ ಪರ್ವತಸಾಲಿಗೆ ಇವರದೇ ಹೆಸರು. ಮಾಂಧಾತ ಪರ್ವತ, ಬಾಣನ ಕಾದಂಬರಿ ಯ ಅಚ್ಛೋದ ಸರಸ್ಸು ಸಂಪೂರ್ಣವಾಗಿ ಮಾನಸ ಸರೋವರಕ್ಕೆ ಹೋಲಿಕೆಯಾಗದಿದ್ದರೂ ಹಲವಾರು ವಿವರಗಳಿಂದ ಅಚ್ಛೋದ ಸರಸ್ಸೇ ಮಾನಸ ಸರೋವರವಾಗಿರಬಹುದೆನಿಸುತ್ತದೆ.

ಜೈನ ಧರ್ಮೀಯರಿಗೂ ಇದೂ ಪವಿತ್ರ ಸರೋವರ–ಪದ್ಮ ಹ್ರದ! ಇದರ ಸಮೀಪ ಕೈಲಾಸ ಶಿಖರದಲ್ಲಿಯೇ ಆದಿ ತೀರ್ಥಂಕರ ವೃಷಭದೇವ ನಿರ್ವಾಣ ಪಡೆದರೆಂದು ಜೈನರ ನಂಬಿಕೆ. ವೃಷಭ ದೇವನ ಮಗ ಮೊದಲ ಚಕ್ರವರ್ತಿ ಭರತನು ಪೂರ್ವದಲ್ಲಾದ, ಮುಂದೆ ಆಗುವ ಇಪ್ಪತ್ತನಾಲ್ಕು ತೀರ್ಥಂಕರರ ಎಪ್ಪತ್ತೆರಡು ಜೈನ ಮಂದಿರಗಳನ್ನು ಚಿನ್ನದಲ್ಲಿ ಸರೋವರ ಸುತ್ತಲೂ ನಿರ್ಮಿಸಿದನೆಂದು ಜೈನರ ಉತ್ತರ ಪುರಾಣದಲ್ಲಿ ಹೇಳಿದೆ.

ಪಾಳಿ ಹಾಗೂ ಸಂಸ್ಕೃತದಲ್ಲಿರುವ ಬೌದ್ಧ ಗ್ರಂಥಗಳಲ್ಲಿ ಮಾನಸ ಸರೋವರದ ಹೆಸರು 'ಅನೊತತ್ತ' ಹಾಗೂ 'ಅನವತಪ್ತ' –ಬಿಸಿಯಿಲ್ಲದ ಶಾಂತ ಸರೋವರ. ಭೂಮಿಯ ಮೇಲಿರುವ ಏಕೈಕ ಸ್ವರ್ಗವೆಂದು ಬೌದ್ಧರ ನಂಬಿಕೆ. ಇದರಲ್ಲಿಯೇ ಸರ್ವಶಕ್ತ ವೃಕ್ಷವಿರುವುದು ಮತ್ತು ಬೃಹದಾಕಾರದ ಕಮಲಗಳು ಅರಳುವುವು. ಇಂತಹ ಕಮಲಗಳ ಮೇಲೆ ಅಮಿತಾಭ ಬುದ್ಧ ಮತ್ತಿತರ ಬೋಧಿಸತ್ವರು ಆಸೀನರು. ಈ ಅನೋತತ್ತದ ದಂಡೆಯಲ್ಲಿ ಶತಮೂಲಿಕೆಗಳು ಔಷಧೀಯ ಗಿಡಗಳು ಬೆಳದಿರುವುವು. ಬೇರೆಲ್ಲ ಮತಗಳ ಮೇಲೆ ಬೌದ್ಧ ಧರ್ಮ ಸಾಧಿಸಿದ ವಿಜಯದ ಗುರುತಾಗಿರುವ ಈ ಸರೋವರ ಮಹಿಮಾನ್ವಿತ. ಬೌದ್ಧರಿಗೆ ಭವತಾರಿಣಿ ನಿರ್ವಾಣದಾಯಿನಿ.

ಟಿಬೆಟೀಯರಿಗೆ ಇದು 'ಮಪಾಮ್ ಯುಂಕೊ' – ಅನಂತ ಪಚ್ಚೆ ನೀಲ ಸರೋವರ. ಪ್ರಪಂಚದ ನದಿಗಳ ಜನನಿ ಎಂದು ಅವರ ಬೌದ್ಧಗ್ರಂಥಗಳಲ್ಲಿ ಉಲ್ಲೇಖವಿದೆ. ಕೈಲಾಸದಷ್ಟೆ ಪವಿತ್ರವಾದ ಈ ಸರೋವರದಲ್ಲಿ ಮಿಂದರೆ ಮನುಷ್ಯನಲ್ಲಿರುವ ಪಂಚ ಮಹಾದೋಷಗಳು–ಆಸೆ, ಕ್ರೋಧ, ದ್ವೇಷ ಹಾಗೂ ಆಲಸ್ಯ ತೊಳೆದು ಹೋಗುವುದಂತೆ. ಚೀನಾದ ಬೌದ್ಧರಿಗೆ ಪಶ್ಚಿಮಕ್ಕಿರುವ ಕಿನ್ನರ ಗಂಧರ್ವ ಲೋಕ ಇದು.

ಟಿಬೆಟೀ ಪುರಾಣದಂತೆ ಮಾನಸ ಸರೋವರದ ಮತ್ತೊಂದು ಹೆಸರು 'ಮಫಮ್ ಛೊ' . ಭಾರತದಿಂದ ಬೃಹತ್ ಮತ್ಸ್ಯವೊಂದು ಹಾರಿ ಈ ಸರೋವರದ ಮಡಿಲಲ್ಲಿ ತಾಯಿಯ ಮಡಿಲಿಗೆ ಬೀಳುವ ಮಗುವಿನಂತೆ ಬಿತ್ತು. ಹೀಗಾಗಿ ಈ ಸರೋವರ ತಾಯಿಯ ಮಡಿಲು. ಛೊ ಮಫಮ್ 'ಛೊ ಮವಂಗ್' ಎಂದು ಕೂಡ ಕರೆಯುವುದು ರೂಢಿಯಲ್ಲಿದೆ. ಈ ಪದದ ಅರ್ಥ ಅಜೇಯ ಸರಸ್ಸು. ಯಾವುದೇ ಹೆಸರಿನಿಂದ ಕರೆದರೂ ಅನ್ವರ್ಥವೇ ಈ ದೇವಸರಸ್ಸಿಗೆ. ಟಿಬೆಟ್ಟಿಯರು ಹೇಳುವಂತೆ ಈ ಸರೋವರ ಧನುಸ್ಸಿನಾಕಾರದಲ್ಲಿ ಬಾಗಿದ್ದು, ನೀರಿನ ಮಧ್ಯಭಾಗವು ಉಬ್ಬಿಕೊಂಡಿರುವುದು. ಅಲ್ಲಿ ದೊಡ್ಡ ವೃಕ್ಷವಿದ್ದು ಅದರ ಹಣ್ಣುಗಳು ನೀರಿಗೆ ಉದುರುತ್ತವೆ. ಅದನ್ನು

ಸರೋವರದೊಳಗಿರುವ ನಾಗದೇವತೆಗಳು ತಿನ್ನುವರು. ಉಳಿದ ಹಣ್ಣುಗಳು ತಳ ಸೇರಿ ಚಿನ್ನದ ಗಟ್ಟಿಗಳಾಗುವುವು. ಈ ಸರಸ್ಸಿನ ನಾಲ್ಕೂಕಡೆ ವೃಕ್ಷಗಳ ಏಳು ಸಾಲುಗಳಿವೆ . ಸರೋವರದ ಮಧ್ಯತಳದಲ್ಲಿ ನಾಗರಾಜನ ಭವ್ಯ ಭವನವಿದೆ. ಉತ್ತರ ಭಾಗದಲ್ಲಿ ಪಂಚವಿಧ ಶಿಲೆಗಳು, ಪೂರ್ವಭಾಗದಲ್ಲಿ ಪಂಚವಿಧ ರೇತಸ್ಸು, ದಕ್ಷಿಣದಲ್ಲಿ ಪಂಚವಿಧ ಜಲ, ಪಡಪಲ್ಲಿ ಧೂಪ ಮತ್ತು ಪಶ್ಚಿಮದಲ್ಲಿ ಪಂಚವಿಧ ಶಂಖಗಳು ಸಿಗುವುದೆಂದು ಟಿಬೆಟ್ಟಿಯರ ನಂಬಿಕೆ.

ಮಹಾಭಾರತದಲ್ಲಿ ಮಾನಸ ಸರೋವರದ ಮತ್ತೊಂದು ಹೆಸರು 'ಬಿಂದು ಸಾರಸ'. ಇಲ್ಲಿ ಬಂದು ನೋಡಿದವರಿಗೆ ಇದು ಸೌಂದರ್ಯದ, ರಮಣೀಯತೆಯ ಸಾರಬಿಂದುವೇ ಸರಿ. ಇದರ ಸೌಂದರ್ಯವನ್ನು ಅನುಭವಿಸಿ ಸ್ವರ್ಗಾನಂದ ಪಡೆಯಲು, ಪುಣ್ಯಾರ್ಜನೆ ಮಾಡಲು, ಪಾಪತೊಳೆದುಕೊಳ್ಳಲು, ಟಿಬೆಟೀಯರು ಇದರ ಪ್ರದಕ್ಷಿಣೆ-'ಕೋರಾ'- ಮಾಡುತ್ತಾರೆ. ಪೂರಾ ಕಾಲ್ನಡಿಗೆಯಲ್ಲೇ ಪ್ರದಕ್ಷಿಣೆ ಬರಬೇಕಾದರೆ ಹಿಮಗಾಲವೇ ಉತ್ತಮ. ಕಾರಣ ಎಲ್ಲ ಝರಿಗಳು ಹೊಳೆ ಮತ್ತು ಸರೋವರ ಹೆಪ್ಪುಗಟ್ಟಿರುತ್ತವೆ. ದಾಟುವುದು ಸುಲಭ. ಬೇಸಿಗೆಯಲ್ಲಿ ಹಿಮ ಕರಗಿ ಝರಿಗಳು ತುಂಬಿ ಹರಿಯುತ್ತಿರುತ್ತವೆ. ಆಗ ಅವುಗಳನ್ನು ದಾಟುವುದು ಅಸಾಧ್ಯ. ಈ ಕಾರಣದಿಂದಲೇ ಸರೋವರದಿಂದ ನೀರು ಹೊರಹೋಗುವ, ಝರಿಗಳು ಸೇರುವ ಭಾಗವನ್ನು ನಾವು ಬಸ್ಸಿನಲ್ಲಿ ಕ್ರಮಿಸಿದೆವು.

ಬೌದ್ಧರ ಪುಣ್ಯ ತೀರ್ಥವಾದ ಈ ಸರೋವರದ ಸುತ್ತಲೂ ಹಲವಾರು ಬೌದ್ಧ ಮಂದಿರಗಳು, ಅನೇಕ ಹಳ್ಳಿಗಳು ಇದ್ದವು. ಚೀನೀಯರು ೧೯೫೦ರಲ್ಲಿ ಆಕ್ರಮಿಸಿದಾಗ ಕೆಲವು ನಾಶವಾದವು. ಉಳಿದೆಲ್ಲವು ಮುಚ್ಚಲ್ಪಟ್ಟವು. ಟಿಬೆಟೀ ಜನತೆಯ ಅಚಲ ಧಾರ್ಮಿಕ ನಂಬಿಕೆಗಳಿಗೆ, ಬದಲಾಗದ ಜೀವನಕ್ರಮಕ್ಕೆ ಚೀನೀ ಸರಕಾರ ಮಣಿಯಲೇ ಬೇಕಾಯಿತು. ೧೯೭೮ರಲ್ಲಿ ಅನೇಕ ಮಠಗಳು, ಮಂದಿರಗಳು ಪುನಃ ತೆರೆಯಲ್ಪಟ್ಟವು.

ಸರೋವರವನ್ನು ಸುತ್ತಿ ಬರುವಾಗ ಸಿಕ್ಕ ಮೊದಲ ಮಂದಿರವೇ ಪೂರ್ವದ 'ಸೆರಲುಂಗ್ ಗೊಂಪಾ'. ಟಿಬೆಟ್ಟಿನ ಜನ ಜೀವನದಲ್ಲಿ ಗೊಂಪಾ ಮಹತ್ವದ ಪಾತ್ರವಹಿಸುತ್ತದೆ- ಚಕ್ರಕ್ಕೆ ನಾಭಿಯಿದ್ದಂತೆ. ಇದು ಬುದ್ಧ, ಭೋಧಿಸತ್ವರ ವಿಗ್ರಹಗಳನ್ನಿಟ್ಟು ಪೂಜಿಸುವ ದೇವಾಲಯ; ಬೌದ್ಧ ಸನ್ಯಾಸಿಗಳು, ಭಿಕ್ಷುಗಳು ವಾಸಿಸುವ ಮಠ; ಪ್ರಯಾಣಿಕರು ಯಾತ್ರಿಗಳು ವಿದ್ಯಾರ್ಥಿಗಳು ತಾತ್ಕಾಲಿಕವಾಗಿ ತಂಗುವ ಧರ್ಮಶಾಲೆ; ಓದು ಬರಹ ಕಲಿಯುವ ಮಕ್ಕಳಿಂದ ಹಿಡಿದು ವಯಸ್ಕರು ಸನ್ಯಾಸಿಗಳು ಜ್ಞಾನಾರ್ಜನೆ ಮಾಡುವ ಗುರುಕುಲ ಪಾಠಶಾಲೆ ವಿಶ್ವವಿದ್ಯಾನಿಲಯ; ವಿದ್ಯಾರ್ಜನೆಗೆಂದು ಬರುವ ಯಾರಿಗೇ ಆದರೂ ಲಭ್ಯವಿರುವ ಗ್ರಂಥಾಲಯ; ಸಮಾಜದ ಮುಖ್ಯ ಧಾರ್ಮಿಕ ಹಬ್ಬ ಉತ್ಸವಗಳು, ಸಾಮೂಹಿಕ ತಾಂತ್ರಿಕ ವಿಧಿಗಳನ್ನು ನಡೆಸುವ ಸಾಮಾಜಿಕ ಸಂಸ್ಥೆ; ತನ್ನದೇ ವ್ಯವಹಾರ, ಆರ್ಥಿಕ ವಹಿವಾಟು ಇರುವ ಸ್ವಾವಲಂಬಿ ವಾಣಿಜ್ಯ ಕೇಂದ್ರ; ಸಮಾಜದ ನೀತಿ, ಕಟ್ಟು ಕಟ್ಟಲೆಗಳನ್ನು ಅನುಸರಿಸದವರಿಗೆ, ಇತರ ತಪ್ಪಿತಸ್ಥರಿಗೆ ದಂಡ ವಿಧಿಸುವ ನ್ಯಾಯಾಲಯ; ಜನನ ಮರಣ ವಿವಾಹ ಮುಂತಾದ ವಿವರಗಳನ್ನು ನೀಡುವ ಕಛೇರಿ; ಟಿಬೆಟೀ ಸಂಸ್ಕೃತಿಯ, ಕಲಾವಂತಿಕೆಯ ಕೋಶಾಗಾರ. ಪ್ರಮುಖ ಗೊಂಪಾಗಳ ಶಾಖೆಗಳಾದ ಸಣ್ಣ ಗೊಂಪಾಗಳಲ್ಲಿ ಈ ಎಲ್ಲ ಸೌಕರ್ಯಗಳು ಇಲ್ಲದಿರಬಹುದಾದರೂ ಅದರ ಸುತ್ತಲಿನ ಜನತೆಯ ಅವಶ್ಯಕತೆಗಳನ್ನು ಪೂರೈಸುವಷ್ಟು ಸಶಕ್ತವಾಗಿರುತ್ತವೆ.

ಒಟ್ಟಿನಲ್ಲಿ ಗೊಂಪಾಗಳಿಲ್ಲದೆ ಟಿಬೆಟೀ ಸಮಾಜದ ಅಸ್ತಿತ್ವವೇ ಇಲ್ಲವೆನ್ನಬಹುದು.

ಎಲ್ಲ ಗೊಂಪಾಗಳಂತೆ ಸೆರಲುಂಗ್ ನಲ್ಲಿಯೂ ಮಂದಿರದ ಪ್ರಾಕಾರದ ಗೋಡೆಗಳ ಮೇಲೆ ಭಿತ್ತಿ ಚಿತ್ರಗಳು, ಬಾಗಿಲಿಗೆ ಬಟ್ಟೆಯ ನೆರಿಗೆಯ ತೋರಣಗಳು, ಒಳಗೋಡೆಯಲ್ಲಿ ನೇತುಹಾಕಿರುವ ಥಂಕಾಗಳು, ಹೊರಜಗಲಿಯಲ್ಲಿ ಕಟ್ಟಿ ನಿಲ್ಲಿಸಿರುವ ಪ್ರಾರ್ಥನಾ ಚಕ್ರಗಳ ಸಾಲು, ಅಂಗಳದಲ್ಲಿ ಧ್ವಜಸ್ತಂಭ ಮತ್ತು ಹೊರಗೆ 'ಚೋರ್ಟೆನ್'. ಜಗಲಿಗೆ ಕಟ್ಟಿರುವ ಬಣ್ಣಬಣ್ಣದ ಬಾವುಟಗಳ ತೋರಣ, ಅಲ್ಲಲ್ಲಿ ಜೋಡಿಸಿರುವ ಕೆತ್ತನೆಯ ಕಲ್ಲುಗಳು ಮತ್ತು ಮೇಕೆ, ಯಾಕ್ ಪ್ರಾಣಿಗಳ ತಲೆಬುರುಡೆ ಕೊಂಬುಗಳು ದನಗಾಹಿಗಳ ಸಂಸ್ಕೃತಿಯನ್ನು ಸಾರುತ್ತಿದ್ದವು.

ಈ ಗೊಂಪಾದ ಎರಡೂ ಕಡೆ ಐದಾರು ಕಿ. ಮೀ ಅಂತರದಲ್ಲಿ ಗಾಂಗ್ಡಿಸ್ ಬೆಟ್ಟಗಳಿಂದ ಹರಿದು ಬರುವ ಅನೇಕ ತೊರೆಗಳು ಸರೋವರವನ್ನು ಸೇರುತ್ತವೆ. ಆಳವಿಲ್ಲದ ತೊರೆಗಳನ್ನು ಕಾಲ್ನಡಿಗೆಯಲ್ಲೇ ದಾಟಬಹುದು. ಕೆಲವೆಡೆ ಚಿಕ್ಕ ಚಿಕ್ಕ ಸೇತುವೆಗಳಿವೆ. ಸ್ಫಟಿಕ ಶುಭ್ರಜಲವೆಂದರೆ ಇವುಗಳಲ್ಲಿ ಹರಿವ ಜಲ. ನಿರ್ಮಲ ಎಂಬಲ್ಲಿ ಮಲವಿದ್ದೀತು. ಈ ನೀರಿನಲ್ಲಿ ಕಾಣಲಾರೆವು. ಆದುದರಿಂದಲೇ ಈ ನೀರಿಗೆ ಬಣ್ಣವೇ ಇರದು. ಆಕಾಶವನ್ನು ಪ್ರತಿಬಿಂಬಿಸಿ ಅದರಿಂದ ಬಣ್ಣಗಳನ್ನು ಎರವಲು ಪಡೆಯುತ್ತವೆ ಈ ತೊರೆಗಳು.

ಕಾಲು ಸೋತು ಕುಸಿಯುವವರೆಗೆ ನಡೆಯುವುದು, ನಂತರ ಕುದುರೆಯ ಮೇಲೆ ಮೈಭಾರ ಹಾಕಿ ದಾರಿ ಸವೆಸುವುದು ಬೆನ್ನು ಸೊಂಟ ಸಾಕಾಯಿತೆನ್ನುವವರೆಗೆ. ಮತ್ತೆ ನಡೆಯಲು ಶುರುವಾಗುವುದು. ನಡಿ ಹತ್ತು ಇಳಿ ನಡಿ ಕಸರತ್ತು ಮಧ್ಯಾಹ್ನ ಒಂದು ಗಂಟೆಯ ವರೆಗೂ ನಡೆಯಿತು. ಮೈಸೋತಿದ್ದರೂ ಮನಕ್ಕೆ ಮುದ ನೀಡಿದ ಚಾರಣವದು. ಚಿತ್ತಭಿತ್ತಿಯಮೇಲೆ ಸತತ ಆರು ಗಂಟೆಗಳ ಮೂವಿಯನ್ನು ಮೂಡಿಸಿದ ಚಾರಣ. ಕುದುರೆ ಮಾಲೀಕರಿಗೆ ಹೊಟ್ಟೆ ಚುರುಗುಟ್ಟಿ ತಳವೂರುವ ಮನವಾದಾಗ ಮಾತ್ರ ನಮ್ಮ ತಳಕ್ಕೂ ಕೊಂಚ ಆರಾಮದ ಅವಕಾಶ. ಅಲ್ಲಿಯವರೆಗೆ ಸಾಗುತ್ತಲೇ ಇರುವ ಅನಿವಾರ್ಯತೆ. ಸುಮಾರು ೧೫, ೧೬ ಕಿ.ಮೀ ಕ್ರಮಿಸಿದ್ದ ನಮಗೆ ವಿಶ್ರಾಂತಿಗಾಗಿ ಮೂಕಭಾಷೆಯಲ್ಲೇ ಮಾರ್ಗದರ್ಶಕರನ್ನು, ಸಾರಥಿಗಳನ್ನು ಬೇಡಿಕೊಳ್ಳುವಂತಾಗಿತ್ತು. ದೂರದಲ್ಲಿ ಹರಿಯುತ್ತಿದ್ದ ತೊರೆಯನ್ನು ತೋರಿಸಿ ಅದರ ಆಚೆ ದಂಡೆಯಲ್ಲಿ ಊಟ ಎಂದು ಸನ್ನೆ ಮಾಡಿದರು. ನಿಲ್ಲುವ ತಾಣ ಕಣ್ಣಿಗೆ ಬಿದ್ದಾಗ ಕಾಲುಗಳಿಗೆ ವಿಶ್ವಾಸ ಮೂಡಿ ಮತ್ತೆ ನಡೆಯಲಾರಂಭಿಸಿದವು. ಹತ್ತಿರ ಬಂದಂತೆ ಆ ತೊರೆಯ ನಿಜ ಸ್ವರೂಪ ಕಂಡಿತು. ಬ್ರಹ್ಮ ಪುತ್ರ ನದಿ ಅದು. (ನಿಜವಾದ ಬ್ರಹ್ಮಪುತ್ರಕ್ಕೆ ಹೋಗಿ ಸೇರುವ ನದಿ.) ಹೆಚ್ಚು ಆಳವಿರದಿದ್ದರೂ ಹರಿವ ವೇಗವಿದ್ದು ಅಗಲ ಪಾತ್ರವಿದ್ದುದರಿಂದ ನಮ್ಮನ್ನು ಕುದುರೆಗಳ ಮೇಲೆ ಕೂರಿಸಿ ದಾಟಿಸಲಾಯಿತು. ಕುದುರೆಮರಿಗಳಿಗೆ ಇದೊಂದು ಮೋಜಿನಾಟ. ನಮ್ಮೆಲ್ಲರನ್ನು ಸರತಿಯಲ್ಲಿ ದಾಟಿಸುವ ವೇಳೆಗೆ ಮರಿಗಳೆಲ್ಲಾ ಎನಿಲ್ಲೆಂದರೂ ೧೦ ೧೨ ಬಾರಿ ತಾಯಂದಿರ ಬಗಲಿನಲ್ಲಿ ಹಿಂದೆಮುಂದೆ ಓಡಾಡಿ ಹೊಳೆದಾಟಿದ್ದವು. ತಾಯಂದಿರು ಅವುಗಳ ಮೇಲೆ ಸಿಟ್ಟಾಗಿ ಗುಮ್ಮುತ್ತಿದ್ದವು. 'ನೀರಿನಲ್ಲಿ ಆಡಿದ್ದು ಸಾಕು, ಮೇಲೆ ಹೋಗಿ. ಕಾಲಿಗೆ ತೊಡರಿಕೊಳ್ಳಬೇಡಿ.' ಎಂದು ಗದ್ದರಿಸಿದಂತಿತ್ತು. ನಮ್ಮೆಲ್ಲರನ್ನು ದಡಕ್ಕೆ ತಂದ ಮೇಲೆಯೇ ಸಾಮಾನಿನ ಕುದುರೆಗಳಿಗೂ ಕೂಡ ಬೆನ್ನ ಹೇರು ತೆಗೆದು ಆರಾಮಕ್ಕೆ ಮೇಯಲು ಬಿಟ್ಟದ್ದು. ನದಿಯ ಮತ್ತೊಂದು ದಡದ ಮೇಲೆ ಎಲ್ಲರೂ ಬಿಸಿಲಿನಲ್ಲೇ ಬಿದ್ದು ಕೊಂಡೆವು ಹಪ್ಪಳದಂತೆ. ಮಾನವರು ನಿಶ್ಚೇಷ್ಟಿತರಾಗಿ

ಬಿಟ್ಟು ಕೊಂಡರೆ ಕುದುರೆಗಳು ಒದ್ದೆ ಮೈ ಒಣಗಿಸಿಕೊಳ್ಳಲು, ದಣಿವಾರಿಸಿಕೊಳ್ಳಲು ನೆಲದಮೇಲೆ ಹೊರಳಾಡ ಹತ್ತಿದವು. ಮರಿಗಳಂತೂ ಪೂರ್ಣಸೋತು ಸುಣ್ಣವಾಗಿ ಬಟ್ಟೆಯಂತ ಮೈ ಚೆಲ್ಲಿದವು. ಅರ್ಧಗಂಟೆ ಮಾತ್ರ. ನಂತರ ಅದೇ ಓಟ, ನೆಗೆತ ತಿವಿತ ಮೋಜು ಮಸ್ತಿ. ಕೂತವರ ಹೆಗಲ ಮೇಲೆ ತೊಡೆಯಮೇಲೆ ತಮ್ಮ ಗೊರಸುಗಳನ್ನಿಟ್ಟು ಆಟಕ್ಕೆ ಕರೆದಿದ್ದ ರೀತಿ ನಗು, ಪ್ರೀತಿಯುಕ್ಕಿಸಿದ್ದವು.

ನಾವು ಯಾತ್ರಿಗಳು ನೆಲಕ್ಕೆ ಬೆನ್ನು ಕೊಟ್ಟ ಹತ್ತೇ ನಿಮಿಷದಲ್ಲಿ ಅಲ್ಲಲ್ಲಿ ಹೊಗೆ ಏಳಲು ಮೊದಲಾಯಿತು. ಟಿಬೆಟೀಯರು ಆಗಲೇ ತಳವೂರಿ  ದಿನದ ಊಟದ ತಯಾರಿ ನಡೆಸಿದ್ದರು. ಒಂದಿಬ್ಬರು ಮಹಿಳೆಯರು ಚಪಾತಿಯಹಿಟ್ಟು ಕಲಸುವಂತೆ ಏನನ್ನೊ ಕಲಸಿದ್ದು ಕುತೂಹಲ ತಂದು ನಾನು ಒಂದು ಒಲೆಯ ಬಳಿಸಾರಿದೆ. ಕುದಿಯಲು ಇಟ್ಟಿದ್ದ ನೀರಿನಲ್ಲಿ ಚಹಾದ ಎಲೆಗಳು ಕುಣಿದಾಡುತ್ತಿದ್ದವು. ಮಹಿಳೆಯ ಕೈಯಲ್ಲಿರುವುದನ್ನು ತೋರಿಸಿ ಏನೆಂದು ಕೈಸನ್ನೆ ಮಾಡಿದೆ. 'ತ್ಸಾಂಪಾ' ಎಂದಳು. ಪಕ್ಕದಲ್ಲೇ ಪೊಟ್ಟಣದಲ್ಲಿದ್ದುದು 'ಸೆರು ತ್ಸಾ'– ಸೋಡ ಉಪ್ಪು. ಹುರಿದ ಬಾರ್ಲಿಯ ಹಿಟ್ಟಿಗೆ ಟೀ ನೀರು ಮತ್ತು ಉಪ್ಪು ಬೆರೆಸಿ ಕಲಸಿದ್ದಳು. ಬೇರೊಂದು ಚೀಲದಲ್ಲಿ ಒಣಗಿದ ಬಾಳಕದಂತಿದ್ದ ತುಂಡುಗಳು, ಮಾಂಸದ ತುಂಡುಗಳು. ನಾನು ಅವರಲ್ಲಿಗೆ ಹೋದೊಡನೇ ತಮ್ಮ ಪಕ್ಕದಲ್ಲೇ ಜಾಗಮಾಡಿ ಕೈಹಿಡಿದು ಕೂರಿಸಿಕೊಂಡರು ಅಲ್ಲೇ ಇದ್ದ ಯುವತಿಯರಿಬ್ಬರು. ಎಲ್ಲರ ಮೊಗದಲ್ಲೂ ನಗೆ. ತಾವು ತಿನ್ನುತ್ತಿದ್ದ ರೊಟ್ಟಿಯ (ತ್ಸಾಂಪಾ ಹಿಟ್ಟನ್ನು ತಟ್ಟಿ ಜಿಡ್ಡು ಸುರಿದು ಒಂದು ಕಲ್ಲಿನ ಮೇಲೆ ಸುಟ್ಟಿದ್ದ ದಪ್ಪ ರೊಟ್ಟಿ.) ತುಂಡನ್ನು ನನ್ನ ಕೈಗೆ ತುರುಕಿದರು. ಅದನ್ನು ಬಾಯಿಗೆ ಹಾಕುವ ಧೈರ್ಯವಿರಲಿಲ್ಲ. ಒಮ್ಮೆ ರೊಟ್ಟಿಯ ಚೂರು, ಒಮ್ಮೆ ಬಾಡಿನ ತುಂಡು ನಿಧಾನದಲ್ಲಿ ಜಗಿಯುತ್ತಾ ಹರಟಿದ್ದರು. ಅಷ್ಟೆ ಅವರ ಊಟ. ಈ ತುಂಡುಗಳನ್ನೇ ಬೆಳಗಿನಿಂದಲೂ ಜಗಿಯುತ್ತಾ ಬಂದಿದ್ದರು ಈ ಟಿಬೆಟೀಯರು. ನಾವೆಂದುಕೊಂಡಂತೆ ಅದು ಚೂಯಿಂಗ್ ಗಮ್ ಆಗಿರಲಿಲ್ಲ.

ಟಿಬೆಟ್ಟಿನ ಈ ಅಲೆಮಾರಿ ಜನಾಂಗದ ಊಟ ಬಹಳ ಸರಳ. ಸಕಲ ಪದಾರ್ಥಗಳನ್ನೂ ಹೊತ್ತು ತಿರುಗಬೇಕಾದವರ ಊಟ ಸರಳ ಮತ್ತು ಮಾಡಲು ಸುಲಭವಾಗಿರಬೇಕಾದುದು ಅನಿವಾರ್ಯ. ಅನುಕೂಲವಿದ್ದಾಗ ಬಾರ್ಲಿಯನ್ನು ಹುರಿದು ಹಿಟ್ಟು ಮಾಡಿಡುವುದು ಮತ್ತು ಯಾಕನ್ನು ಕೊಂದು ಹೆಚ್ಚುವರಿ ಮಾಂಸ ಸಿಕ್ಕಾಗ ಸಾಧ್ಯವಾಗುವವರೆಗೆ ಹಸಿಮಾಂಸ, ನಂತರ ಬೇಯಿಸಿದ ಮಾಂಸ ತಿನ್ನುವುದು, ಉಳಿದದ್ದನ್ನು ಅರ್ಧ ಬೇಯಿಸಿ ಒಣಗಿಸುವುದು, ಇಲ್ಲವೆ ಸುಟ್ಟು ಒಣಗಿಸುವುದು. ಇನ್ನೂ ಮಿಕ್ಕಿದ್ದರೆ ಹಾಗೆಯೇ ಒಣಗಿಸಿಡುವುದು. ಪ್ರಯಾಣದಲ್ಲಿದ್ದಾಗ ಹೆಚ್ಚು ಉರುವಲಿನ ಅಗತ್ಯವಿಲ್ಲದ, ಸುಲಭದಲ್ಲಿ ತಯಾರಿಸಬಹುದಾದ ಯಾವುದೇ ರೀತಿ ಪೋಲಾಗದಂತಹ ಊಟದ ವ್ಯವಸ್ಥೆ. ಇವರ ಮುಖ್ಯ ಖಾದ್ಯ ಮಾಂಸ(ಕುರಿ, ಮೇಕೆ, ಯಾಕ್ ) ಬಾರ್ಲಿ ಮತ್ತು ಸಾಕೆನಿಸುವಷ್ಟು ಹಾಲು, ಹೈನು, ಬೆಣ್ಣೆ, ಛೀಜ್, ಗಿಣ್ಣು ಇತ್ಯಾದಿ. ಒಂದೆಡೆ ಡೇರೆ ಹಾಕಿದಾಗ ಸ್ವಲ್ಪ ವಿಶದವಾಗಿ ಊಟದ ತಯಾರಿ. ತ್ಸಾಂಪಾವನ್ನು ಕುದಿವ ಮಾಂಸದ ನೀರಿನಲ್ಲಿ ಹಾಕಿ ತಯಾರಿಸಿದ 'ಥುಕ್ಪಾ'. ನೇಪಾಳದ ಕಡೆ ಭಾರತದ ಗಡಿ ಪ್ರದೇಶಕ್ಕೆ ಹತ್ತಿರ ಬಂದಾಗ ಅಕ್ಕಿ, ಗೋಧಿಯ ಬಳಕೆ– ಅನ್ನ ಚಪಾತಿಯ ರೂಪದಲ್ಲಿ, ಬೆಳಗಿನಿಂದ ಮಲಗುವವರೆಗೆ ಕಡೇಪಕ್ಷ ೫೦ರಿಂದ ೭೦ ಬಟ್ಟಲು ಟೀ ಕುಡಿದಿರುತ್ತಾರೆ. ನೀರಿನಲ್ಲಿ ಚೈನಾ ಟೀ ಹಾಕಿ ಬಹಳ ಹೊತ್ತು ಕುದಿಸಿ ಅದಕ್ಕೆ ಯಾಕ್ ಬೆಣ್ಣೆ, ಉಪ್ಪು ಹಾಕಿ ಬೊಂಬಿನ ಕೊಳವೆಗಳಲ್ಲಿ ಸುರಿದು ಚೆನ್ನಾಗಿ ಕಡಿಯುವರು. ಬೆಣ್ಣೆ ನೀರಿನಿಂದ ಬೇರೆಯಾಗಿ ಮೇಲಕ್ಕೆ ತೇಲಿ ಬರದಂತೆ ಸ್ವಲ್ಪ ಸೋಡ ಉಪ್ಪನ್ನು ಹಾಕುವರು.

ಟೀ ತಯಾರಿಸಿದ ಹಿರಿಯ ಮಹಿಳೆ ನನ್ನ ಕೈಗೂ ಒಂದು ಚಾ ಬಟ್ಟಲು ಹಿಡಿದಳು. ನನ್ನ ಕೈಲಿನ್ನೂ ಬೆರಳಿನ ಸುತ್ತ ತಿರುಗಾಡುತ್ತಿದ್ದ ರೊಟ್ಟಿ ತುಂಡು! ಈಗ ಎಡಗೈಯಲ್ಲಿ ಯಾಕ್ ಬೆಣ್ಣೆಯ ಚಹಾ. ದೂರದಿಂದ ನನ್ನ ಫಜೀತಿ ನೋಡುತ್ತಾ ಕುಳಿತಿದ್ದ ಯಾತ್ರಿಗಳ ಮುಖದಲ್ಲಿ ನಗು ತಡೆ ಹಿಡಿದಿದ್ದ ಕೆಂಪು. ಮನೋಜ್ ಭಯ್ಯನ ರೊಟ್ಟಿ ತಿನ್ನುತ್ತಾ ಚಹ ಕುಡಿದು ಪ್ರೋತ್ಸಾಹಿಸುವ ನಟನೆ. ವಿಚಿತ್ರ ಗಂಧದ ರೊಟ್ಟಿಯನ್ನು ಬಾಯಿಗಿಟ್ಟು ಮತ್ತೊಂದು ಅಪರಿಚಿತ ಪರಿಮಳದ ಬಿಸಿ ಚಹಾ ಗುಟುಕಿಕ್ಕಿದೆ. ರೊಟ್ಟಿ ಒಳಗೆ ಜಾರಿತ್ತು. ನಮ್ಮ ಕಡೆಯ ರಾಗಿ ಗಂಜಿಯ ರುಚಿಗೆ ಹೊಸವಾಸನೆಯ ಬೆಣ್ಣೆಯ ಜೊತೆ ಚಹಾದ ಕಡು ಕಂಪೂ ಸೇರಿತ್ತು. ಆಹಾ, ದೇವಲೋಕದ ಪಾನಿಯ! ಅವರಿಗೇ ಸರಿ. ಗಂಡಸರ ಗುಂಪಿನೆಡೆಗೆ ಹೋಗಿದ್ದರೆ ದೇವತೆಗಳ ಸೋಮರಸವೂ ಸಿಗುತ್ತಿತ್ತೇನೋ. ಅದೇ 'ಛಾಂಗ್' ಅಥವಾ ಟಿಬೆಟೀ ಹೆಂಡ. ಬಾರ್ಲಿಯನ್ನು ಹುಳಿ ಮಾಡಿ ತೆಗೆದ ದೇಸಿ ತೆಳು ಹೆಂಡ. ಮಕ್ಕಳಿಂದ ಹಿಡಿದು ಭಿಕ್ಷುವಿನವರೆಗೆ ಎಲ್ಲರೂ ಕುಡಿಯುವ ಜನಪ್ರಿಯ ಪಾನೀಯ. ಹಬ್ಬ ಉತ್ಸವಗಳಲ್ಲಿ ಇದರ ಬಳಕೆ ಇನ್ನೂ ಹೆಚ್ಚು. ಕುಡಿಯಲು ಬಳಸುವ ಬಟ್ಟಲು ಮರದಿಂದ ಮಾಡಿದುದು. ಶ್ರೀಮಂತರಾದರೆ ಮರದ ಬಟ್ಟಲಿಗೆ ಬೆಳ್ಳಿಯ ತಗಡು. ಅಥವಾ ಚೈನಾದಲ್ಲಿ ಮಾಡಿಸಿದ ಕಲ್ಲಿನ ಬಟ್ಟಲು. ಇನ್ನೂ ಶ್ರೀಮಂತರಾದರೆ ಈ ಬಟ್ಟಲುಗಳಿಗೆ ಬೆಳ್ಳಿಯ ಪೀಠ, ಬೆಳ್ಳಿಯ ಮುಚ್ಚಳ.

ತಿನ್ನುವುದು ಕುಡಿಯುವುದು ಏನೇ ಇರಲಿ ಹೇಗೇ ಇರಲಿ ಬಳಿಗೆ ಬಂದವರನ್ನು ಸ್ವಾಗತಿಸಿ ತಮ್ಮಲ್ಲಿದ್ದುದನ್ನು ಕೊಟ್ಟು ಸತ್ಕರಿಸುವ ರೀತಿ ಮನ ಮೆಚ್ಚುವಂತಹದು. ಅವರವರಲ್ಲೇ ಒಟ್ಟಿಗೇ ತಿನ್ನುವ, ಕುಡಿವ, ಏನಿದ್ದರದನ್ನು ಒಂದೇ ತಟ್ಟೆ-ಚೀಲದಲ್ಲಿ ಹಾಕಿ ಎಲ್ಲರೂ ತಿನ್ನುವ ಪರಿ ಅವರಲ್ಲಿನ ಐಕ್ಯಭಾವವನ್ನು ಸಾದರಪಡಿಸಿತ್ತು.

ದಣಿದು ಮಲಗಿದ ಅರ್ಧಗಂಟೆಯೊಳಗೇ ಉಬ್ಬೆಮನೆಯೊಳಗೆ ಹೋದಂತಾಗಿತ್ತು. ತಣ್ಣಗೆ ಹರಿಯುತ್ತಿದ್ದ ನದೀ ದಡದಲ್ಲಿದ್ದರೂ ಮುಖ ಬೆನ್ನು ಚುರುಗುಟ್ಟಿ ಸೆಕೆಯಾಗತೊಡಗಿತ್ತು. ಹಾಕಿಕೊಂಡಿದ್ದ ಸ್ವೆಟರ್ ಕುಲಾವಿಗಳನ್ನು ಬಿಚ್ಚ ತೊಡಗಿದಾಗ ಬೇಡವೆಂದು ಕುದುರೆತಂಡದವರ ಒತ್ತಾಯ. ಯಾವ ಹೊತ್ತಿನಲ್ಲಾದರೂ ಚಳಿಗಾಳಿ ಬೀಸಲು ಮೊದಲಿಡಬಹುದು, ಮೋಡ ಕವಿದು ಬಿಸಿಲ ಕಾವು ಕುಗ್ಗಬಹುದು ಎಂದು ಈ ಮುನ್ನೆಚ್ಚರಿಕೆ. ಬೇಸಿಗೆ ಕಾಲದಲ್ಲೇ ಈ ಪರಿ ಚಳಿಯಾದರೆ ಚಳಿಗಾಲದಲ್ಲಿ ಹೇಗೆ? ಆಗಿನ ಮಾನಸದ ರೂಪವೇನು? ಈ ಪ್ರಶ್ನೆಯ ಬೆನ್ನೇರಿದ ಬುದ್ಧಿ ಉತ್ತರ ಅರಸಿತ್ತು ಚೈನಾಮ್ಯಾನ್ ಚಾನ್‌ನಲ್ಲಿ ಅವನಿಗೋ ಟಿಬೆಟೀ ಭಾಷೆ ಸರಿಯಾಗಿ ಬಾರದು. ಹಿಂದಿಯಂತೂ ಇನ್ನೂ ಸರಿ. ಇಂಗ್ಲಿಷ್ ಒಂದೇ ಮಾತಾಡಲು ಇದ್ದ ಮಾಧ್ಯಮ. ಅವನಲ್ಲಿಗೇ ಹೋಗಿ ನನ್ನ ಸವಾಲುಗಳ ಸರಮಾಲೆ ಒಟ್ಟಿದ್ದಾಗ ಕಿವಿ ಮುಚ್ಚಿಕೊಂಡು 'ನೀನೊಂದು ಪ್ರಶ್ನೆಗಳ ಭೂತ ನನ್ನ ಬೆನ್ನಿಗೇಕೆ ಬಿದ್ದಿದ್ದೀಯೆ?' ಎಂದು ಓಡಿ ಹೋಗಲೆತ್ನಿಸಿದರೂ ತ್ರಿವಿಕ್ರಮನ ಬೆಂಬಿಡದ ಬೇತಾಳನಂತೆ ಅವನಿಗೇ ಗಂಟು ಬಿದ್ದೆ. ಹುಸಿಮುನಿಸು ತೋರಿದರೂ ತನಗೆ ತಿಳಿದಷ್ಟು ವಿವರಗಳನ್ನಿತ್ತ. ಜೊತೆಗೆ ಸಹಯಾತ್ರಿಯೊಬ್ಬರು ತಂದಿದ್ದ ಪುಸ್ತಕ ಟಿಪ್ಪಣಿಗಳಿಂದ ಸಂಗ್ರಹಿಸಿದ ವಿವರಗಳು ಮಾನಸಸರೋವರ ಮತ್ತು ರಾಕ್ಷಸ ತಾಲದ ವಿಶಿಷ್ಟತೆಯ ಬಗೆಗೆ ಮತ್ತೂ ಅಚ್ಚರಿ ಮೂಡಿಸಿದ್ದವು. ಚಳಿಗಾಲದ ಈ ಅದ್ಭುತವನ್ನು ನೋಡಲಿಕ್ಕಾದರೂ ಚಳಿಗಾಲದಲ್ಲೊಮ್ಮೆ ಇಲ್ಲಿಗೆ ದೀರ್ಘಪ್ರವಾಸ ಬರಬೇಕು.

ಬೇಸಿಗೆ ಮುಗಿದು ಚಳಿಗಾಲ ಆರಂಭವಾದಂತೆ(ಅಕ್ಟೋಬರ್‌ನಲ್ಲಿ) ಮಾನಸ ಸರೋವರದ ಆಸು ಪಾಸಿನ ಪ್ರದೇಶದಲ್ಲಿ ಕೊರೆಯುವ ಚಳಿಗಾಳಿ ಬಿರುಗಾಳಿಯಾಗಿ ಬೀಸತೊಡಗಿ ನೀರಿನ ಉಷ್ಣಾಂಷವನ್ನು ಶೂನ್ಯದ ಕಡೆಗೊಯ್ಯುತ್ತದೆ. ದಕ್ಷಿಣದ ಮಾಂಧಾತ ಪರ್ವತಗಳ ಮೇಲಿನಿಂದ ಬೀಸಿ ಬರುವ ಚಂಡಮಾರುತಗಳು ಸರೋವರದಲ್ಲಿ ಪ್ರಚಂಡ ಅಲೆಗಳನ್ನೆಬ್ಬಿಸುತ್ತಿರುತ್ತವೆ. ಶೀತ ಮಾರುತದ ಈ ಆಟಾಟೋಪ ಕೆಲವೇ ದಿನಗಳದ್ದು ೧೫-೨೦ ದಿನಗಳವರೆಗೆ. ನೀರಿನ ಉಷ್ಣಾಂಷ ಕಡಿಮೆಯಾಗುತ್ತಿದ್ದಂತೆ ಸುತ್ತಲಿನ ಜಲಸ್ರೋತಗಳೂ ಶೂನ್ಯಕ್ಕೆ ಬಂದು ಹೆಪ್ಪುಗಟ್ಟಿಬಿಡುತ್ತವೆ. ಹಾಗೆಯೇ ಸರೋವರವೂ ಕೂಡ ಅಂಚಿನಿಂದ ಆರಂಭವಾಗಿ ಮೂರುದಿನಗಳಲ್ಲಿ ಇಡೀ ಸರೋವರದ ಮೇಲ್ಪದರ ಶ್ವೇತವರ್ಣದ ನೀರ್ಗಲ್ಲ ಹಾಸುಬಂಡೆಯಾಗಿರುತ್ತದೆ. ಅಮೃತಶಿಲೆಯಂತಹ ಹಾಸುಗಲ್ಲು! ರೋಮಾಂಚನ ತರುವ ಈ ದೃಶ್ಯದ ನಿರ್ದೇಶಕಿ ಪ್ರಕೃತಿ. ಈ ಲೀಲೆಯನ್ನಾಡುವ ದೇವರಿಗೆ ದಡದ ಮೇಲಿರುವ ಹಳ್ಳಿಗಳ ಜನರಿಂದ ಜಯ ಘೋಷ, ಉಘೇ ಉಘೇ ಪೂಜೆ-ಉತ್ಸವ.

೩-೪ ಅಡಿ ದಪ್ಪನೆಯ ಈ ಹಾಸು ಬಂಡೆಯ ಏಕರೂಪತೆ ಒಂದೆರಡು ದಿನಗಳು ಮಾತ್ರ. ನೀರ್ಗಲ್ಲ ಕೆಳಗಿನ ನೀರು ಮೊದಲಿನಂತೆಯೇ ರಾಕ್ಷಸತಾಲಕ್ಕೆ ಹರಿದು ಹೋಗುತ್ತಿರುತ್ತದೆ. ಆದರೆ ಮೇಲಿನಿಂದ ಬರಬೇಕಾದ ನೀರಿನ ಝರಿಗಳು ಹೆಪ್ಪುಗಟ್ಟಿರುವುದರಿಂದ ನೀರಿನ ಕೊರತೆಯುಂಟಾಗುತ್ತದೆ. ಇದರಿಂದಾಗಿ ಮೇಲ್ಪದರದ ಕೆಳಗೆ ನೀರಿನ ಮೇಲ್ಮೈನ ನಡುವೆ ಖಾಲಿ ಜಾಗ ಉಂಟಾಗಿ ನೀರ್ಗಲ್ಲು ತನ್ನ ಭಾರಕ್ಕೆ ತಾನೇ ಕುಸಿಯತ್ತಲೇ ಅನೇಕ ಕಡೆಗಳಲ್ಲಿ ಸಣ್ಣ ದೊಡ್ಡ ಬಿರುಕುಗಳಾಗಿ ಸರೋವರವು ಛಿದ್ರಛಿದ್ರವಾದ ಕನ್ನಡಿಯಾಗುತ್ತದೆ. ಸರೋವರದ ಒಳಗಿರುವ ಬಿಸಿ ನೀರಿನ ಊಟೆಗಳೂ ಈ ರೀತಿಯ ಬಿರುಕಿಗೆ ಕಾರಣವಾಗುತ್ತವೆ. ಹೀಗೆ ಬಿರಿದು ಸ್ಫೋಟಗೊಂಡ ಸದ್ದು, ಬಿರಿದ ನೀರ್ಗಲ್ಲ ಖಂಡಗಳು, ಹಿಮದ ಹಲಗೆಗಳು ನೀರೊಳಗೆ ಬೀಳುವ ಸದ್ದು, ತುಂಡುಗಳು ಒಂದನ್ನೊಂದು ಢಿಕ್ಕಿ ಹೊಡೆಯುವ ಸದ್ದು, ಹಿಮಶಿಲೆಗಳ ನಡುವಿನ ಸಂದುಗಳಲ್ಲಿ ಬೀಸುವ ಗಾಳಿ ನುಗ್ಗಿ ಹೊರಡಿಸುವ ವಿವಿಧ ಸ್ವರಗಳ ಸದ್ದು - ಎಲ್ಲವೂ ಕಿವಿಗಡಚಿಕ್ಕುವಂತೆ ಮಾಡಿದರೆ ನೋಡಲು ಕೂಡ ಭಯಾನಕವೆನ್ನುವಂತೆ ವಿಧ ವಿಧ ಗಾತ್ರದ, ಆಕೃತಿಯ ಬಂಡೆಗಳು ಒಂದನ್ನೊಂದು ಉರುಳಿಸುತ್ತಾ ತೀರದ ಕಡೆಗೆ ಧಾವಿಸುತ್ತಾ ನೀರಮೇಲೇರಿ ಮತ್ತೆ ಮುಳುಗೇಳುತ್ತಿರುತ್ತವೆ. ಘನೀಕರಿಸಿದ ನೀರ ಅಲ್ಲೋಲ ಕಲ್ಲೋಲ! ಎದೆ ಝಲ್ಲೆನಿಸುವ ದೃಶ್ಯ ರುದ್ರ ರಮಣೀಯ.

ಈ ರೀತಿಯ ಕ್ಷೋಭೆ ಸುಮಾರು ಒಂದು ತಿಂಗಳವರೆಗೆ ನಡೆದು ಸರೋವರ ಬಸವಳಿದಂತಾಗಿ ತುಸುವೇ ಶಾಂತವಾಗುತ್ತದೆ. ವಸಂತ ಋತು ಕಾಲಿಟ್ಟು ಉಷ್ಣಾಂಶ ಏರಿದಂತೆ ನೀರು ಕರಗಲು ಮೊದಲಿಟ್ಟುದೇ ಕಾರಣ ಮತ್ತದೇ ತಲ್ಲಣ, ಸದ್ದುಗದ್ದಲ, ಬಂಡೆಗಳ ಹೊಡೆದಾಟ, ಉರುಳಾಟ. ಮತ್ತೊಂದು ತಿಂಗಳ ನರಳಾಟದ ನಂತರ ಸರೋವರ ಕರಗಿ ಮೊದಲಿನಂತಾಗುತ್ತದೆ. ಮನೋಹಾರಿ ಚೇತೋಹಾರಿ ನೀಲ ನೀರೆಯಾಗಿ ಸೌಂದರ್ಯದ ಖನಿಯಾಗುತ್ತದೆ. ಆಗ ಮತ್ತೊಮ್ಮೆ ಪುರಜನರಿಂದ ಪವಿತ್ರ ಜಲಮಾತೆಗೆ ಆದರದ ಸ್ವಾಗತ, ಉತ್ಸವದ ಶುಭಾಶಯ, ಆನಂದದ ನಮನ -ನರ್ತನ. ಆವಳ ಒಡಲಿನಲ್ಲಿ ಮತ್ತೊಮ್ಮೆ ಬಾತುಕೋಳಿಗಳ ಜೋಡಿ ನಿರಾತಂಕವಾಗಿ ತೇಲುತ್ತಾ ಸಾಗಿರುತ್ತವೆ.

ಮಾನಸ ಸರೋವರದಲ್ಲಾಗುವ ಈ ಅಲ್ಲೋಲಕಲ್ಲೋಲ ಸ್ಫೋಟಗಳು ರಾಕ್ಷಸತಾಲದಲ್ಲಿ

ಕಂಡು ಬರುವುದಿಲ್ಲ. ಇಂತಹುದೇನಿದ್ದರೂ ರಾಕ್ಷಸತಾಲದ ಅಂಚಿಗೆ ಸೀಮಿತ. ಇದಕ್ಕೆ ಕಾರಣ ಹೆಪ್ಪುಗಟ್ಟಿದ ಮೇಲ್ಪದರಕ್ಕೆ ತಾಗಿದಂತೆಯೇ ನೀರಿನ ಮಟ್ಟವಿರುತ್ತದೆ. ಸಟ್ಲೆಜ್ ನದಿಯೊಳಗೆ ರಾಕ್ಷಸತಾಲದ ನೀರು ಹರಿದು ಹೋದರೂ ಅದಕ್ಕೆ ಬದಲಾಗಿ ಮಾನಸ ಸರೋವರದಿಂದ ಬರುವ ಗಂಗಾಛು ನದಿಯ ನೀರು ಇರುತ್ತದೆ. ಅದೂ ಹೆಪ್ಪುಗಟ್ಟಿದರೆ ಭೂಗತ ತೊರೆಗಳು ಮಾನಸದ ನೀರನ್ನು ತಂದು ಹಾಕುವುದರಿಂದ ನೀರಿನ ಮಟ್ಟ ಒಂದೇ ಸಮವಿರುತ್ತದೆ. ಹೀಗಾಗಿ ಬಿರುಕು ಬಿಡುವ ಸಂಭವವಿಲ್ಲ. ಬಿರುಕು ಬಂದರೂ ಹಿಮ ಪದರ ಕುಸಿಯುವ ಅವಕಾಶವಿರುವುದಿಲ್ಲ. ಹೆಪ್ಪುಗಟ್ಟಿದ ರಾಕ್ಷಸತಾಲದ ಮೇಲೆ ಯಾಕ್, ಕುರಿ ಕುದುರೆಗಳ ಮೇಲೆ, ಸಾಮಾನು ಸಾಗಿಸಿಕೊಂಡು ಹಳ್ಳಿಗಳಿಗೆ ಜನರು ಓಡಾಡುವುದು ಸಾಮಾನ್ಯ.

ಮಾನಸ ಸರೋವರಕ್ಕಿಂತಲೂ ೨-೩ ವಾರಗಳ ಮೊದಲೇ ರಾಕ್ಷಸತಾಲ ಹೆಪ್ಪುಗಟ್ಟುವುದು ಮತ್ತು ಮಾನಸವು ಕರಗಿದ ತಿಂಗಳನಂತರ ರಾಕ್ಷಸತಾಲ ಕರಗಿ ನೀರಾಗುವುದು. ಇಲ್ಲಿ ಹೆಪ್ಪುಗಟ್ಟಲು ಹಾಗೂ ಕರಗಲು ಹೆಚ್ಚು ವೇಳೆ ಹಿಡಿಯುತ್ತದೆ. ಏಕೆಂದರೆ ರಾಕ್ಷಸ ತಾಲದ ನೀರಿನ ಉಷ್ಣಾಂಶ ಮಾನಸದ ನೀರಿಗಿಂತಲೂ ಕಡಿಮೆಯಿರುವುದು. ಮಾನಸಕ್ಕೆ ದಕ್ಷಿಣದಲ್ಲಿ ಮಾಂಧಾತ ಪರ್ವತಗಳ ಗೋಡೆಯಿದ್ದಂತೆ ರಾಕ್ಷಸತಾಲಕ್ಕೆ ಇಲ್ಲದೆ, ಬಯಲು ಪ್ರದೇಶವಿದ್ದು ದಕ್ಷಿಣದಿಂದ ಬೀಸಿ ಬರುವ ಚಳಿಗಾಳಿ ರಾಕ್ಷಸತಾಲವನ್ನು ಶೀತಲತರವಾಗಿಸುತ್ತದೆ. ಅಕ್ಕ ಪಕ್ಕದ ಸರೋವರಗಳೇ ಆಗಿ ಒಂದೇ ವಾಯುಗುಣವಿದ್ದರೂ, ಒಂದೇ ಭೂಮಟ್ಟದಲ್ಲಿದ್ದರೂ ಒಂದೇ ನೀರಿನಮೂಲವಿದ್ದರೂ ಎರಡರ ಪ್ರಕೃತಿ-ರೂಪ-ಸ್ವಭಾವಗಳಲ್ಲಿ ಭಿನ್ನತೆಯೆನ್ನುವುದು ವಿಶೇಷ ಸಂಗತಿ. ನಿಸರ್ಗದತ್ತ ಸೌಂದರ್ಯದಲ್ಲಿ ಎರಡೂ ಸರಿಸಾಟಿಯಾದವುಗಳೇ! ತಮ್ಮದೇ ಆದ ವಿಶಿಷ್ಟ ರಮಣೀಯತೆಯನ್ನು ಹೊಂದಿರುವುವು.

ರವಿ ನಡುನೆತ್ತಿಯಿಂದ ಪಶ್ಚಿಮದ ಕಡೆಗೆ ವಾಲಿಕೊಂಡಂತೆ ನಮ್ಮಲ್ಲೂ ಗುರಿ ತಲುಪುವ ಆತುರ ಮೂಡಿತ್ತು. ನಮ್ಮ ನಡಿಗೆಯ ವೇಗದ ಮಿತಿಯೂ ಅರಿವಿಗೆ ಬಂದಿತ್ತು. ಆರಾಮವಾಗಿ ಮಲಗಿ ಹರಟೆ ಹೊಡೆದಿದ್ದ ಟಿಬೆಟೀ ಬಂಧುಗಳನ್ನು ತ್ವರೆಗೊಳಿಸಿ ಹೆಜ್ಜೆಹಾಕಿದೆವು-ಮಾಂಧಾತ ಪರ್ವತದ ಬುಡಕ್ಕೆ-ದಕ್ಷಿಣದಿಕ್ಕಿಗೆ. ಟಿಬೆಟೀಯರು ಕುದುರೆಗಳ ಮೇಲೆ ಮತ್ತೆ ಸಾಮಾನು ಕಟ್ಟಿ, ನಮ್ಮನ್ನು ಸೇರಿಕೊಳ್ಳುವಲ್ಲಿ ನಾವು ಮೂರು ಕಿ.ಮೀ ನಡೆದಿದ್ದೆವು. ಸರೋವರದ ದಂಡೆಯಲ್ಲೇ ಎಷ್ಟು ದೂರ ನಡೆದು ಬಂದರೂ ಇನ್ನೂ ಚಿದಂಬರನ ಸಭೆಯಲ್ಲೇ ಇದ್ದೆವು. ಇಲ್ಲೆಲ್ಲೇ ಇರಲಿ ಉತ್ತರಾಭಿಮುಖವಾಗಿ ನೋಡಿದರೆ ಕೈಲಾಸ ಶಿಖರ ದರ್ಶನವಾಗುತ್ತಿತ್ತು. ನಮ್ಮ ಚಿತ್ತ ಸಭೆಯಲ್ಲಿಯೂ ಶಿವಾಗಮನ ಶಿವಾರೋಹಣ ನಡೆದಿತ್ತು.

ಕುದುರೆ ಕಂಡಕೂಡಲೇ ಕಾಲು ನೋವು ಸಹಜವಾಗಿ ಹೋಗಿತ್ತು. ಹತ್ತಿ ಇಳಿದು ನಡೆವ ಸರ್ಕಸ್ ಮತ್ತೆ ಆರಂಭ. ಮಾಂಧಾತದಿಂದ ಹರಿದು ಬಂದಿದ್ದ ಒಂದೆರಡು ತೊರೆಗಳನ್ನು ದಾಟಿದೆವು. ನಲವತ್ತೆರಡು ಕಿ.ಮೀನಲ್ಲಿ ಎಷ್ಟು ಮುಗಿಸಿದ್ದೇವೆ ಎಂಬ ಚರ್ಚೆ ದಾರಿಯುದ್ದಕ್ಕೂ. ಈ ಚರ್ಚೆಗೆ ಸೇರಿದಂತೆ 'ಹಾಯ್ ದೇವಾ' 'ಓ ಗಾಡ್!' 'ಇನ್ನೆಷ್ಟು ದೂರ' 'ಸ್ವಲ್ಪ ನಿಲ್ಲಿ. ನೀರಿದೆಯೇ ದಯವಿಟ್ಟು ಕೊಡಿ'-ಇವೆಲ್ಲಕ್ಕೆ ತಾತ್ಕಾಲಿಕ ಬಿಡುವು ಕೊಟ್ಟವನು ಮಾಂಧಾತ ಮುನಿ, ಅವನ ತಪೋಭೂಮಿ. ಪರ್ವತಗಳ ನೋಟವನ್ನು ಆಸ್ವಾದಿಸಲು, ಎದೆಯೊಳಗೆ ತುಂಬಿಕೊಳ್ಳಲು, ಫೋಟೊ ತೆಗೆದುಕೊಳ್ಳಲು ಅರ್ಧಗಂಟೆಯ ವಿರಾಮ ಮಂಜೂರಾಯಿತು. ಜುಂಯ್‌ಗುಡುತ್ತಿರುವ ದುಂಬಿ

ಮಧುಪಾನ ಮಾಡುವಾಗ ನಿಶ್ಶಬ್ದವಾಗುವಂತೆ ನಾವೆಲ್ಲ ಗಪ್ ಚಿಪ್-ಆ ಮುಸಿಯಂತೆಯೇ ಮೌನಿಗಳಾಗಿದ್ದೆವು.

ಕತ್ತು ಹೊರಳಿಸಿದರೆ ನೀಲಮಣಿ ಮಾನಸಸರೋವರ, ಅದರ ಆ ತುದಿಗೆ ಬೆಳ್ಳಿಯ ಗುಬುಟು ಕೈಲಾಸ. ಈ ಬದಿಗೆ ಬೆಳ್ಳಿಯ ಉಂಗುರದಂತೆ ಹರಿದಿದ್ದ ಬ್ರಹ್ಮಪುತ್ರ ನದಿ. ಈ ಕಡೆಗೆ ತಿರುಗಿದರೆ ಮಹಾನ್ ಹಸ್ತವೊಂದರ ಬೆರಳಿನುಗುರುಗಳು ಆಕಾಶವನ್ನೆಲ್ಲ ಮುಷ್ಟಿಯಲ್ಲಿ ಹಿಡಿಯುವಂತೆ ತೋರಿದ್ದ ಮಾಂಧಾತ ಶಿಖರಗಳು.

ಬೃಹತ್ತಾದುದನ್ನು ದಿವ್ಯವಾದುದನ್ನು, ಇಂದ್ರಿಯಾತೀತದ ಅನುಭವವನ್ನು ನಮ್ಮ ಪ್ರಜ್ಞೆಯ ಪರಿಧಿಯೊಳಗೆ ತರಬೇಕಾದರೆ ಈ ರೀತಿ ಅವನ್ನು ಕುಗ್ಗಿಸುವ(ಸ್ಕೇಲ್ ಇಟ್ ಡೌನ್ ಟು ಅವರ್ ಸೈಜ್)ಅನಿವಾರ್ಯತೆ. ಅದಕ್ಕಾಗಿ ಅಮೂರ್ತವನ್ನು ಮೂರ್ತಗೊಳಿಸುವ ಪ್ರಯತ್ನ ಮನುಷ್ಯ ಪ್ರಯತ್ನ. ಪ್ಲೇಟೋ ಹೇಳಿದಂತೆ ಸತ್ಯಕ್ಕೆ ಅಷ್ಟು ದೂರ! ಇದ್ದಾರು ಕವಿಗಳು ಯೋಗಿಗಳು ಚಿಕ್ಕ ಕೆರೆಯಲ್ಲಿ ಮಾನಸ ಸರೋವರವನ್ನು ಬೆಳೆಸುವವರು. ಕೊಳವನ್ನೇ ಹಿಗ್ಗಿಸುವವರು ಪುಟ್ಟ ಬೆಟ್ಟದಲ್ಲಿ ಕೈಲಾಸ ಪರ್ವತಕಾಣುವವರು ಆರೋಹಿಸುವವರು ವಿಶ್ವಚೇತನರು. ಕವಿಯ ಒಳಗಣ್ಣಿಗೆ ಕಾಣುವುದನ್ನು ಹೊರಗಣ್ಣಿನಿಂದ ನೋಡುವ ಭಾಗ್ಯ ನನ್ನದಾಗಿತ್ತು.

ನಲವತ್ತೈದು ಕಿ.ಮೀ ದಾರಿ ಸವೆಸಿದ ದಣಿವಿನಲ್ಲಿ ಚುಗು ಕ್ಯಾಂಪ್ ತಲುಪುತ್ತಿರುವಂತೆಯೇ ಸಂಜೆ ಬಿಸಿಲಿನಲ್ಲೇ ಮೋಡವಿಲ್ಲದ ಆಗಸದಿಂದ ಹೂಮಳೆ ಮೊದಲಾಯಿತು. ಚಳಿಯಾಗಹತ್ತಿ ಕೈಕಾಲುಗಳು ಶಾಖವನ್ನರಸಿದ್ದವು. ಬಹು ದೂರ ನಡೆದುಬಂದು ಗಂಟಲೊಣಗಿ ಕಾಫಿ ಚಹಾಗಾಗಿ ತಹತಹ. ನೇರ ಮೇನೆಜರ್‌ನ ಅಡುಗೆಯ ಕೋಣೆಗೆ ಹೋದರೆ, ಆಗಲೇ, ಭರ್ರ್ ಎಂದು ಉರಿಯುತ್ತಿದ್ದ ಪ್ರೆಶರ್ ಸ್ಟೌನ ಅಕ್ಕ ಪಕ್ಕದಲ್ಲಿ ಹಲವಾರು ಕೈಗಳು ನರ್ತಿಸುತ್ತಿದ್ದವು. ಕೆಲವೇ ನಿಮಿಷಗಳಲ್ಲಿ ಮಳೆ ನಿಂತುಹೋಯಿತು. ಲಗ್ಗೇಜ್‌ನಿಂದ ಚಹಾ ಪುಡಿ, ಸಕ್ಕರೆ ತರಲೆಂದು ಅಡುಗೆ ಕೋಣೆಯಿಂದ ಹೊರಬಂದಾಗ ಮತ್ತೊಂದು ಸಂಜೆಯ ರಂಗಿನಾಟ ನಡೆದಿತ್ತು. ಚುಗು ದೇವಾಲಯದ ಮೈದಾನದಲ್ಲಿ ಆಗಸಕ್ಕಿಟ್ಟ ತಲೆಬಾಗಿಲಂತೆ ಅರ್ಧ ಗೋಳದಲ್ಲಿ ಮೂಡಿದ್ದ ಕಾಮನ ಬಿಲ್ಲಿನ ಎರಡೂ ತುದಿಗಳು ಭೂಮಿಯೊಳಗೆ ನಾಟಿ ಪೂರ್ಣ ಧನುಸ್ಸು ಮೂಡಿತ್ತು. ಎಲ್ಲರನ್ನೂ ಕೂಗಿ ಕರೆಯುತ್ತಲೇ ಕ್ಯಾಮರಾ ತರಲು ಒಳಗೋಡಿದೆ ಹುಚ್ಚಿಯಂತೆ.

ನೋಡ ನೋಡುತ್ತಲೇ ತಲೆಬಾಗಿಲ ಹಿಂದೆ ಮತ್ತೊಂದು ಕಾಮನ ಬಿಲ್ಲು ಮೂಡಿತ್ತು. ಎರಡೆರಡು ಬಿಲ್ಲು ಹಿಡಿದ ಕಾಮದೇವ ನಮ್ಮ ಮನವನ್ನು ಝಲ್ಲರಿಮಾಡಿದ್ದ. ಹೋರೆ ಕ್ಯಾಂಪ್‌ನ ಸಂಜೆಯೇ ಸಾರ್ಥಕವೆಂದಿದ್ದ ನಮಗೆ ಇಂದಿನ ಸಂಜೆ ಸ್ವರ್ಗದ ಬಾಗಿಲನ್ನೇ ತೆರೆದಿತ್ತು

ಸಂಜೆಗೆಂಪು ಸರೋವರದ ಮೇಲೆ ಹರಡಿದಂತೆ ಅದರಲ್ಲಿ ಬಾತುಕೋಳಿ ಜೋಡಿಗಳ ಸಾಲು ಮುಳುಗುತ್ತಿದ್ದ ಸೂರ್ಯನಿಗೆ ಬೆನ್ನು ಮಾಡಿ ಪೂರ್ವದಿಕ್ಕಿಗೆ ಕಾಮನ ಬಿಲ್ಲಿನೊಳಗೆಂಬಂತೆ ಹೊರಟಿತ್ತು. ಮುಂದಿದ್ದ ಜೋಡಿಯ ಇಕ್ಕೆಲದಿಂದ ಕರ್ಣರೇಖೆಯಾಗಿ ಹೊರಟ ನೀರ ಅಲೆಗಳು-ದಡದಿಂದ ಬಾಣದಂತೆ ಕಂಡಿತ್ತು. ಮಾನಸ ಸರಸಿ ನಮ್ಮೆದೆಗೇ ಗುರಿಯಿಟ್ಟು ಬಿಟ್ಟ ಈ ಬಾಣ ಆಳವಾಗಿ ನಾಟಿತ್ತು. ಹಿಂದೊಂದು ಜೋಡಿ ಶಿಸ್ತಿನಲ್ಲಿ, ಎರಡೆಳೆಯಾಗಿ ಮುಂದಿನದನ್ನು ಅನುಸರಿಸಿದ್ದ

ಬಗೆ, ಗುರಿಯ ಕಡೆಗೇ ನೇರವಾಗಿ ಸಾಗಿದ್ದ ಏಕಲಕ್ಷ್ಯಭಾವದ ರೀತಿ. ಮೈಸೂರು ದಸರಾ ಮೆರವಣಿಗೆಯನ್ನು ನೀವಳಿಸಿ ಒಗೆಯುವಂತಿತ್ತು. ಈ ಮರವಣಿಗೆ ದೇವರಿಗಾಗಿ ಹೂರಟಮೆರವಣಿಗೆ, ದೇವಿಯೇ ನಡೆಸಿದ್ದ ಮೆರವಣಿಗೆ. ಮಾನವ ಎಂದೆಂದಿಗೂ ಅನುಕರಿಸಿ, ನಡೆಸಲಾಗದ ಮೆರವಣಿಗೆ. ಅನೇಕ ನದಿಗಳ ಜನನಿ, ಪುರಾಣ ಕಥೆಗಳ ನಾಯಕಿ ಮಾನಸ ಸರೋವರ ವಿಷಯವಾಗಿಯೂ ಪ್ರಕೃತಿ ರಚಿಸಿದ ದೇವ ಕಣ್ಣಿಗೆ ಪ್ರಕೃತಿ ಬರೆದ ಉತ್ಕೃಷ್ಟ ಕಾವ್ಯ, ಚಿತ್ರಸಿದ ಅಮೋಘ ವರ್ಣ ಚಿತ್ರ. ಧನ್ಯೋಸ್ಮಿ ಧನ್ಯೋಸ್ಮಿ ಎಂದು ಮನ ಸಾವಿರ ಸಲ ಬೊಬ್ಬಿಟ್ಟು ಕುಣಿದಿತ್ತು.

ಈ ಸಂಜೆಯ ಬಗೆಗೆ ಯಾರಿಂದಲೂ ಮಾತೇ ಇಲ್ಲ. ಅನಿರ್ವಚನೀಯವಾಗಿತ್ತು ಸಂಜೆ. ಎಲ್ಲರ ನಿರ್ಧಾರ ಒಂದೇ ಪ್ರತಿ ಸಂಜೆಯೂ ರವಿಯನ್ನು ಬೀಳ್ಕೊಡಲು ಪಶ್ಚಿಮಕ್ಕಭಿಮುಖವಾಗಿ ನಿಂತು 'ಸಂಧ್ಯಾವಂದನೆ' ಮಾಡಬೇಕೆಂದು.

ಒಂದು ವಿಶೇಷವೆಂದರೆ ಈ ಎಲ್ಲ ರಂಗಿನಾಟ ನಡೆಯುವಾಗ ನಮಗೆ ಸೂರ್ಯನ ನೇರ ದರ್ಶನವಾಗದಿದ್ದುದು. ಕಾರಣ ಅವನು ಮುಳುಗುವ ಹೊತ್ತಿಗೆ ದಿಗಂತಕ್ಕೆ ಬೆಟ್ಟಗಳು ಅಡ್ಡ ಬಂದಿರುತ್ತಿದ್ದವು. ಸೂರ್ಯನು ಪ್ರಖರನಾಗಿರುವಾಗಲೇ ಬೆಟ್ಟಗಳ ಹಿಂದೆ ಇಳಿದು ಹೋಗಿರುತ್ತಿದ್ದನು. ಕಾಣದ ರವಿಯ ಕಿರಣಕರಗಳು ಕುಂಚವಾಡಿಸಿದ ಇಂತಹ ಸಂಜೆಗಳೆಷ್ಟೊ?

ಸೂರ್ಯೋದಯದ ವೇಳೆಯಲ್ಲಿ ಇದೇ ರೀತಿ ಶಿಖರಗಳ ಮೇಲಿನ ತಾಮ್ರದ ನಂತರ ಚಿನ್ನದ ನಂತರ ಬೆಳ್ಳಿಯ ಹೊದಿಕೆಗಳು, ನೀರ ಮೇಲೆ ಚಾಚಿಕೊಂಡ ಅರುಣ ಪಥ ರತ್ನ ಕಾಂತಿಯೆಸೆವ ಮರಳಕಣಗಳು, ಪಂಚವರ್ಣದ ಮೋಡಗಳು ಎನಿತೂ ಕಾಣ್ಕೆಗಳು ಪರೋಕ್ಷ ಕರಗಳಿಂದಾದವು.

ಚುಗು ಕ್ಯಾಂಪ್ ದಕ್ಷಿಣಾಭಿಮುಖವಾಗಿದ್ದ ಮಾಂಧಾತ ಪರ್ವತಗಳು ಕೋಟೆಯಂತೆ ಕಾವಲಿದ್ದವು. ಕೋಣೆಯ ಕಿಟಕಿಗಳಿಂದ ಸರೋವರ, ಅದರ ನೆತ್ತಿಯಲ್ಲಿದ್ದ ಕೈಲಾಸ ಶಿಖರದ ನೋಟ-ಪೂರ್ಣ ಕತ್ತಲಾವರಿಸುವವರೆಗೆ ಕಿಟಕಿಗೇ ತಾಗಿದಂತೆ ಕುಳಿತು ಹರಟೆ, ಅಂದಿನ ಅನುಭವಗಳ ಸಂಗತಿಗಳ ವಿನಿಮಯ, ಆಹಾ ಒಹೊಗಳ ನಡುವೆ ಡೈರಿಯಲ್ಲಿ ಬರೆದಿಡುವ ಪ್ರಯಾಸ. ಇಷ್ಟೆಲ್ಲ ಮಾತುಕತೆಯಾಡಿದರೂ ಒಂದು ಸಮಸ್ಯೆ ಮೂವರೂ ಗೆಳತಿಯರ ಬಾಯಿಯವರೆಗೆ ಬಂದು ಒಳಗೆ ಸರಿದಿತ್ತು. ಸಮಸ್ಯೆ ಹೊಟ್ಟೆ ಖಾಲಿ ಮಾಡಿಕೊಳ್ಳುವ ಬಗೆ ಹೇಗೆಂದು. ಟಕಲಾಕೋಟ್ ಬಿಟ್ಟಾಗಿನಿಂದ ಹೊಟ್ಟೆ ಕಟ್ಟಿದುದಾಗಿತ್ತು. ಮಾರನೇ ದಿನಕ್ಕಾದರೂ ಈ ಕೆಲಸ ಅನಿವಾರ್ಯವಾಗಿತ್ತು. ಅಲ್ಲಿ ಶೌಚಾಲಯವೇಕೆ- ಅಡ್ಡ ಗೋಡೆಯ ಮರೆಯೂ ಇಲ್ಲದಂತಹ ಸ್ಥಿತಿ. ಮರೆ ಬೇಕೆಂದರೆ ಪೊದೆಗಳನ್ನರಸುವ ಬದಲಿಗೆ ಬೆಟ್ಟಗುಡ್ಡಗಳ ಮರೆಗೆ ಅಂದರೆ ಒಂದು ಕಿ.ಮೀ ದೂರವಾದರೂ ಹೋಗಬೇಕು! ಒಂಟಿಹೋಗುವ ಧೈರ್ಯ ಯಾರಿಗೂ ಇಲ್ಲ. ಪರಿಹಾರವೊಂದೇ. ಬೆಳಕು ಹರಿವ ಮುನ್ನವೇ ಕತ್ತಲೆಯ ಉಪಯೋಗ ಪಡೆದು ಕೆಲಸ ಮುಗಿಸುವುದು. ಇದೂ ಒಂದು ವಿಶೇಷ ಅನುಭವ. ಟಿಬೆಟ್ಟಿನ ಅಮಾವಾಸ್ಯೆಯ ಕತ್ತಲೆಯ ಗೋಡೆಯೊಳಗೆ ನಕ್ಷತ್ರಗ ಛಾವಣಿ ತಂಗಾಳಿಯಲ್ಲಿ ನಡುಗುತ್ತ ಕೆಲಸಮುಗಿಸಿದ ಅನುಭವ.

ನಿನ್ನೆ ಹೋರೆಯಲ್ಲಿ ಕ್ಯಾಂಪ್‌ಗೆ ಸೇರಿದ 'ಟಾಯ್ಲೆಟ್'ನೊಳಗೆ ಇಣಕಿ ನೋಡಿದ್ದೆ,

ಭೂತದ ಕಾರ್ಯಾಗಾರವನ್ನು ಕಂಡವರಂತೆ ಮೂಗು ಮುಚ್ಚಿ ಕಣ್ಣುಮುಚ್ಚಿ ಓಮೆಟ್ಟಿದ್ದೆವು. ಗಾಜಿನ ಚೂರುಗಳು, ಮೂಳೆ ತುಂಡುಗಳು ಮುರಿದ ಚಾಕು ಚೂರಿ ಹಿಡಿಗಳು, ಹಳೇ ಬೂಟುಗಳ ಅವಶೇಷಗಳು ಕಣ್ಣಿಗೆ ಕ್ಷಣದಲ್ಲಿ ಗೋಚರಿಸಿದ ವಸ್ತುಗಳು. ಇನ್ನೇನೇನಿತ್ತೋ ಭೂತಕ್ಕೂ ಗೊತ್ತಿರಲಾರದು. ಹಿಂದೆ ಬಂದಿದ್ದ ಯಾತ್ರಿಗಳು ಚುಗು ಕ್ಯಾಂಪ್ ವಾಸಿ ಎಂದಿದ್ದರಿಂದ ತುರ್ತು ಕೆಲಸವನ್ನು ಮುಂದೂಡಿದ್ದೆವು. ಒಂದರ್ಥದಲ್ಲಿ ಚುಗುವಾಸಿ. ಶೌಚಾಲಯದ ಸೋಗು ಇರಲಿಲ್ಲ. ಪೂರಾ ಬಯಲೇ ನಮಗಾಗಿ ತೆರೆ ದಿತ್ತು. ಹಾಸ್ಯದ ಮಾತಿರಲಿ. ನಿಜ ಪರಿಸ್ಥಿತಿ ಶೋಚನೀಯ. ಮೂರು ದಿನದ ತೊಂದರೆಗಂತೂ ಇನ್ನೂ ಸರಿ. ಇಲ್ಲಿನ ಮಹಿಳೆಯರ ಪಾಡೇನು? ಅಥವಾ ನಮ್ಮ ಅವಶ್ಯಕತೆ ಯೇ ಅತಿರೇಕದ್ದೆ? ಬಟನ್ ಒತ್ತಿದೊಡನೆ ನೀರು ಬಸಿಯುವ, ಸದಾ ನೀರು ಕೊಡುವ ಕೊಳಾಯಿಯ ಟಾಯ್ಲೆಟ್ ಗಳ ಕಲ್ಪನೆಯಾದರೂ ಈ ಮಹಿಳೆಯರಿಗಿದೆಯೇ?ಪ್ರಪಂಚದ ಎಷ್ಟು ಮಹಿಳೆಯರಿಗೆ ಶೌಚಾಲಯದ ಸೌಲಭ್ಯವಿದೆ? ನಮ್ಮೊಡನಿದ್ದ? ಟಿಬೆಟೀ ಮಹಿಳೆಯನ್ನೂ ವಿಚಾರಿಸಲು ಭಾಷೆ ಬರದು. ಅವರಲ್ಲಿಯೂ ಏನಾದರೊಂದು ವ್ಯವಸ್ಥೆಯಿದ್ದರಲೇಬೇಕಲ್ಲ! ಅಥವಾ ತಮ್ಮ ಪಾಡನ್ನು ಉತ್ತಮ ಪಡಿಸಲಾರದೆ ಪರಿಸ್ಥಿತಿಗೆ ಒಪ್ಪಿಕೊಂಡವರಿರಬೇಕು. ಅವರ ಪಾಡಿರಲಿ ಬಹುದೂರದಿಂದ ಯಾತ್ರೆಗೆಂದು ಸರಕಾರಕ್ಕೆ ಅಪಾರ ಹಣತೆತ್ತು ಬಂದಿದ್ದ ಪರದೇಸಿಗಳಿಗೆ-ಕ್ಯಾಂಪ್‌ನಲ್ಲಿ ಮೂಲರೂಪದ ಶೌಚಾಲಯವನ್ನಾದರೂ ಒದಗಿಸುವ ಸೌಜನ್ಯ ಸರಕಾರಕ್ಕಿರಬೇಕಿತ್ತೆಂದು ಯಾತ್ರಿ ಜನರ ಅಭಿಮತ.

ಇಂದು ಬೆಳಗ್ಗೆ ಮಾನಸ ಸರೋವರದಲ್ಲಿ ಸ್ನಾನ ಮಾಡುವ ಹಂಬಲ. ಚುಗು ದೇಗುಲದ ತೀರವೇ ಅತ್ಯಂತ ಪವಿತ್ರಸ್ಥಳವೆಂದು ನಂಬಿಕೆ. ಇನ್ನೊಂದು ಕಾರಣ ಇಲ್ಲಿಗೆ ಹತ್ತಿರದಲ್ಲಿಯೇ ಸರೋವರದೊಳಗೆ ಬಿಸಿನೀರ ಬುಗ್ಗೆಯಿರುವುದು. ಆದರೆ ಅವಕಾಶವಿಲ್ಲವಾಗಿತ್ತು. ಮೊದಲಿಗೆ ಬೆಳಗ್ಗೆ ೭ ಗಂಟೆಗೆಲ್ಲಾ ತಯಾರಾಗಿ ಹೊರಡಬೇಕಿತ್ತು. ಆ ವೇಳೆಗಿನ್ನೂ ಸೂರ್ಯನ ಶಾಖ ಸಾಲದಾಗಿ ಚಳಿಗಾಳಿ ಬೀಸುತ್ತಿತ್ತು. ನೀರು ಕೊರೆಯುತ್ತಿತ್ತು. ನೆನೆಸಿಕೊಂಡರೇ ಮೈಯಲ್ಲಿ ನಡುಕ ಹುಟ್ಟಿಸುವ ಯೋಜನೆಯನ್ನು ಜಾರಿಗೆ ತಂದು ಮೈನೆನೆಸಿದರೆ ಮೇಲೆ ಹೊತ್ತು ತರುವವರಿಲ್ಲವಾಗಿ ಸ್ನಾನದ ಕಲಾಪ ರದ್ದಾಗಿತ್ತು. ದೇಗುಲದ ಬಾಗಿಲಿಗೆ, ಸ್ತೂಪ ತೋರಣಕ್ಕೆ ವಂದಿಸಿ ಫೋಟೋ ತೆಗೆದು ನೀರಿನಂಚಿನಲ್ಲೇ ಹಜ್ಜೆಹಾಕಿ ಸಾಗಿದ್ದೆವು. ಉದಿತ ಭಾನು ಬಾನಿನಲ್ಲಿ ಸಪ್ತವರ್ಣಗಳ ರಥವನ್ನು ನಡೆಸಿದ್ದನು. ಮೋಡಗಳ ಆ ಉತ್ಸವವನ್ನು ಸರಸಿ ತನ್ನೊಡಲಿನಲ್ಲಿ ಚಿತ್ರವಾಗಿ ಮೂಡಿಸಿದ್ದಳು. ಭೂದೇವಿ ಈ ಚಿತ್ರಕ್ಕೆ ಬೋಳು ಕೆಂಬೆಟ್ಟಗಳ, ಬೆಳ್ಳಿ ಝರಿಗಳ ಅಂಚು ಕಟ್ಟಿದ್ದಳು. ಕಲ್ಲುಗಳ ಕುಸರಿ ಬಿಡಿಸಿದ್ದಳು. ಹಿಂದಿನ ದಿನ ನೋಡಿದ್ದ ಕಾಮನ ಬಿಲ್ಲಿನ ಬಣ್ಣಗೆಳೆಲ್ಲವೂ ಇಂದು ಕಲ್ಲುಹರಳುಗಳಾಗಿ ತೀರದುದ್ದಕ್ಕೂ ಚೆಲ್ಲಿದ್ದವು. ಕಾಲ್ಕೆಳಗಿನ ಬಣ್ಣ ಬಣ್ಣದ ವಿವಿಧಾಕಾರದ ಕಲ್ಲುಗಳನ್ನೂ ನೋಡಬೇಕೋ, ಪಕ್ಕದಲ್ಲಿನ ನೀರೀನಲ್ಲಿಯ ಚಿತ್ರವನ್ನು ನೋಡಬೇಕೋ ಅಥವಾ ಕತ್ತೆತ್ತಿ ವರ್ಣರಂಜಿತ ಬಾಂದಳವನ್ನು ನೋಡಬೇಕೋ ತಿಳಿಯದಾಗಿತ್ತು. ಮೈಯೆಲ್ಲಾ ಕಣ್ಣಾಗಿತ್ತು.

ಈ ಸುಗ್ಗಿಯಲ್ಲಿ, ಬಣ್ಣದ ಸಂತೆಯಲ್ಲಿ ನಡಿಗೆ ತಾನಾಗಿ ನಿಧಾನವಾಗಿತ್ತು. ಸಾರಥಿಯು ಬಲವಂತದಲ್ಲಿ ಸೊಂಟ ಹಿಡಿದೆತ್ತಿ ಕುದುರೆಯ ಮೇಲೆ ಕುಕ್ಕಿಹಾಕಿದ ನಂತರ ತಿಳಿದದ್ದು ನಾನೆಷ್ಟು ಹಿಂದೆ ಬಿದ್ದಿದ್ದೆನೆಂದು. ಕುದುರೆಯ ಮೈಮೇಲೆಲ್ಲಾ ನೊಣದ ಗಾತ್ರದ ಸೊಳ್ಳೆಗಳು, ಕಪ್ಪು ಸೊಳ್ಳೆಗಳು. ನನ್ನ ಮೈಮೇಲೂ ಅಷ್ಟೇ ಸೊಳ್ಳೆಗಳು! ಹೊಡೆದೋಡಿಸಲು ಮಾಡಿದ ಪ್ರಯತ್ನ ವಿಫಲವಾಗುವಷ್ಟು

ಪಿಷ್ಪುಲಪಿದ್ದವು. ಪೊಡೆದಾಗ ರಕ್ತಕ್ಕೆ ಬದಲಾಗಿ ಪಸಿರು ದ್ರವ. ನನ್ನ ಮುಖದ ಗಾಬರಿ ನೋಡಿ ನಕ್ಕ ತುನ್ರುಪ್‌ನ ಸಮಾಧಾನ-ಇವು ಕಚ್ಚಲಾರವು-ಯಾವರೋಗವೂ ಬರುವುದಿಲ್ಲವೆಂಬ ಆಶ್ವಾಸನೆ. ಬೆಟ್ಟಗಳಿಂದ ಹರಿದು ಬಂದ ತೊರೆಗಳು ಸರೋವರಕ್ಕೆ ಸೇರುವಲ್ಲಿನ ಜೌಗುನೆಲದಲ್ಲಿ ಸೂಜಿಯಾಕಾರದ ಎಸಳಿನ ಹುಲ್ಲು – ದವನದಂತೆ ಸುವಾಸನೆಯುಳ್ಳದ್ದು. ಟಿಬೆಟೀ ಹೆಸರು ತ್ಸೊ, ಪೊ– ಅರ್ಥಾತ್ ಸರೋವರದ ಧೂಪ. ಈ ಹುಲ್ಲು ಮಾನಸದ ಆಸುಪಾಸಿನಲ್ಲಿ ಸರ್ವೇಸಾಮಾನ್ಯ. ದಾರಿಯಲ್ಲಿ ಹುಲ್ಲಿನ ದಟ್ಟಣೆ ಹೆಚ್ಚಿದಂತ ಕೈಮೇಲೆ ಕೂರುತ್ತಿದ್ದ ಸೊಳ್ಳೆಗಳೂ ಹೆಚ್ಚಿದವು. ನಿರ್ವಾಹವಿಲ್ಲದೆ ಅರಬ್ಬೀಯರಂತೆ ಮುಖದ ಮುಂದೆ ಕೈವಸ್ತ್ರದ ತೆರಹಾಕಬೇಕಾಯಿತು. ನೀರಿನಿಂದಾಗಿ ಬೆಳೆದ ಹುಲ್ಲು, ಹುಲ್ಲನ್ನವಲಂಬಿಸಿ ಸೊಳ್ಳೆ, ಸೊಳ್ಳೆಯನ್ನು ತಿಂದು ಬದುಕುವ ೨–3 ವಿಧದ ಗುಬ್ಬಚ್ಚಿ, ಗದ್ದೆ ಇಲಿಗಳು, ಅವುಗಳನ್ನು ಆಸರಿಸಿ ಬದುಕುವ ಹೇಗೆಗಳು, ನೀರಿನಲ್ಲಿದ್ದ ಮೀನು, ಬಾತುಕೋಳಿಗಳು, ನೀರಿನಲ್ಲಿ ಬೆಳೆದ ಜೊಂಡು ಹುಲ್ಲು – ನಮ್ಮ ದೃಷ್ಟಿಗೆ ಬಂದ ಬಹು ಪರಿಮಿತ ಪರ್ಯಾವರಣದ ಜೀವರಾಶಿ. ಕುದುರೆಗಳು, ಕುರಿಗಳು, ಯಾಕ್‌ಗಳು ಸಾಕಿದವರು ಮೇಯಿಸಲು ತಂದದ್ದುಂಟು.

ಒಂದೆರಡು ಮಂಟಪೋತ್ಸವಗಳ ನಂತರ ಯಾತ್ರಿಗಳ ಮೆರವಣಿಗೆ ದಕ್ಷಿಣ ದಿಕ್ಕಿನಿಂದ ಪಶ್ಚಿಮಕ್ಕೆ ತಿರುಗಿತ್ತು. ಕಾಲ್ನಡಿಗೆಯವರು ಭಾರವೆನಿಸಿದ್ದ ಕಾಲುಗಳನ್ನೆಳೆಯುತ್ತಾ ಸಾಗಿದ್ದರೆ ಕುದುರೆಯ ಮೇಲಿದ್ದವರು ಅದರ ಕುತ್ತಿಗೆಯವರೆಗೂ ಬಗ್ಗಿ (ಅರ್ಧ ಮಲಗಿದಂತೆಯೇ) ಕುದುರೆಯ ಕುತ್ತಿಗೆಯ ಕೂದಲನ್ನೆಣಿಸುತ್ತಾ ಸಾಗಿದ್ದರು. ಬೊಂತೆಯಾಗಿ ಕಟ್ಟಿದ್ದ ಉಣ್ಣೆ ಉಡುಪುಗಳು; ಆಯ್ದು ಕಲ್ಲುಗಳಿಂದ ಭಾರವಾದ ಜೇಬು ಕೈಚೀಲಗಳು; ಖಾಲಿ ಹೊಟ್ಟೆ; ನೊಂದ ಸೊಂಟ, ಬೆನ್ನು, ಕೈಕಾಲು; ಕಾದತಲೆ, ಆರಿದ ಗಂಟಲು, ಒಣಗಿಸಿದ ಮುಖ; ಸವಾರಿಯಿಂದಾಗಿ ನಮ್ಮಿಂದ ಹೊರಡುತ್ತಿದ್ದ ಅಶ್ವಗಂಧ. ಜೊತೆಗೆ ಎರಡು ದಿನದ ಮೈಲಿಗೆ ಸೇರಿತ್ತು. ನಮ್ಮ ಸ್ವಚ್ಛತೆ, ಮಡಿವಂತಿಕೆ ಹೇಳಹೆಸರಿಲ್ಲದಾಗಿತ್ತು. ಶಿವನ ಸೇನೆಯಲ್ಲಿ ನಾವೂ ಭರ್ತಿಯಾಗಿದ್ದೆವು. ಅಂದಿನ ಪ್ರಯಾಣದ ಮೂವತ್ತೇಳು ಕಿ.ಮೀ. ನಲ್ಲಿ ಇನ್ನೂ ಹತ್ತು ಕಿ.ಮೀ ಬಾಕಿಯಿತ್ತು.

ಗುಡ್ಡದ ಮೇಲೆ ಸುಮಾರು 200 – 250 ಅಡಿ ಎತ್ತರದಲ್ಲಿದ್ದ 'ಗೊಸುಲ್' ಬೌದ್ಧ ದೇವಾಲಯ ಬೊಂಬೆಯಾಟದ ಮಂದಿರದಂತೆ ಚಿಕ್ಕದಾಗಿ ಚೊಕ್ಕವಾಗಿತ್ತು. ನಮ್ಮನ್ನು ಮೇಲೇ ಬನ್ನಿರೆಂದು ಆಹ್ವಾನಿಸಿತ್ತು. ಆದರೆ ಆ ಎತ್ತರವನ್ನೇರುವ ದೈಹಿಕ – ಮಾನಸಿಕ ಸ್ಥಿತಿಯಲ್ಲಿ ಯಾರೂ ಇರಲಿಲ್ಲ. ಕೆಳಗಿನಿಂದಲೇ ಫೋಟೋ ಕ್ಲಿಕ್ಕಿಸಿ ಮುಂದೆ ಸಾಗುವವರೇ ಎಲ್ಲರೂ!

ಗೋಸುಲ್ ಬೆಟ್ಟದ ಮರೆಯಿಂದ ಹೊರಗೆ ಬಂದಂತೆ ಮಧ್ಯಾಹ್ನ ಎರಡು ಗಂಟೆಗೆ ಸೂರ್ಯ ಪ್ರಖರವಾಗಿ ತಲೆಕಾಯಿಸಲು ಮೊದಲಿಟ್ಟನು. ಕೆಳಗೆ ದಪ್ಪಮರಳು – ನೊರಜುಗಲ್ಲಿನ ಜಾರಿಕೆಯ ದಾರಿ, ಪಕ್ಕದಲ್ಲೇ ತಂಪಿನ ನೀಲಿ ಬಣ್ಣದ ನೀರು – 'ಈಜುಗೊಳಕ್ಕೆ ಇಳಿ ಬಾ.' ಎಂದು ಮಾನಸ ನಮ್ಮನ್ನು ಆಣಕಿಸಿದಂತಿತ್ತು. ದೂರದ ಇಳಿಜಾರಿನ ಮೈದಾನದಲ್ಲಿ ಜೈದಿ ಕ್ಯಾಂಪ್ ಕೈ ಬೀಸಿ ಕರೆದಿತ್ತು. ಆದರೆ ಅದನ್ನು ತಲುಪಲು ಇನ್ನೂ ಐದು ಕೀ.ಮೀ ಬಿಲ್ಲಿನಾಕಾರದಲ್ಲಿ ಬಾಗಿದ್ದ ದಾರಿಯನ್ನು ಸವೆಸ ಬೇಕಿತ್ತು. ಬಂಜರು ಬಸಿರನ್ನು ಈಜಬೇಕಿತ್ತು. ಆ ಬಂಜರು ಬಸಿರಿನಲ್ಲೇ ಪ್ರಪಂಚದ ನಾಲ್ಕು ಖ್ಯಾತ ಮಹಾನದಿಗಳು ಹುಟ್ಟುವುದೆಂದರೆ ನಂಬಲಾಗದ, ಆದರೆ ಸತ್ಯವಾದ ಸಂಗತಿ. ಪ್ರಕೃತಿಲೀಲೆಯ ವೈಖರಿ.

ಟಿಬೆಟೀಯರ ಕೈಲಾಸ ಪುರಾಣದಂತೆ ಗಂಗಾಛು (ಗಂಗಾ ನದಿ) ಕೈಲಾಸದಿಂದಿಳಿದು 'ಛುಮಿಕ್ ಥುಂಗ್ ತೋಲ್' ಜಲೋದ್ಗಮಕ್ಕೆ ಹರಿಯುವುದು. ಈ ಪವಿತ್ರ ಜಲೋದ್ಗಮದಲ್ಲಿ ಹುಟ್ಟುವ ನಾಲ್ಕೂ ನದಿಗಳು ಮಾನಸ ಸರೋವರದ ಮೂಲಕ ನಾಲ್ಕೂ ದಿಕ್ಕುಗಳಿಗೆ ಹರಿದು ಹೋಗುವುವು. ಲಾಂಗ್ ಚೆನ್ ಖಂಬಾಬ್– ಗಜಮುಖದಿಂದ ಬಂದ ನದಿ (ಸಟ್ಲಜ್ ಅಥವಾ ಶತದ್ರು) ಮಾನಸದ ಪಶ್ಚಿಮಕ್ಕೆ ಹರಿದು ಹೋಗುತ್ತದೆ. ಮಾಪ್ಚಾ ಖಂಬಾಬ್– ಮಯೂರ ಮುಖದಿಂದ ಹೊರಟ ಕರ್ನಾಲಿ ನದಿ ದಕ್ಷಿಣಕ್ಕೆ ಹರಿಯುವುದು. ತಾಮ್ ಛೋಕ್ ಖಂಬಾಬ್– ಅಶ್ವ ಮುಖದಿಂದ ಹೊರಟ ನದಿ ಬ್ರಹ್ಮಪುತ್ರ ಪೂರ್ವಕ್ಕೆ ಹರಿದು ಹೋದರೆ ಸೆಂಗೆ ಖಂಬಾಬ್– ಸಿಂಹಮುಖದಿಂದ ಹೊರಟ ನದಿ ಸಿಂಧೂ ಉತ್ತರಕ್ಕೆ ಹರಿದು ಹೋಗುತ್ತದೆ. ಟಿಬೆಟೀಯರು ವರ್ಣಿಸುವಂತೆ ಸಟ್ಲೆಜ್‌ನ ನೀರು ಶೀತಲವಾಗಿದ್ದು ಕುಡಿದವರಿಗೆ ಆನೆಯ ಬಲವನ್ನು ಕೊಡುತ್ತದೆ. ಕರ್ನಾಲಿಯ ನೀರು ಬೆಚ್ಚಗಿದ್ದು ನವಿಲಿನ ಲಾವಣ್ಯವನ್ನು ಕೊಟ್ಟರೆ ತಣ್ಣಗೆ ಕೊರೆಯುವ ಬ್ರಹ್ಮಪುತ್ರ ನದಿ ಕುದುರೆಯ ಶಕ್ತಿಯನ್ನು ಕೊಡುತ್ತದೆ. ಸಿಂಧೂ ನದಿಯ ನೀರು ಸಿಂಹಧೈರ್ಯವನ್ನು ಕೊಡುತ್ತದೆ.

ಭೌಗೋಳಿಕವಾಗಿ ಸಟ್ಲೆಜ್ ನದಿಯ ಉಗಮ ಮಾನಸದ ಪೂರ್ವದ ಕದಗ್ ಲುಂಗ್ ಗ್ಲೇಶಿಯರ್ಸ್‌ನಲ್ಲಿ. ನಂತರ ಭಾರತದ ಪಂಜಾಬ್ ಕಡೆಗೆ ಹರಿಯುತ್ತದೆ. ಸಿಂಧೂ ನದಿಯು ಕೈಲಾಸದ ಸನಿಹ ಸೆಂಗೆ ಜಲೋದ್ಗಮದಲ್ಲಿ ಹುಟ್ಟಿ ಬಲೂಚಿಸ್ತಾನದಡೆಗೆ ಹರಿದರೆ ಕರ್ನಾಲಿ ನದಿ ಮಾನಸದ ದಕ್ಷಿಣಪೂರ್ವಕ್ಕಿರುವ ಮಾಪ್ಚಾ ಬುಗ್ಗೆಯಲ್ಲಿ ಹುಟ್ಟಿ ಲಾಂಪಿಯಾ ಪಾಸ್‌ನ ಒರತೆಗಳಿಂದ ಹೆಚ್ಚಿನ ನೀರು ಪಡೆದು ದಕ್ಷಿಣದ ನೇಪಾಳದ ಕಡೆಗೆ ಹರಿಯತ್ತದೆ. ಬ್ರಹ್ಮಪುತ್ರ ನದಿಯ ಉಗಮ ಚೆಮಯಿಂಗ್ಡುಂಗ್ ಗ್ಲೇಶಿಯರ್‌ನಲ್ಲಿದ್ದು ಮಾನಸದ ತೈಗ್ ನದಿಯೂ ಇದಕ್ಕೆ ಸೇರಿ ಪೂರ್ವದ ಟಿಬೆಟ್ ನಂತರ ಚೀನಾ ಕಡೆಗೆ ಹರಿದು ಹೋಗುತ್ತದೆ. ಇದೇ ಬಳಸು ದಾರಿಯಲ್ಲಿ ಹಿಮಾಲಯವನ್ನು ಸುತ್ತಿ ನಂತರ ಭಾರತದ ಲೋಹಿತ್–ಬ್ರಹ್ಮಪುತ್ರವಾಗಿ ಹರಿದು ಕೊಲ್ಲಿಯನ್ನು ಸೇರುತ್ತದೆ. ಈ ನಾಲ್ಕೂ ನದಿಗಳ ಉಗಮ ಮಾನಸದಿಂದ ನೇರ ದೂರ ೭೦ ಕಿ.ಮೀನೊಳಗೇ ಇರುವುದರಿಂದ ಕೈಲಾಸ ಪುರಾಣ ಸತ್ಯಕ್ಕೆ ಹೆಚ್ಚು ದೂರವಿಲ್ಲ. ಒಂದೊಂದು ನದಿಗೂ ಅನೇಕ ಜಲಸ್ರೋತಗಳು ಬಂದು ಸೇರಿ ಜಲ ಜಾಲವನ್ನೇ ನಿರ್ಮಿಸಿದ್ದರೂ ಮಾನಸ ಕೈಲಾಸ ಪ್ರದೇಶದಲ್ಲಿ ಏನೂ ಬೆಳೆಯಲಾಗದ ಶುಷ್ಕತೆ. ಸೌಂದ್ರಿಯವಸ್ತುವಿಲ್ಲದ ಬಂಜರು ನೆಲ. ಶಿವನ ವಾಸ ದಿಟವಾಗಿಯೂ ಸ್ಮಶಾನ ಸದೃಶ ಭೂಮಿಯಲ್ಲೇ? 'ಇಲ್ಲ ಇಲ್ಲ ಇದು ಪ್ರಪಂಚದ ಮೊದಲ ಸಂಸ್ಕೃತಿಯ ನಾಡು–ಅಸಂಖ್ಯಾತ ಪ್ರಜೆಗಳ ಬೀಡು ಭಾರತವನ್ನು ಹಡೆದ ಸಮೃದ್ಧಿ ಆಧ್ಯಾತ್ಮಿಕ ಬಸಿರು. ಅದಕ್ಕೆ ಸಾಕ್ಷಿಯಾಗಿ ನಿಂತಿರುವೆ ನಾನು.' ಎಂದು ಮಾನಸದ ನೀರ ಬಸಿರು ನಲಿದಾಡುತ್ತಿತ್ತು.

ಜೈದಿಗೆ ಮರಳಿ ಬರುತ್ತಿದ್ದಂತೆ ಸೂರ್ಯ ಪಶ್ಚಿಮದ ಕಡೆಗೆ ಪೂರ್ಣವಾಗಿ ಇಳಿದಿದ್ದನು. ಕಂತಲು ಒಂದೆರಡು ಗಂಟೆಗಳು ಮಾತ್ರ ಉಳಿದಿದ್ದವು. ಮಾನಸ ಪ್ರದಕ್ಷಿಣಾ ವಿಜಯದ ಮುಕ್ತಾಯ–ಮೀಟಿಂಗ್ ದಿ ರಿಟ್ರೀಟ್ ನಡೆದಿತ್ತು. ಎಲ್ಲರಿಗೂ ಸನ್‌ಡೌನರ್ ಹಾಕಲು(ಇಂದಿಗೆ ಅದು ಬರೇ ಚಹಾ, ಕಾಫಿಯಾಗಿತ್ತು)ಆತುರ. ನನಗೋ ಬೆಳಗಿನಿಂದಲೂ ನನ್ನ ಸಾರಥಿ ತುನ್ಪುಪ್‌ನ ಸೊಂಟದಲ್ಲಿ ನನ್ನ ಕಣ್ಣು ಕುಕ್ಕುತ್ತಿದ್ದ ಕತ್ತಿಯನ್ನು ಪಡೆಯುವ ಆತುರ. ಗ್ರೂಪ್ ಲೀಡರ್ ಅನಿಲ್ ಕುಮಾರರ ಸಹಾಯದಲ್ಲಿ ವ್ಯಾಪಾರ ಕುದುರಿ ಕಡೆಗೂ ಕತ್ತಿ ನನ್ನ ಚೀಲ ಸೇರಿತ್ತು.

ಬಟ್ಟೆಯ ಮೇಲೆ ಸತ್ತ ನೊಣಗಳ ಅಂಟು, ಮೈಮೇಲೆ ಎರಡು ದಿನದ ಬೆವರು, ಕುದುರೆಯ ವಾಸನೆ, ಕೂದಲು, ಸಾರಥಿಯ ಜಿಡ್ಡು ವಾಸನೆ, ಎಲ್ಲವನ್ನೂ ತೊಳೆದುಕೊಳ್ಳುವ ಮಹದಾಸೆ. ಅದೂ ನೆರವೇರಲಿರುವುದು ಮಾನಸ ಸರೋವರದಲ್ಲಿ ಎಂಬ ಹೆಮ್ಮೆ ಇಳಿ ಹೊತ್ತಿನ ಹಿತಕರ ಶಾಖ. ಸರೋವರ ಕೈಬೀಸಿ ಕರೆದಿತ್ತು-ತಾಯಿ ಮಗುವನ್ನು ಮುದ್ದಿಸಲು ಕರೆವಂತೆ. ಕುದುರೆಯ ಮೇಲಿನಿಂದ ನಮ್ಮ ಸಾಮಾನುಗಳನ್ನು ಹಜಾರದಲ್ಲಿ ಕುಕ್ಕಿದ್ದೇ, ಟವೆಲನ್ನೂ ತೆಗದುಕೊಳ್ಳದೆ ಸರೋವರದ ಮಡಿಲಿಗೆ ಓಡಿದೆವು. ಐದಾರು ಜನ ಕೈಕೈಹಿಡಿದು ನೀರಿನೊಳಗೆ ನುಗ್ಗಿದ ಹಿಗ್ಗು ಅನುಭವ ವೇದ್ಯ ಮಾತ್ರ.

ನೀರಿನೊಳಗಿಳಿದ ಚಳಿಯೊಂದಿಷ್ಟು, ಬಹು ದಿನದ ಬಯಕೆ ಈಡೇರಿದ ಪುಳಕವೊಂದಿಷ್ಟು, ಹಿಂದೆ ಬಿಟ್ಟು ಬಂದಿದ್ದ ಹಿರಿಯರು-ಕಿರಿಯರ ಪ್ರತಿನಿಧಿಯಾಗಿ ಪವಿತ್ರ ಸರೋವರದಲ್ಲಿ ಮೀಯುತ್ತಿರುವೆನೆಂಬ ಧನ್ಯತಾಭಾವವೊಂದಿಷ್ಟು, ಪ್ರಪಂಚದಲ್ಲೇ ಸುಂದರತಮ ನಿಸರ್ಗ ತಾಣವನ್ನು ನೋಡುತ್ತ ನಿಲ್ಲುವುದಷ್ಟೇ ಅಲ್ಲದೆ ಆ ಸೌಂದರ್ಯದಲ್ಲೇ ಮುಳುಗೇಳುತ್ತಿದ್ದೇನೆಂಬ ಹಿಗ್ಗು-ಸೇರಿ ಒಳಗಿದ್ದ ಹಿಗ್ಗು ಹೊಳೆಯಾಗಿ ಹೊರ ಹರಿದಿತ್ತು-ಹೋ ಹೋ ಎಂಬ ಏರುದನಿಯಾಗಿ. ಒಳಗಿನ ಪ್ರಾಣಶಕ್ತಿ ವಿಜೃಂಭಿಸಿತ್ತು-ನೀರಿನಲ್ಲೇ ಕುಣಿದು ಕುಪ್ಪಳಿಸಿ ಬೊಗಸೆ ಬೊಗಸೆ ನೀರು ಕುಡಿದಾಗ.

ದಡದ ಮೇಲೆ ನಿಂತವರಿಗೆ ನಮ್ಮ ಉತ್ಸಾಹ ಕಂಡು ಆನಂದದ ಅಚ್ಚರಿ ಹತ್ತು ಹದಿನೈದು ನಿಮಿಷ ಕಾದನಂತರ 'ಮೇಲೆ ಬನ್ನಿ ಸಾಕಿನ್ನು – ಸೂರ್ಯ ಮುಳುಗಿದ್ದಾಗಿದೆ. ಶೀತ ಹಿಡಿದೀತು' ಎಂದು ಅವಸರಿಸಿದರು. ಇಂದಿನ ಸಂಜೆ ನಿತ್ಯಸಂಜೆಯಲ್ಲ. ನಾಗರಿಕತೆಯ ಸೋಗಿನಲ್ಲಿ ಬೆಂಡಾಗಿದ್ದ ಜೀವಕ್ಕೆ ಚೈತನ್ಯ ತುಂಬಿ ನಿಸರ್ಗದ ಮಕ್ಕಳಾಗಿ ನಾವೆಲ್ಲ ಮರುಹುಟ್ಟು ಪಡೆದ ಸಂಜೆ – ಜೀವಂತರಾದ ಸಂಜೆ. ಎಲ್ಲರೂ ಆಧ್ಯಾತ್ಮಿಕ ರೀತಿಯಲ್ಲಿ ಸಂಧ್ಯಾವಂದನೆ ಮಾಡಿ ಮೇಲೇರಿದ್ದೆವು.

ಯಾತ್ರೆ ಪ್ರವಾಸ ಹೊರಟಾಗ ಬಾಂಧವರೆಲ್ಲ 'ನೀನೇನಮ್ಮ ರಂಭೆ ಊರ್ವಶಿ ತಿಲೋತ್ತಮೆಯರೊಡನೆ ಕೂಡಿ ಆಡಿ ಬರುವವಳೋ?' ಎಂದಿದ್ದರು. ಇವರನ್ನೆಲ್ಲಾ ಕಂಡು ಮಾತಾಡಿಸಿದ್ದೆ ಅವರೊಡನೆ ನಲಿದಾಡಿದ್ದೆ ಮಾನಸದ ಪರಿಕ್ರಮಾದಲ್ಲಿ. ಆದರೆ ಭೂದೇವಿ, ಜಲದೇವಿ, ಗಾಯತ್ರಿದೇವಿ (ಸೂರ್ಯನ ಕಿರಣಗಳು)ಯರ ರೂಪದಲ್ಲಿ. ದೇವ ವಿಲಾಸಿನಿಯರನ್ನು ಮೀರಿಸಿದ ಸೌಂದರ್ಯವತಿಯರನ್ನು ವಿಲಾಸವತಿಯರನ್ನು ಕಂಡು ದಣಿಯದಾಗಿದ್ದೆ.

ಮಾರನೆಯ ಬೆಳಗ್ಗೆ ಪಿತೃಕರ್ಮ ಮಾಡಲು, ಮಾಡಿಸಲು ಹಲವರು ಸಂಜೆಯೇ ಯೋಜನೆ ಹಾಕಿದ್ದರು. ಗುಂಪಿನವರೆಲ್ಲರೂ ಹವನಕ್ಕಂತೂ ಇರಲೇಬೇಕೆಂದು ನಿರ್ಧಾರವಾಗಿತ್ತು. ಹವನದ ನೆವದಲ್ಲಿ ಈ ದಿನ ನೀರಿಗಿಳಿಯದಿದ್ದ ಸ್ನೇಹಿತೆಯರ ಜೊತೆ ಮತ್ತೊಮ್ಮೆ ಸರೋವರದ ಸ್ನಾನ ಸಿಗುವುದೆಂಬ ಹಿಗ್ಗು ನನಗೆ. ನಾಳಯ ದಿನವೆಲ್ಲಾ ಚೈದಿಯಲ್ಲೇ ಮಾನಸತಡಿಯಲ್ಲೇ, ನಡಿಗೆಯ ತ್ರಾಸವಿಲ್ಲದ ಪೂರ್ಣ ಆರಾಮ ಎಂಬ ಸಮಾಧಾನ. ಮನಸ್ಸಂತೂ ಹುಗ್ಗಿ ತಿಂದಂತೆ ಬೀಗಿ ಬಿರಿಯುತ್ತಿತ್ತು. ಅಪ್ರಯತ್ನವಾಗಿ, ಕಾರಣವಿಲ್ಲದೆಯೇ ಒಳಗಿನ ಸಂತೋಷ ನಗುವಾಗಿ ಹೊರಹೊಮ್ಮುತ್ತಿತ್ತು. 'ಏನಮ್ಮಾ ಏನು ವಿಶೇಷ ಇವತ್ತು?'ಎಂದು ವಿಚಾರಿಸಿದ ಸಹಯಾತ್ರಿಗಳಿಗೆ ಅನುಮಾನ ನಾನಾವುದೋ ಗುಂಡು ಇಳಿಸಿದ್ದೇನೆಂದು. ನನ್ನ ನಶೆಯ ಕಾರಣ ಆ ನಶೆ ಹತ್ತಿದವರಿಗೆ ಮಾತ್ರಗೊತ್ತು.

ಇಂದು ಬೆಳಗ್ಗೆ ಸರೋವರದಲ್ಲಿ ನೀರಾಟದ ಬಳಿಕ ಹವನದ ಸಂಭ್ರಮ. ಪುರೋಹಿತರ ಮಾಧ್ಯಮವಿಲ್ಲದೆ ನಮ್ಮ ಮನಸ್ಸಿಗೆ ಒಡಿದಂತೆ, ಬುದ್ಧಿಗೆ ತೋರಿದಂತೆ ನಾವೇ ಮಾಡಿದ್ದ ಹವನ, ಆತ್ಮನಿಷ್ಠೆಯಿಂದ ವಿಶ್ವಾತ್ಮನಿಗೆ ತೋರಿದ ಶ್ರದ್ಧೆಯ ಬೆಳಕು, ಜ್ಞಾನದಾಹದ ಹೊಗೆ, ಆನಂದದ ಉದ್ಗಾರವಾಗಿದ್ದ ಶ್ಲೋಕ ಪಂಚಾಕ್ಷರ ಮಂತ್ರ, ನಂತರ ಮತ್ತೇರಿಸುವ ಶಿವನಾಮದ ಗಾಂಜಾ.

ದಡವನ್ನು ಬಿಟ್ಟು ಮೇಲೇಳುವ ಮನಸ್ಸೇ ಯಾರಿಗೂ ಬಾರದು. ಮಧ್ಯಾಹ್ನದ ಬಿಸಿಲಲ್ಲೇ ತುಂತುರು ಆರಂಭವಾಗಿ ಬಲವಂತದಲ್ಲಿ ಅಡುಗೆಯ ಕೋಣೆ ಸೇರಿದ್ದೆವು. ಖಿಚಡಿಯ ತಯಾರಿ ನಡೆಸಿ ಊಟ ಮಾಡಿದಾಗ ಮಧ್ಯಾಹ್ನದ ಎರಡುವರೆಗಂಟೆ. ತುಂತುರು ನಿಂತೊಡನೆಯೇ ಮತ್ತೆ ಮಾನಸ ತಡಿಗೆ ಗೆಳೆಯರ ಬಳಗ ನಡೆದಿತ್ತು. ನೀರಿನಲ್ಲಿ ಕಣ್ಣು ನೆಡಲು, ಕಲ್ಲುಗಳ ಮೇಲೆ ಕೂತು ದೂರದ ಕೈಲಾಸವನ್ನೇರಲು, ಅಲ್ಲಿರಬಹುದಾದ ಮತ್ತೊಂದು ಗುಂಪಿನವರು ಮಾಡಿರಬಹುದಾದ ಕಾರ್ಯಗಳನ್ನು ಊಹಿಸಲು ಸಾಕಷ್ಟು ವ್ಯವಧಾನವಿತ್ತು.

ಕೈಲಾಸವನ್ನೇರುವ ಉತ್ಸಾಹ, ಸುಗಮವಾಗಿ ಕೈಲಾಸ ಪರಿಕ್ರಮವಾಗಲೆಂಬ ಹಾರೈಕೆ. ಅವ್ಯಕ್ತ ಅಳುಕಿನೊಂದಿಗೇ ಅಪಸ್ವರದ ಭಾವವೊಂದು ಎಲ್ಲರ ಹೃದಯದಿಂದ ಬಾಯಿಗೆ ಬಂದಿತ್ತು. ಮಾತುಕತೆಗೆ ಉದ್ವೇಗ ತಂದಿತ್ತು. ಅದೆಂದರೆ ಮಾನಸ ಸರೋವರದ ದಡದ ಮೇಲೆಲ್ಲಾ ಚೆಲ್ಲಾಡಿದ್ದ ಬಿಯರ್ ಬಾಟಲಿಗಳ ಹಸಿರು ಗಾಜಿನ ಚೂರುಗಳು. ಚಿಂದಿ ಬಟ್ಟೆಗಳು. ಸರೋವರಕ್ಕೆ ನಾವುಕೊಟ್ಟಿದ್ದ ಮಹತ್ವದ ಬಗೆಗೆ ಗಹಗಹಿಸಿ ನಕ್ಕಂತಿತ್ತು. ಟಿಬೆಟೀಯರಿಗೂ ಪವಿತ್ರವಾದ ಮಾನಸದ ದಂಡೆಯಲ್ಲಿ ಪ್ರಕೃತಿಯೇ ಬೇಡವೆಂದು ಬಿಟ್ಟಿದ್ದ ಹಸಿರು ಬಣ್ಣವನ್ನು ಬಲಾತ್ಕಾರವಾಗಿ ತುಂಬಲು ಮಾನವನ ಕುಚೇಷ್ಟೆಯ ಪ್ರಯತ್ನ. ಬಿಯರ್ ಕುಡಿದು ಬಾಟಲಿಯೊಡೆದು ಚೂರುಗಳನ್ನು ತೂರಾಡುವ ಮೂಲಕ ಆನಂದವನ್ನನುಭವಿಸುವ ಸಾಹಸ! ನಾಸ್ತಿಕವಾದೀ ಚೀನೀ ಸರಕಾರದ ಪ್ರಭಾವವೇ ಇದು? ಅಥವಾ ಹೊರಗಿನ ಸಭ್ಯತೆಯ ನಾಗರಿಕತೆಯ ಪ್ರವಾಸೀ ಮಹಾಜನರು ಮಾಡಿದ ಮೋಜಿನ ಕುರುಹೇ? ಪ್ರಶ್ನೆಯ ಜೊತೆಗೇ ಇದಕ್ಕೆ ಪರಿಹಾರವೇನೆಂದು ಚಿಂತಿಸಬೇಕಾದ ಪರಿಸ್ಥಿತಿ. ಏಕೆಂದರೆ ಅಲ್ಲಿ ನಡೆದಾಡುವವರ ಅಂಗಾಲಿನ ಗತಿ – ದೇವರೇಗತಿ. ಪವಿತ್ರತೆಗಾಗಿಯಲ್ಲದಿದ್ದರೂ ಪ್ರಕೃತಿ ಪರಿಸರದ ಒಳಿತಿಗಾಗಿಯಾದರೂ ಈ ರೀತಿಯ ನಡತೆಗೆ ನಿಷೇಧ ಅವಶ್ಯವೆನಿಸಿತ್ತು. ಈ ಅಸಹ್ಯ, ಎಗ್ಗಿಲ್ಲದ ನಡತೆಯ ಕುರುಹುಗಳು ಅಪವಿತ್ರವೆನಿಸಿಕೊಂಡಿದ್ದ ರಾಕ್ಷಸತಾಲದ ತೀರದಲ್ಲಿ ಕಾಣಬರಲಿಲ್ಲ. ಮಾನಸಕ್ಕಿಂತಲೂ ಹೆಚ್ಚು ಸ್ವಚ್ಛತೆಯನ್ನು ಅದು ಕಾಪಾಡಿಕೊಂಡಿತ್ತು.

ನಾವು ಕುಳಿತಿದ್ದ ಸ್ಥಳದಿಂದ ಸ್ವಲ್ಪ ದೂರದಲ್ಲಿ ಕುಳಿತು ಜಪಮಾಲೆಯನ್ನು ತಿರುಗುಸುತ್ತಿದ್ದ ಟಿಬೆಟೀ ಯಾತ್ರಿಯೊಬ್ಬರು ಎದ್ದು ನಡೆಯತೊಡಗಿದರು. ಅವರ ಹಿಂದೆ ಓಡಿ ಇಂಗ್ಲೀಷಿನಲ್ಲಿ ಮಾತನಾಡತೊಡಗಿದೆ. ಅಲ್ಲಲ್ಲಿ ಬಿದ್ದಿದ್ದ ಗಾಜಿನ ಚೂರುಗಳನ್ನು ತೋರಿಸಿ ಮುಖ ಸಿಂಡರಿಸಿ ಛೀ ಎನ್ನುವಂತೆ ಕೈಯೆತ್ತಿದೆ. ಆ ಯಾತ್ರಿ ಕ್ಯಾಂಪ್‌ಕಡೆಗೆ ನಡೆದೇ ಇದ್ದರು. ಮುಖದಲ್ಲಿ ನಗು ಸುಳಿದಿತ್ತು. ಧೈರ್ಯ ಬಂದು ಹಿಂಬಾಲಿಸಿದೆ. ಕ್ಯಾಂಪ್‌ನ ಬಾಗಿಲ ಬಳಿ ನರಳುತ್ತಾ ಮಲಗಿದ್ದ ನಾಯಿಯಕಡೆಗೆ ಬೊಟ್ಟು ಮಾಡಿ ತೋರಿಸಿದರು. ಕೈಮೇಲಕೆತ್ತಿ ನಮಸ್ಕರಿಸಿ ಒಳನಡೆದು ಬಿಟ್ಟರು. ನಾಯಿಯ ಮೈತುಂಬಾ ವ್ರಣ. ಅದರ ಮೇಲೆ ಜುಂಯ್‌ಗುಡುತ್ತಿದ್ದ ನೊಣಗಳು. ಭಿಕ್ಷು ಹೇಳಿದ್ದೇನಿರಬೇಕೆಂದು ಬುದ್ಧಿ ತಡಕಾಡಿತು. ಉತ್ತರ ಹೊಳೆದಾಗ ಅಳು ಬರುವಂತಾಗಿತ್ತು. ನಮ್ಮ ಮೂಕ ಸಂಭಾಷಣೆ –

'ಏಕೆ ಇಂತಹ ಹೊಲಸನ್ನು ಸಟಿಸಿಕೊಂಡಿದ್ದೀರಿ?'

'ಸಾಯುವಂತೆ ಹೊಡೆತ ಬಿದ್ದು ಘಾಸಿಗೊಂಡ ಪ್ರಾಣಿಯ ಮೈಮೇಲಿ ನೊಣ ಕೂರದೆ ಮತ್ತೇನು? ಅವನ್ನು ಸಾಯಿಸುವವರ ಹಿಡಿತದಿಂದ ಬಿಡಿಸಿ ಬದುಕಿಸಿದ ಮೇಲಲ್ಲವೇ ಅದರ ಸ್ವಚ್ಛತೆ ಬಗೆಗಿನ ಮಾತು?'

ನನ್ನ ಪ್ರಶ್ನೆ ಆತನು ಅನೇಕ ವರ್ಷಗಳಿಂದ ನುಂಗಿಕೊಂಡಿದ್ದ ಕಹಿ ಅನುಭವವೊಂದನ್ನು ಬಡಿದೆಬ್ಬಿಸಿತ್ತೆಂದು ತೋರುತ್ತದೆ. ೧೯೫೯ರಲ್ಲಿ ನಡದ ಚೀನೀ ಅತ್ಯಾಚಾರದ ಸಂಕಟದ ನೆರಳು ಮುಖದಲ್ಲಿ ಕಹಿನಗೆಯಾಗಿ ಹರಡಿತ್ತು. ಮಾತನಾಡಲಿಚ್ಛಿಸದೆ ನಡೆದಿದ್ದರು. ನಾನು ಬಿಡದಿರಲು ಸಾಂಕೇತಿಕವಾಗಿ ನಾಯಿಯನ್ನು ತೋರಿಸಿ ಒಳನಡೆದಿದ್ದರು.

ಕಠಿಣ ಪರಿಸರದ ಜೀವನದಲ್ಲಿ ಕಿತ್ತುತಿನ್ನುವ ಬಡತನ, ನೆತ್ತಿಯ ಮೇಲಿ ಸದಾ ತೂಗುತ್ತಿರುವ ಚೀನೀ ರಾಜಕೀಯದ ಬಿಚ್ಚುಗತ್ತಿ, ಧಾರ್ಮಿಕ – ರಾಜಕೀಯ ನೇತಾರ ದಲೈಲಾಮಾರ (ಪರದೇಶವಾಸದಿಂದಾದ) ಅನುಪಸ್ಥಿತಿ. ಇಲ್ಲಿಯ ಜನತೆಯ ಮೇಲೆ ಆಗುತ್ತಿರುವ ಅತ್ಯಾಚಾರವನ್ನು ಸುಮ್ಮನೆ ಕುಳಿತು ನೋಡುತ್ತಿರುವ ವಿಶ್ವದ ಬಲಶಾಲೀ ರಾಷ್ಟ್ರಗಳ ಉದಾಸೀನ, ಆ ನಾಯಿಗಿಂತಲೂ ಕಡೆ ಟಿಬೆಟೀಯರ ಸ್ಥಿತಿ ಎನಿಸಿತು.

ಶತಶತಮಾನಗಳಿಂದ ನಮ್ಮದೆನಿಸಿದ್ದ ನೆಲವನ್ನು ವೇದಗಳ ಕಾಲದಿಂದಲೂ ಅಥವಾ ಅದಕ್ಕೂ ಹಿಂದಿನಿಂದ ಪವಿತ್ರತೆಯ ಪ್ರದೇಶವೆನಿಸಿಕೊಂಡ ನೆಲವನ್ನು ನಮ್ಮ ಸಂಸ್ಕೃತಿಯ ಮೂಲ ನೆಲೆಯಾದ ಕೈಲಾಸ ಮಾನಸ ಪ್ರದೇಶವನ್ನು ಈ ಶತಮಾನದ ನಲವತ್ತರ ದಶಕದಲ್ಲೂ ಅಭಾದಿತವಾಗಿ ಹೋಗಿಬರಬಹುದಾಗಿದ್ದ ನೆಲವನ್ನು ಚೀನೀಯರಿಗೆ ಬಿಟ್ಟುಕೊಟ್ಟು ಕೈಕಟ್ಟಿಕುಳಿತಿರುವ ಭಾರತದ ಪ್ರಜೆಯಾಗಿದ್ದ ನನಗೆ ಕೈಲಾಸ ಮಾನಸದ ಸ್ಥಿತಿಗತಿಯನ್ನು ವಿಚಾರಿಸಿ ಪ್ರಶ್ನಿಸುವ ಹಕ್ಕು ಎಲ್ಲಿ ಉಳಿದಿದೆ ಎನಿಸಿತು. ನಿಜವಾಗಿಯೂ ನಾವು ಹೆದರು ಪುಕ್ಕರೇ? ಟಿಬೆಟೀಯರ ಕ್ಷೇಮದಲ್ಲೇ ನಮ್ಮದೂ ಇದೆಯೆಂಬುದನ್ನರಿಯಲಾರದಷ್ಟು ಪೆದ್ದರೇ? ಎರಡೂ ಇರಬೇಕು! ಮನಸ್ಸು ಒಂದೆಯೇ ರಾಮ ಮನೋಹರ ಲೋಹಿಯಾ ಅವರ ಅಭಿಪ್ರಾಯವನ್ನು ನೆನಪಿನಾಳದಿಂದ ಹೊರತೆಗೆಯಲು ತೊಡಗಿತು. ಯೋಚಿಸಿದಂತೆ ಇದು ಸಾಮಾನ್ಯ ಪ್ರಜೆಯ ನೇರ ಬುದ್ಧಿಗೆ ಎಟುಕದ ರಾಜಕೀಯ ಕೂಟನೀತಿಯ ಚಕ್ರವ್ಯೂಹವೆನಿಸಿತು. ಟಿಬೆಟ್ಟಿನಲ್ಲೇ ಇಂಥ ಪ್ರಶ್ನೆಗಳಿಗೆ ಉತ್ತರ ಹುಡುಕುವುದು ಕೆಂಜಗನ ಗೂಡಿಗೆ ಕೈಯಿಟ್ಟಂತೆ ಎನಿಸಿತು. ತಾಳ್ಮೆಯಿಂದಿದ್ದು ಊರಿಗೆ ಮರಳಿದ ಮೇಲೆ ಕರ್ನಾಟಕದಲ್ಲೇ ಇರುವ ಟಿಬೆಟೀಯರನ್ನು ಮುಖತಃ ಮಾತನಾಡಿಸಿ ತಿಳಿಯಬೇಕಾದ ವಿಷಯ, ಭಾರತದ ಪ್ರಜೆಯಾಗಿ ನನ್ನ ಕರ್ತವ್ಯವೂ ಕೂಡ ಎನಿಸಿತು.

ಚಿಂತನೆ ಮಾಡಿದ ಮನದ ಹಾರೈಕೆಯಿಷ್ಟೆ. ಟಿಬೆಟ್ಟಿನಲ್ಲಿ ಬೇಗನೇ ಟಿಬೆಟ್ಟಿಗೆ ಸ್ವಾತಂತ್ರ್ಯ ಬಂದು, ಶಾಂತಿ ನೆಲೆಸಿ, ಅದರ ಪ್ರಜೆಗಳು ತಾಯ್ನಾಡಿಗೆ ಮರಳಿ, ಮೊದಲಿನ ನಿರಾತಂಕ ಬಾಳ್ವೆ ನಡೆಸುವಂತಾಗಲಿ ಎಂದು. ಆಗ ಮಾತ್ರ ವಿಶ್ವ ಅಳುಕಿಲ್ಲದ ಮನಸ್ಸಾಕ್ಷಿಯ ಕ್ಷೇಮದ ಉಸಿರೆಳೆಯಲು ಸಾಧ್ಯ.

ರಾಮ ಮನೋಹರ ಲೋಹಿಯಾ – ಯಾವ ಜನಾಂಗ ತನ್ನ ದೇವರನ್ನು ಪರದೇಶದಲ್ಲಿ ಬಿಟ್ಟಿರುವುದು? ಕೈಲಾಸ ಮಾನಸವನ್ನು ಯಾವುದೇ ಸ್ಪಷ್ಟ ವಿರೋಧವಿಲ್ಲದ ಪರಕೀಯರಿಗೆ ಕೊಟ್ಟ ದುರ್ಬಲ ದೇಶ ನಮ್ಮದೆನ್ನೋಣವೇ? ಮ್ಯಾಕ್ ಮೋಹನ್ ರೇಖೆ ಹಿಂದೂಸ್ಥಾನದ ಮತ್ತು ಚೀನಾದ ಗಡಿರೇಖೆಯಲ್ಲ, ಗಡಿರೇಖೆಯಾಗಲಾರದು, ಆಗಿರಲಿಲ್ಲ, ಆಗಬಾರದು. ತಿಬ್ಬತ್ ರಾಜ್ಯ ಸ್ವತಂತ್ರವಿದ್ದರೆ ಆಗ ಕೈಲಾಸ ಮಾನಸ ಅವರ ಸುಪರ್ದಿನಲ್ಲಿದ್ದರೂ ನಡೆದೀತು. ಏಕೆಂದರೆ ನೇಪಾಳದಂತೆ ತಿಬ್ಬತ್ ದೇಶವೂ ಭಾರತದ ಒಡನಾಡಿ, ಮಿತ್ರರಾಷ್ಟ್ರ. ತಿಬ್ಬತ್ ತನ್ನ ಸ್ವಾತಂತ್ರ್ಯ ಕಳೆದುಕೊಂಡರೆ ಭಾರತ ಚೀನಾ ಗಡಿರೇಖೆ ಮ್ಯಾಕ್ ಮೋಹನ್ ರೇಖೆಯಾಗದೆ ಇನ್ನೂ ೭೦ – ೮೦ –೯೦ ಮೈಲಿ ಉತ್ತರಕ್ಕೆ ಕೈಲಾಸ ಮಾನಸದ ಮೇಲಕ್ಕೆ ಇರಬೇಕು. ಇಲ್ಲಿ ಕೆಲವರು ಪ್ರಶ್ನಿಸಬಹುದು ೧೯೪೭ರ ಆಗಸ್ಟ ಹದಿನೈದರ ಗಡಿರೇಖೆಯನ್ನೇ ರಕ್ಷಿಸಿಕೊಳ್ಳಲಾಗದ ನಾವು ಇನ್ನೂ ೮೦ – ೯೦ ಮೈಲಿ ಉತ್ತರಕ್ಕೆ ಹೇಗೆ ಸರಿಸಿಯೇವು? – ಇದಕ್ಕೆ ನನ್ನದೊಂದು ಸಣ್ಣ ಉತ್ತರ. ಭಾರತದ ಗದ್ದಿಯಲ್ಲಿ ಯಾವಾಗಲೂ ನಪುಂಸಕ ನಾಯಕರೇ ಇರುವುದಿಲ್ಲ. ಭಾರತದ ಪ್ರಜಾಕೋಟಿ ಈ ವಿಷಯದಲ್ಲಿ ಒಂದು ನಿರ್ಣಯಕ್ಕೆ ಬಂದೇ ಬರುತ್ತದೆ ಎಂಬ ವಿಶ್ವಾಸ ನನಗಿದೆ.



**ಮಾನಸಕ್ಕೆ ಹರಿದು ಹೋಗುವ ಝರಿ**



ಇಳಿದ ದಾರಿಯನ್ನು ತಿರುಗಿ ನೋಡಿದಾಗ

# ಅನುಭಾವದಂಗಳದಲ್ಲಿ

ನಲಿನಲಿದು ಸಭಾಪತಿಗರ್ಪಿತವೆಂದು
ತೆರೆ ತೆರೆದು ತೋರಿದ ನೀಲತನುವನಿಗೋ
ಸಂಜೆಸೀರೆಯಲಿ ಮರೆಮಾಡಿಹಳು ದೇವಸರಸಿ

ಪ್ರದೋಷ ಪೂಜಾಸಮಯ ಸನ್ನಿಹಿತವೆಂದು
ರಾಗರಂಜಿತ ಮುಗಿಲ ಯವನಕೆಯನೆಳೆದು
ಬಾನಂಚಿನಲಿ ಶಿರಬಾಗಿಹನು ವಿವಸ್ವತನು

ನುಡಿದಿಹನು ಶಿವಸನ್ನಿಧಿಗೈತರುವಮುನ್ನ
ಈ ಬೈಗು ತನುಮನದಿ ಜಾಗರಾಗಿ
ಬನ್ನಿ, ಸನ್ನದ್ಧರಾಗಿ ಅನುಭಾವದಂಗಳಕೆ!

ಕೊಡನೆ ಸರೊವರದ ದಂಡೆಯಲ್ಲಿ ಕುಳಿತು ಸಾಯಂಕಾಲದ ಸೊಬಗನ್ನು ಸವಿಯುತ್ತಿದ್ದಂತೆ ಮನದಾಳದಲ್ಲಿ ಕಾತರ ಕಾಲಾಡಿಸುತ್ತಿತ್ತು. ಇನ್ನು ನಾಲ್ಕೇ ದಿನಗಳಲ್ಲಿ ಕೈಲಾಸ ಪರ್ವತದ ಪ್ರದಕ್ಷಿಣೆಯೂ ಮುಗಿದು ಹೋಗುವುದೆಂಬ ವಿಚಾರವನ್ನು ಮುಳುಗುತ್ತಿದ್ದ ಸೂರ್ಯನೂ ಕೂಡ ಖಚಿತ ಪಡಿಸುತ್ತ ನಾಲ್ಕು ದಿನಗಳ ಕ್ಷಣ ಕ್ಷಣವನ್ನೂ ಜೀವದ ಕಣಕಣದಲ್ಲಿ ತುಂಬಿಟ್ಟುಕೊಳ್ಳಲು ಅನುವಾಗುವಂತೆ ಎಚ್ಚರಿಸಿದ್ದನು.

ಒಬ್ಬಿಬ್ಬರಂತೆ ಇತರ ಸಹಯಾತ್ರಿಗಳೂ ಬಂದು ಸೇರಿದರು. ಮಾನಸ ಸರೋವರದ ಪರಿಕ್ರಮದಲ್ಲಾದ ಸಿಹಿ ಕಹಿ ಅವಭವಗಳನ್ನು ಹಂಚಿಕೊಳ್ಳುತ್ತಲೇ ನಾಳಿನ ಕೈಲಾಸ ಯಾತ್ರೆಯತ್ತ ಹೊರಳಿತು. ಪರೀಕ್ಷೆಯ ಸಿದ್ಧತೆ ಕುರಿತು ವಿದ್ಯಾರ್ಥಿಗಳಲ್ಲಿನ ಚರ್ಚೆಯಂತಿತ್ತು ನಮ್ಮ ಹರಟೆ. ಅಷ್ಟೆ ಗಂಭೀರವೂ ಆಗಿತ್ತು. ಆದ ಅನುಭವಗಳ ಬೆಳಕಿನಲ್ಲಿ ಮುಂದಾಗುವುದರ ಬಗೆಗೆ ಊಹೆ-ಸಿದ್ಧತೆಗಳು. ಮನುಷ್ಯ ಪ್ರಯತ್ನ-ಸಿದ್ಧತೆಗಳು ಇರಬೇಕು. ಅದನ್ನು ಮೀರಿ ದೈವಲೀಲೆ ನಡೆದಾಗ ಮಾನವ ಜನ್ಮದ ಸಾರ್ಥಕತೆ ಅರಿವಿಗೆ ಬರುವುದು. ನಾನು ಎಂಬ ಅರಿವಿನ ಹಿಂದೆಯೇ ತತ್ (ದೇವರು- ಅಲೌಕಿಕ ಶಕ್ತಿ, ಬ್ರಹ್ಮ ಏನೆಂದರೂ ಸರಿ) ಎನ್ನುವದರ ಅನುಭವವನ್ನೂ ಪಡೆಯುವ ಮಾನವ ಚೇತನದ ಶ್ರೇಷ್ಠತೆ.

ಹದಿನೈದು ಸಾವಿರ ಅಡಿಗಳೆತ್ತರದಲ್ಲಿ, ಟಿಬೆಟ್ ಹವಾಮಾನದಲ್ಲಿ ಮಾನಸ ಸರೋವರದ ಪ್ರದಕ್ಷಿಣೆಯ ನಡಿಗೆಯಿಂದ ಸಾಕಷ್ಟು ಪಳಗಿದ್ದೇವೆಂದು ನಮ್ಮ ನಂಬಿಕೆ. ಹಾಗೆಯೇ, ಇಲ್ಲಿನ ಕುದುರೆಯ ಸವಾರಿಯಂತೆಯೇ 'ಯಾಕ್' ಸವಾರಿಯೂ ಆದರೆ ಹೆದರುವ ಅವಶ್ಯವಿಲ್ಲವೆಂಬ ವಿಶ್ವಾ,ಸ. ಮೂರು ದಿನದ ಸ್ವಯಂಪಾಕವೂ ಅಭ್ಯಾಸವಾಗಿದ್ದು ಇದೇ ರೀತಿ ಇನ್ನೂ ಮೂರು ದಿನ 'ಮಾಡಿ ತಿಂದರೆ' ಮುಗಿಯಿತೆಂಬ ಧೋರಣೆ. ಬುದ್ಧಿಯು ತರ್ಕ ಮಾಡಿ ಮನಸ್ಸಿಗೆ

ಕೊಡುವ ಸಮಜಾಯಿಷಿ. ಆದರೆ ಕೈಲಾಸ ಪ್ರದಕ್ಷಿಣೆಯ ಅನುಭವವಾದರೋ ಅನೂಹ್ಯ-ತರ್ಕಾತೀತ.

ಬಲು ಉತ್ಸಾಹದಲ್ಲಿ ಬೇಗನೇ ತಯಾರಾಗಿ ದಾರ್ಚೆನ್ ಶಿಬಿರಕ್ಕೆ ಹೊರಡಲು ಬಸ್ ಎದುರು ನೋಡುತ್ತಿದ್ದ ನಮ್ಮ ಅಷ್ಟಾಟ ಮಾನಸದ ದಂಡೆಗುಂಟ ನಡೆದಿತ್ತು. ಬಣ್ಣ ಬಣ್ಣದ ಉಣ್ಣೆ ಉಡುಗೆ ತೊಟ್ಟು ಉರುಟಾದ ದೇಹ, ಕುಲಾವಿ ಕಟ್ಟಿದ್ದ ತಲೆ, ಆಗಾಗ ಬಗ್ಗಿ ಬಗ್ಗಿ ಕಲ್ಲುಗಳನ್ನಾರಿಸಿ ಹೆಕ್ಕುವ ಪರಿ. ನೆಲ ಕೆದರುವ ಕೋಳಿ ಹುಂಜಗಳೇ ಆಗಿದ್ದೆವು. ಆಯ್ದ ಕಲ್ಲುಗಳ ಭಾರ ಹೆಚ್ಚಾಯಿತೇ ಹೊರತು ಬಸ್ಸಿನ ಸದ್ದೇ ಇಲ್ಲ.

ಹನ್ನೊಂದು ಗಂಟೆಗೆ ಬಸ್ಸಿಗೆ ಬದಲಾಗಿ ಕಲ್ಲು, ಮರಳು, ಸಾಮಾನು ಸಾಗಿಸುವ ಲಾರಿ ಬಂದು ಅದರಲ್ಲಿ ನಮ್ಮ ಗಂಟು ಮೂಟೆಗಳು ಏರತೊಡಗಿದಾಗ ನಾವೂ ಮೂಟೆಗಳಾಗಿ ಅದರ ಮೇಲೇರಲಿಕ್ಕಿದ್ದೇವೆಂದು ಅರಿವಾಯಿತು. ಇದೂ ಆಗಿಹೋಗಲಿ ಕೆ.ಎಸ್.ಆರ್.ಟಿ.ಸಿ ಬಸ್ಸಿನ ಬಗೆಗೆ ಇನ್ನೂ ಮತ್ತೂ ತಾಳ್ಮೆತಂದುಕೊಳ್ಳುವ ಪಾಠವಾಗಲಿ ಎಂದಿತು ಮನ. ಉಸಿರಾಡದ ಮೂಟೆಗಳನ್ನು ಉಸಿರಾಡುವ ಮೂಟೆಗಳು ಒರಗಿ ಕೂರುತ್ತಿದ್ದಂತೆ ಹಲ್ಲುಗಳು ಕಟಕಟಾಯಿಸುವಂತೆ ಕಂಪಿಸುತ್ತಾ ಲಾರಿ ಓಡಿತು. ಲಾರಿ ಬೆಟ್ಟದ ಪಕ್ಕಕ್ಕೆ ಸರಿದಂತೆ ಪರಿಚಿತ ಮಾನಸ ಸರೋವರ ಮತ್ತು ಜೈದಿ ಶಿಬಿರ ಸಂಪೂರ್ಣವಾಗಿ ಕಣ್ಮರೆಯಾದವು. ಮತ್ತೊಮ್ಮೆ ಬಯಲಲ್ಲಿ ಬಯಲಾಗಿ ಹೋಗುತ್ತಿರುವ ಅನುಭವ, ಕಳೆದು ಹೋಗುತ್ತಿರುವ ತಳಮಳ. ಹಿಂದಿನ ದಿನದ ಸಮಾಜಾಯಿಷಿ ಎಲ್ಲೋ ಹಾರಿಹೋಗಿತ್ತು.

ನಮ್ಮ ಸ್ಥಿತಿನೋಡಿ ತಡೆಯಲಾಗದೆ ಮೋಡದಲ್ಲಿ ಮುಖ ಮರೆಸಿಕೊಂಡನು ಬೆಳಗಿನಿಂದ ಹಿತವಾಗಿ ಬೆಳಗಿದ್ದ ಸೂರ್ಯ. ಮಂಜು ಮುಚ್ಚಿಕೊಂಡಾಗಲೇ ಮಾರುತನಿಗೂ ಬೀಸಿಬರುವ ಮನಸ್ಸಾಯಿತು. ತುಂತುರು ಮಳೆ ಆರಂಭವಾಯಿತು. ಈಗ ಚಳಿಯಿಂದಾಗಿ ಹಲ್ಲುಗಳ ಕಟಕಟ ದ್ವಿಗುಣಗೊಂಡಿತ್ತು. ನಡುಕದಿಂದ ಹೊಟ್ಟೆ ಬೆನ್ನುಗಳು ಹುರಿಗೊಂಡು ಸೆಟೆದಿದ್ದವು. ವಾಹನಾರೂಢರಾದಾಗಲೇ ಈ ಸ್ಥಿತಿಯಾದರೆ ಕಾಲ್ನಡಿಗೆ ಹೇಗೆಂಬ ದಿಗಿಲು ಸೇರಿ, ದೇವನಿಗೆ ಮೌನ ಪ್ರಾರ್ಥನೆ ಸಲ್ಲಿಸಿದೆವು. ಪ್ರದಿಕ್ಷಣಾ ಕಾಲದಲ್ಲಿಯಾದರೂ ಸೂರ್ಯ ನಮ್ಮನ್ನು ಈ ರೀತಿ ಕಡೆಗಣಿಸದಿರಲೆಂಬ ಬೇಡಿಕೆ ಸಲ್ಲಿಸಿದೆವು.

ಜೈದಿಯಿಂದ ಒಂದುವರೆಗಂಟೆ ಬಸ್ ಪ್ರಯಾಣದ ನಂತರ ದಾರ್ಚೆನ್ ಊರಿನ ಕೋಟೆ ಬಾಗಿಲನ್ನು ದೂರದಿಂದ ನೋಡುತ್ತಲೇ ಉತ್ಸಾಹ ಮತ್ತೆ ಮೂಡಿತ್ತು. ಜೈದಿ ಬಿಟ್ಟಾಗಿನಿಂದಲೂ ಮುಖವನ್ನೇ ತೋರದಿದ್ದ ಸೂರ್ಯ ಮೋಡಗಳಿಂದ ಹೊರಬಂದು ಕೈಲಾಸ ದರ್ಶನ ಮಾಡಿಸಿದ. ಶಿಖರಕ್ಕೆ ಎಷ್ಟು ಸನಿಹದಲ್ಲಿದ್ದೇವೆಂಬುದು ಆಗಲೇ ಗೊತ್ತಾದದ್ದು. ತಂದೆಯ ಮಡಿಲಲ್ಲಿ, ಅವನ ಎದೆಗೊರಗಿ ಕುಳಿತ ಮಗುವಿನಂತೆ, ಕೈಲಾಸ ಶಿಖರದ ಪೀಠಕ್ಕೆ ಬಹು ಸಮೀಪದಲ್ಲಿತ್ತು ದಾರ್ಚೆನ್ ಊರು. ಶಿಬಿರದ ಅಂಗಳಕ್ಕೆ ಬಂದು ನಿಂತರೆ ಶಿಖರ ಕಾಣುವುದು. ತನಗೆ ಮನಬಂದಾಗ(ನಾವು ನೋಡಬೇಕೆಂದಾಗಲ್ಲ!) ಪೂರ್ಣದರ್ಶನ ಕೊಡುತ್ತಿದ್ದ ಕೈಲಾಸ ಶಿಖರದ ವೈಭವ ನೋಡಿಯೇ ತಿಳಿಯುವಂತಹುದು. ವರ್ಣಸಲಸದಳ. ಈ ಕೈಲಾಸವನ್ನು ಪರಿಕ್ರಮಿಸುವೆನೆಂಬ ವಿಚಾರವೇ ಮೈನವಿರೇಳಿಸುತ್ತಿತ್ತು.

ಜೈದಿಯಲ್ಲಿ ಮೂರುದಿನಗಳ ಹಿಂದೆ ಅಗಲಿದ್ದ ಸಹಯಾತ್ರಿಗಳನ್ನು ನೋಡುವ ಆತುರ. ಅವರ ಕೈಲಾಸಾನುಭವ, ಯಾಕ್ ಅನುಭವ ತಿಳಿಯುವ ತವಕ. ಓಂ ನಮಃ ಶಿವಾಯ ಎಂದು ಅಭಿನಂದಿಸಿ ಅಪ್ಪಿದೆವು. ನೋಡಲೇ ಬೇಕಾದ ಸ್ಥಳಗಳ ವಿವರ, ಕೊಳ್ಳಲೇ ಬೇಕಾದ ವಸ್ತುಗಳ ಪಟ್ಟಿ-ಬೆಲೆ ಎರಡು ದಿನಗಳ ಊಟಕ್ಕೆ ಬಹು ಎತ್ತರದ ಶಿಬಿರದಲ್ಲಿ ಬೇಯಿಸಲು ಬೇಕಾದ ಪೂರ್ವ ಸಿದ್ಧತೆ-ಎಚ್ಚರಿಕೆ, ಇತರ ಮುಂಜಾಗ್ರತಾಕ್ರಮ- ಎಲ್ಲದರ ವಿಚಾರ ವಿನಿಮಯಕ್ಕೆ ಸಿಕ್ಕ ಸಮಯ ಕೇವಲ ಹತ್ತು ನಿಮಿಷ-ನಮ್ಮ ಸಾಮಾನುಗಳನ್ನು ಲಾರಿಯಿಂದ ಇಳಿಸಿ ಮತ್ತೊಂದು ಗುಂಪಿನವರ ಸಾಮಾನುಗಳನ್ನು 'ಲಾರಿಗೆ ಹಾಕುವವರೆಗೆ. ಮತ್ತೊಮ್ಮೆ 'ಪುನಃ ನೋಡುವಾ' 'ಒಳ್ಳೆಯದಾಗಲೀ' ಎಂದು ವಿದಾಯ ಹೇಳುತ್ತಿರುವಾಗಲೇ ಲಾರಿ ಮರಳಿ ಹೊರಟೇ ಬಿಟ್ಟಿತು.

'ದಾರ್ಚೆನ್'ಗೆ ಬಂದ ಒಂದು ಗಂಟೆಯಲ್ಲಿ ಸರಾಸರಿ ನಾನೂರು ರೂಪಾಯಿಗಳು(ನೂರು ಯುವಾನ್) ಪ್ರತಿಯೊಬ್ಬರ ಜೇಬಿನಿಂದ ಟಿಬೆಟೀ ಕೋರಿ ಶೆಟ್ಟಿಗಳ ಜೋಳಿಗೆಗೆ ಬಿದ್ದಿದ್ದವು. ಕೊಂಡದ್ದೇನು? ಹವಳವೆನಿಸಿಕೊಂಡ ಮಣಿಗಳು, ಮುತ್ತು, ಬಣ್ಣ ಬಣ್ಣದ ಕಲ್ಲು ಮಣಿಗಳ ಸರಗಳು, ಸ್ಫಟಿಕದ ಕಲ್ಲುಗಳು, ಬೆಳ್ಳಿಯದಿರಬಹುದಾದ ಹಿಡಿಯ ಕತ್ತಿ ಚಾಕುಗಳು- ಇಷ್ಟೆಲ್ಲ ವ್ಯಾಪಾರ, ಮಾತಿಲ್ಲದೆ ಕೈಸನ್ನೆಯಲ್ಲೇ ನಡೆದದ್ದು. ಭಾಷೆ ಬಾರದ ಕಾರಣ. ಭಾಷೆ ತಿಳಿದಿದ್ದರೆ ಇನ್ನೆಷ್ಟು ಹಿರಿಯುತ್ತಿದ್ದರೋ ಈ ಶಿವನೂಳಿಗದವರು!

ಮೂರು ದಿನಗಳಿಂದ ಎರಡು ಹೊತ್ತೂ ತಿನ್ನುತ್ತಿದ್ದ ಅದೇ ತಬ್ಬಲಿ ಅಂಬಲಿ-'ಸೂಪ್' ತಿಂದು ಸಾಯಂಕಾಲದ ತಿರುಗಾಟಕ್ಕೆ ಹೊರಟವರು ಈ ಕೋರಿ ಶೆಟ್ಟಿಗಳ ಮನೆ-ಕಂ-ಅಂಗಡಿಗೆ ನುಗ್ಗಿದೆವು. ಮತ್ತಷ್ಟು ಹಣ ಪೋಲು ಮಾಡಲು. ಈ ಅಂಗಡಿಗಳಲ್ಲಿ ನನ್ನನ್ನಾಕರ್ಷಿಸಿದ ವಸ್ತುಗಳು- ಹಿತ್ತಾಳೆಯ ತಾಳಗಳು ಮತ್ತು ವಿವಿಧ ಲೋಹಗಳಿಂದ ಮಾಡಿದ ಕೆತ್ತನೆಗಳಿದ್ದ ಪ್ರಾರ್ಥನಾ ಚಕ್ರ 'ಕೊರ್ಲೊ'. ರಾಟಾಳದಂತೆ ತಿರುಗುವ ಡಬ್ಬಿಯೊಳಗೆ ಕಾಗದದ ಸುರುಳಿಯಿಟ್ಟಿರುವ ಚಕ್ರ. ಕಾಗದದ ಪೂರ ಅನೇಕಬಾರಿ ಬರೆದ 'ಓಂ ಮಣಿಪದ್ಮೇ ಹುಂ(ಹ್ರಿ)' ಎಂಬ ಮಂತ್ರ. ಚಕ್ರವು ಎಷ್ಟು ಬಾರಿ ತಿರುಗುವುದೋ ಅಷ್ಟು ಬಾರಿ ಒಳಗಿನ ಮಂತ್ರವನ್ನು ಪಠಿಸಿದಂತೆ. ಡಬ್ಬಿ ಬೆಳ್ಳಿಯದ್ದೋ, ತಾಮ್ರದ್ದೋ, ಕಬ್ಬಿಣದ್ದೋ, ಕಡೆಗೆ ಮಣ್ಣಿನ ಡಬ್ಬಿಯೂ ಆದೀತು. ಮಂತ್ರದ ಸುರುಳಿಯಿದ್ದರೆ ಆಯಿತು. ಶಕ್ತ್ಯಾನುಸಾರ, ಪ್ರಾರ್ಥನಾ ಚಕ್ರಕ್ಕೆ ಹೊರಗಿನ ಅಲಂಕಾರ, ಮಣಿ ಮುತ್ತುಗಳಿಂದ ಚಿತ್ತಾರದ ಕೆತ್ತನೆಯಿಂದ. ಬೌದ್ಧರ ಪುರಾಣದಂತೆ ಬೋಧಿಸತ್ವ ಅಮಿತಾಭನ ಕೃಪೆಯಿಂದ ಅವಲೋಕಿತೇಶ್ವರ ಈ ಆರು ಅಕ್ಷರದ ಮಣಿ ಮಂತ್ರವನ್ನು ರಚಿಸಿದನೆಂದು ಪ್ರತೀತಿ. 'ಮಣಿ' ಪುರುಷ ಪ್ರತೀಕವಾದರೆ 'ಪದ್ಮ' ಪ್ರಕೃತಿ-ಶಕ್ತಿಯ ಪ್ರತೀಕ. 'ಓಂ' ಎಲ್ಲ ಮಂತ್ರಗಳಂತೆ ಪೂರ್ವ ಪದವಾದರೆ 'ಹುಂ' ತಾಂತ್ರಿಕ ಉತ್ತರ ಪಾದ. 'ಹ್ರಿ' ಕಾರವನ್ನೂ(ಹೃದಯದ ಹ್ರಸ್ವರೂಪ) ಕೆಲವರು ಸೇರಿಸುತ್ತಾರೆ. ಮಣಿಯು ಹೃದಯದಲ್ಲಿದೆ ಎಂಬುದು ಮಂತ್ರಾರ್ಥ. ಈ ಮಂತ್ರ ಜಪದಿಂದ ದೇವ-ದಾನವ-ಮಾನವ, ಪ್ರಾಣಿ, ಅಧೋಲೋಕ, ನರಕ ಎಂಬ ಆರು ಲೋಕಗಳಿಂದ ಮುಕ್ತಿ ಸಿಗುವುದೆಂದು ಟಿಬೆಟೀಯರ ನಂಬಿಕೆ. ಅಂತೆಯೇ ಮಂತ್ರದಲ್ಲಿ ಶ್ರದ್ಧೆ. ಈ ಪ್ರಾರ್ಥನಾ ಚಕ್ರ ಅಥವಾ ಜಪಸರ ಅನೇಕ ಜನರ ಕೈಯಲ್ಲಿ ತಿರುಗುತ್ತಿರುವುದನ್ನು ಟಿಬೆಟ್ಟಿಗೆ ಬಂದಾಗಿನಿಂದಲೂ ನೋಡುತ್ತಿದ್ದೆವು. ಮುದುಕರು, ಯುವಕರು, ಹೆಂಗಸರು, ಗಂಡಸರು,

ಸಂಸಾರಿಗಳು, ಸನ್ಯಾಸಿಗಳು, ಸಿರಿವಂತರು, ಭಿಕ್ಷುಕರು ಎಂಬ ತಾರತಮ್ಯವಿಲ್ಲದ ಎಲ್ಲರೂ ದಿನದಲ್ಲಿ ಕೆಲಕಾಲ ಜಪದಲ್ಲಿ ತೊಡಗುತ್ತಾರಂತೆ. ಶ್ರದ್ಧಾವಂತರಿಗೆ ಕುಳಿತಲ್ಲಿ ನಿಂತಲ್ಲಿ ನಡೆವಲ್ಲಿ ಕೆಲಸದಲ್ಲಿ ಲೀಲಾಜಾಲವಾಗಿ ಈ ಮಂತ್ರ ಜಪ ಎರಡನೆಯ ಉಸಿರಾಟದಂತೆ ನಡೆದಿರುತ್ತದೆ. ಭಾರತದ ಕಟ್ಟಾ ಬ್ರಾಹ್ಮಣನು ದಿನದಲ್ಲಿ ಮಾಡುವ ಗಾಯತ್ರಿ ಜಪಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಇಲ್ಲಿನ ಸಾಮಾನ್ಯನೊಬ್ಬ ಮಣಿಮಂತ್ರವನ್ನು ಜಪಿಸಿರುತ್ತಾನೆ. ಈ ಕೊರ್ಲೊ ಚಕ್ರವು ಟಿಬೆಟ್ಟಿನ ಧರ್ಮರಥವನ್ನು ಎಳೆಯುವ ಚಕ್ರವೇ ಸೈ! ಪ್ರತಿಯೊಬ್ಬ ಪ್ರಜೆಯೂ ಈ ರಥವನ್ನೆಳೆಯುವಂತೆ ಮಾಡುವ ಚಕ್ರ. ಟಿಬೆಟೀಯರ ಪುರಾಣದಂತೆ ಈ ಚಕ್ರದ ಮಧ್ಯದಂಡವಾದಂತೆ ಭೂಮಿಯ ಮಧ್ಯದಂಡವಾಗಿ ಆಕಾಶವನ್ನು ಭೇದಿಸಿರುವದೇ ಕೈಲಾಸ ಶಿಖರ. ಸೌಂದರ್ಯದಲ್ಲಿ, ಔನ್ನತ್ಯದಲ್ಲಿ, ಭೂಮಾನುಭೂತಿಯಲ್ಲಿ ದಿಟವಾಗಿಯೂ ಭೂಮಿಯ ಮಧ್ಯದಂಡವೇ ಈ ಮೇರು ದಂಡ.

ನಮ್ಮ ಒಂದು ತಿಂಗಳ ಪ್ರವಾಸದ ಪ್ರಮುಖ ಆಕರ್ಷಣೆಯಾಗಿದ್ದ ಈ ಕೈಲಾಸದ ಪರಿಕ್ರಮಕ್ಕೆ ಏನೆಲ್ಲ ತಯಾರಿ! ಮೇಲೇರಿದಂತೆ ಬೇಳೆ ಬೆಯಲಾರದೆಂದು(ನಮ್ಮದೂ ಬೇಳೆಬೇಯಲಿಕ್ಕಿತ್ತು!) ಹಿಂದಿನ ರಾತ್ರಿಯೇ ಪೆಟ್ಟಿಗೆ ಮಾಡಿದ್ದ ಖಿಚಡಿಯನ್ನು ಬುತ್ತಿ ಕಟ್ಟಿದ್ದಾಯಿತು. ಚೀಜ್, ಚಾಕೊಲೇಟ್, ಒಣದ್ರಾಕ್ಷಿ, ಪಂಚಕಜ್ಜಾಯಮಿಶ್ರ, ಬಿಸ್ಕತ್ತುಗಳು, ಅಳಿದುಳಿದ ತಿನಸುಗಳನ್ನು ಜೇಬಿಗಿಳಿಸಿದ್ದಾಯಿತು. ಚಳಿ ತಡೆಯಲು ಎರಡೆರಡು ಸ್ವೆಟರ್ ಧರಿಸಿ 'ನಿರಾಕಾರಿ'ಗಳಾದೆವು. ಬೆಳಗಿನ ಉಪಾಹಾರವನ್ನು ಬೇಯಿಸಿ ತಿನ್ನಲು ಯಾರಿಗೂ ವ್ಯವಧಾನವಿರಲಿಲ್ಲ. ಹಸಿವೂ ಇರಲಿಲ್ಲ. ಬಯಕೆಯು ಮೊದಲೇ ಇರಲಿಲ್ಲ. ಭೂಮಟ್ಟದಿಂದ ಬಹು ಎತ್ತರಕ್ಕೆ–೧೬,೦೦೦ ಅಡಿಗಳಷ್ಟು–ಹೋಗಿದ್ದರಿಂದಲೋ ಅಥವಾ ದಾರಿಯಲ್ಲಿ ಶೌಚಾಲಯದ ಕೊರತೆಯ ಬಗೆಗೆ ಒಳ ಮನಸ್ಸಿನ ಮುನ್ನಚ್ಚೆರಿಕೆಯೋ, ಇಲ್ಲ, ಎಂದೋ ಅರೆಬೇಯಿಸಿಟ್ಟ(ಪ್ರಿಕುಕ್) ರುಚಿಗೆಟ್ಟ 'ಗಂಜಿಯೂಟ'ವೆಂದು ತಾತ್ಸಾರವೋ–ಅಥವಾ ದೇಹದ ಪಚನಾಂಗಗಳಿಗೆ ಸಂಪೂರ್ಣ ವಿಶ್ರಾಂತಿಕೊಟ್ಟು ಪಂಚೇಂದ್ರಿಯಗಳಿಗಾಗುವ ಹಬ್ಬದೂಟವನ್ನು ಪೂರ್ಣ ಮನಸ್ಸಿನಿಂದ ಸವಿಯಲೆಂದೋ– ಒಟ್ಟಿನಲ್ಲಿ ಶಿವನ ಸಾನ್ನಿಧ್ಯದಲ್ಲಿ ಉಪವಾಸ ಜಾರಿಯಾಯಿತು. ನಮಗೆಲ್ಲಾ ಇದ್ದುದು ಒಂದೇ ಬಯಕೆ–ಹಿಮಾರಿಯ ಕೃಪಾದೃಷ್ಟಿ ಬಿದ್ದು ಮಂಜಿನ ತೆರೆ ಮಾಯವಾಗಿ ಮಂಜುನಾಥನ ದರ್ಶನವಾಗಲೆಂಬ ಹಾರೈಕೆ.

ನಸುಬೆಳಕಿನ ಕಡ್ಡಾಯ ಸಾಮೂಹಿಕ ಪ್ರಾರ್ಥನೆ– 'ಹರಹರ ಮಹಾದೇವ' ಉಗ್ಗಡಣೆಯೊಂದಿಗೆ ಯಾತ್ರಿಗಳ ಜಾತ್ರೆ ಊರಬಿಟ್ಟು ನಡೆದಿತ್ತು. ನಮ್ಮನ್ನು ಬೀಳ್ಕೊಡಲು ಗ್ರಾಮಸಿಂಹಗಳ ಪಡೆ ಮುಂದೆ ಮುಂದೆ ನಡೆದವು. ಊರಗಡಿಯನ್ನು ದಾಟುತ್ತಿದ್ದಂತೆ ಒಂದೊಂದೇ ಬೊಗಳುತ್ತಾ ಮರಳಿ ಊರಿಗೆ ಮೊಗಮಾಡಿ ನಡೆದವು. ಒಂದು ಕಿ.ಮೀ ನಡೆದು ನಮ್ಮ 'ಸವಾರಿ'ಗಾಗಿ ಅರ್ಧ ತಾಸು ಕಾದನಂತರ ಬಂದವು ನಂದಿಗಳು–ನಂದಿಕೇಶ್ವರರು. ಯಾಕ್ ಮತ್ತು ಅದರೊಡೆಯರು.

ಈ ಮೊದಲು ನೋಡಿದ್ದ ಚಿತ್ರಗಳು, ಕೇಳಿದ್ದ ವಿವರಣೆಗಳು, ಹಿಂದಿನ ತಂಡದವರು ಕೊಟ್ಟಿದ್ದ ಆಶ್ವಾಸನೆ ಟಿಪ್ಪಣಿಗಳು, ಮುನ್ನೆಚ್ಚರಿಕೆಯ ಸಲಹೆ ಸೂಚನೆಗಳು ಎಲ್ಲವೂ ಮಿದುಳಿನಿಂದ ಹಾರಿಹೋದವು. ಆ ಗಳಿಗೆಯಲ್ಲಿ ಕಾಲುಗಳು ಕರಗಿದ ಮೇಣವಾದರೆ, ಕಣ್ಣು ಬಾಯಿ ಊರಗಲವಾದವು. ಎದೆನಗಾರಿ ಭಾರಿಸಿತ್ತು. ನೆಲ ಒದ್ದೆಯಾಗಲಿಲ್ಲ ಅಷ್ಟೆ ಪುಣ್ಯ! ಯಾಕ್‌ನ ಮೈ ತುಂಬಾ ಹಬ್ಬಿ ಹರಡಿದ್ದ ೨–೨ ೧/೨ ಅಡಿ ಉದ್ದದ ಕೇಶರಾಶಿಯ ವೈಭವ, ಎರಡು ಮೊಳಗಳಿಂದ ಒಂದು

ಮಾರುದ್ದವವರೆಗೂ ಬೆಳೆದಿದ್ದ ಕೋಡುಗಳ ಗಮ್ಮತ್ತು! ಗುಹಾಣದಂತಹ ಹೊಟ್ಟೆಯೊಳಗಿಂದ ಹೊರಹುತ್ತಿದ್ದ ಗಂಭೀರ ಹುಂಕಾರ, ಕಬ್ಬಿಣದ ಕೊಡತಿಯಂತಿದ್ದ ಗೊರಸುಗಳ ಉಜ್ಜಾಟ, ರಕ್ತಾರುಣ ನೇತ್ರದ್ವಯ, ಆರಡಿ ಉದ್ದದ ಮುಕ್ಕಾಲು ಟನ್ ಭಾರದ ದೀರ್ಘ ಭವ್ಯ ದೇಹ, ಆ ದೇಹದಿಂದ ಹೊರಡುತ್ತಿದ್ದ ಉಸಿರುಗಟ್ಟಿಸುವ ವಿಚಿತ್ರ ಗಂಧ–ನಾವೆಲ್ಲ ನರಪೇತಲಗಳು ಭಯ ಬಿದ್ದು ಪೆಚ್ಚು ಪೆಚ್ಚಾಗಿ ಹಿಜ್ಜುತ್ತಾ ನಿಲ್ಲುವಂತಾಗಿತ್ತು. ಈ ವಾಹನ ಗಳ ಜೊತೆಗೂಡಿ ಬಂದಿದ್ದ ವಾಹನಾಧಿಕಾರಿಗಳೋ – ಹರೋಹರ !

ಜಟೆಕಟ್ಟಿದ ಕೂದಲ ಜಡೆಗಳಿಗೆ ಬಣ್ಣ ಬಣ್ಣದ ಮಣಿ–ಟೇಪು ಗಳ ಅಲಂಕಾರ, ತಲೆಗೆ ವಿಧ ವಿಧ ರೂಪದ ಕೊಳೆಯಾದ ಟೊಪ್ಪಿಗೆ, ತೇಪೆ ಹಚ್ಚಿದ ಕರಿಕೋಟಿನ ಒಂದು ಕೈ ಭುಜದ ಕೆಳಗೆ ಜೋತಾಡುತ್ತಿದ್ದರೆ, ಸೊಂಟದ ಪಟ್ಟಿಯಿಂದ ನೇತಾಡುತ್ತಿದ್ದ ಕತ್ತಿ, ಬೆಳಗ್ಗೆ ಎದ್ದ ಹಾಗೇ ಬಂದುದ್ದರಿಂದ ಕಣ್ಣಿನಲ್ಲಿನ್ನೂ ಇದ್ದ ಜಿಬರು, ಕಟವಾಯಿಯಲ್ಲಿ ಒಣಗಿದ್ದ ಜೊಲ್ಲಿನ ಕರೆ, ಅವರು ನಮ್ಮನ್ನು ನೋಡಿ ನಕ್ಕಾಗ ಅದು ಮುಗ್ಧನಗೆಯೋ ವಿಕಟನಗೆಯೋ ತಿಳಿಯದೆ ಗೊಂದಲವಾಗಿತ್ತು. ನಕ್ಕಾಗ ಬ್ರಷ್ ಕಾಣದ ಹಳದಿ ಹಲ್ಲು, ಹುಳುಕಾದ ಕಪ್ಪು ಹಲ್ಲು, ಮಧ್ಯೆ ಮಧ್ಯೆ ಬಿದ್ದು ಹೋದ ಹಲ್ಲು. ಇವುಗಳ ಮಧ್ಯೆ ಫಳಕ್ಕನೆ ಮಿಂಚುತ್ತಿದ್ದ ಚಿನ್ನದ ಹಲ್ಲು ನಮ್ಮನ್ನು ಅಣಕಿಸಿದ್ದವು. ಹತ್ತಿರ ಬಂದು ನಿಂತಾಗ ಮೂಗಿಗೇನೋ ಅಡರಿಕೊಂಡ ಅನುಭವ. ಪರಸ್ಪರ ಭಾಷೆ ಬಾರದ ಕಾರಣ ಕೈಹಿಡಿದೆಳೆದು ಒಂದೊಂದು ಯಾಕ್ ಬಳಿ ಕರೆದೊಯ್ದು ಹೆಂಗಸರನ್ನು ಅನಾಮತ್ತು ಎತ್ತಿ ಅದರ ಮೇಲೆ ಹೇರಿದಾಗಲೇ ತಿಳಿಯಿತು ಪ್ರಾಣಿ ಮತ್ತು ಅದರೊಡೆಯನ ಬಳಿ ಒಂದೇ ತರಹದ ಪರಿಮಳವೆಂದು!ಯಾವರೀತಿಯಲ್ಲೂ ಪ್ರತಿಕ್ರಿಯಸಲಾರದಷ್ಟು ಹೆದರಿದ್ದ ನಾವು ಪುಳಿಮೂಟೆಗಳಾಗಿದ್ದೆವು. ಅಲುಗಾಡದೆ ನಿಂತಿದ್ದ ಯಾಕ್ ಮೇಲೆ ಕುಳಿತದ್ದೇ ತಡ ಹಿಂದಿನಿಂದ ಸಿಳ್ಳಿನ ಸದ್ದು ಕೇಳಿಬಂದು ಯಾಕ್ ಲಗುಬಗೆಯಲ್ಲಿ ನಡೆಯತೊಡಗಿತು. ಕೆಳಗೆ ಬೀಳಬಾರದೆಂದು ಯಾಕ್‌ನ ಹೊಟ್ಟೆಯನ್ನು ಕಾಲುಗಳಿಂದ ಬಿಗಿಹಿಡಿದು ಕುಳಿತ ಕಾರಣ ಮೀನಖಂಡಗಳು ನಡೆದುದಕ್ಕಿಂತಲೂ ಮಿಗಿಲಾಗಿ ನೋಯುತ್ತಿದ್ದವು. ಒಂದು ಕಿ.ಮೀ ದಾರಿ ಸವೆಸುವಲ್ಲಿ ನಡೆದ ಪ್ರಸಂಗಗಳು ಇಂದಿಗೂ ನಗೆ ಬುಗ್ಗೆ ಎಬ್ಬಿಸುವ ಸಂಗತಿಗಳು.

ಯಾಕ್ಸವಾರಿ ಅಂತೀರಿ? ಸವಾರಿಯೇ ಅದು?
ಕಡಿವಾಣವಿಲ್ಲದೆ ಸವಾರಿ ಮಾಡಿದವರಾರು ಹೇಳಿ?

ಅರ್ಕವ್ರಕ ಚಟರ್ಜೀ ಏರಿದರು ಯಾಕನ್ನು
ಹಿಡಿದು ಕುಳಿತರು ಕಟ್ಟಿಗೆಯ ಹಿಡಿಯನ್ನು.
ಆದರೇನು! ಕೆಳಗೆ ದೂಡಿತ್ತು ಯಾಕ್ ಬೇಕೆಂದು.
ಎಳೆದಿತ್ತು ಆರಡಿಗೆ ಅವರ ಕಾಲನ್ನು ಹಿಡಿದು.
ಕೈಕೊಟ್ಟು ಎತ್ತಬೇಕಾಯ್ತು ಅರ್ಕವ್ರಕರನ್ನು.

ಮಂದಾಕಿನಿ ದೇವಿಗಿತ್ತು ಅಪಾರ ಸಹನೆ
ಆದರೆಲ್ಲಿತ್ತು ಯಾಕ್‌ಗೆ ಕರುಣೆ?

ಪೌಡಾಯಿಸಿತ್ತು ಯಾಕ್ ಒಂದ್ಹೈವತ್ತು ಅಡಿ,
ಬಂದರು ಆಕೆ ನೀರಿನಂತ ಸಲೀಸಾಗಿ
ಹಿಂದುಗಡೆಯಿಂದಲೇ ಕೆಳಗೆ ಜಾರಿ.
ರಘುಪತಿರಾಯರೂ ಆಣೆ, ಕೋದಂಡಪಾಣಿ.
ಅರರೇ! ಈಗಿತ್ತು ಕಾಲ್ಕೆಳಗೆ ಯಾಕಿಲ್ಲ ಪ್ರಾಣಿ?
ಅವರ ಕೈಕೋಲನ್ನು ನೋಡಿ ಓಡಿತ್ತು ಯಾಕ್
ನನಗೇಕೆ ಬೇಕಾಯ್ತು ಇವರೊಡನೆ ವಾಕ್?
ರಾಯರಾ ಸವಾರಿಯಾಗಿತ್ತು ಭಾರೀ ಜೋಕ್.

ಮನೋಜ ಬೈಯಾ ಭಂಗನೇಹಾರಿದರು
ಸೇನಾನಾಯಕನಂತೆ ಆದರ ಬೆನ್ನ ಹಿಡಿದು.
ಯಾಕ್‌ಗೇರಿತ್ತು ಕೋಪ, ಕೊಂಬಿನಾವರೆಗೆ
ಒಂದು ಎರಡು ಮೂರು ಸಲನೆಗೆದು, ಬೀಸಿ
ಒಗೆದಿತ್ತು ರುಮಾಲಿನಂತೆ ಹತ್ತಡಿ ಆಚೆಗೆ.

ದಶರಥಗಳ ಮುಂಚೂಣಿ ಅವರ ಸವಾರಿ,
ಬಂದೇ ಬಂತೊಂದು ಕೊರಕಲು ಯಾಕ್ದಾರಲು.
ಬಿದ್ದರಾ ಕೊರಕಲಿಗೆ ಅಯೋಧ್ಯಾ ಪ್ರಸಾದರು
ಹಿಂದೆಯೇ ಬಂದವು ಉಳಿದೆಂಟು ಸವಾರಿ
ನೆಗೆದು ಹೋದವು ಅವರ ತಲೆಮೇಲೇ ಹಾರಿ.

ಘನವಾಗಿ ಕುಳಿತು ನಡೆಸಿದ್ದರು ಶಾಸ್ತ್ರೀಜಿ
ವಾಹನವು ತಮ್ಮ ಅಂಕೆಯಲ್ಲೆಂದು ಸಾರಥೀಜಿ.
ಆದರದು ಏರಿತ್ತು ಬೆಟ್ಟವನ್ನು ಹುಲ್ಲಿಗಾಗಿ,
ಓಡೋಡಿ ಇಳಿದಾಯ್ತು ನದಿಗೆ ನೀರಿಗಾಗಿ
ಬರಬೇಕು ಅದರೊಡೆಯ ಅದತರಲು ದಾರಿ!

ಯಾಕ್ಸವಾರಿ ಅಂತೀರಿ! ಸವಾರಿಯೇ ಅದು?
ಯಾಕ್ಕೇ ಹೇರಿಕೊಂಡು ಹೋಗಿತ್ತು ಅವರನ್ನು.
ಮೇಲಿದ್ಹೋರ ಕೈಲೇನಿತ್ತು? ಅವರದ್ದೇ ಜೀವ!
ಚಿತ್ತ ವೆಂಬ ಯಾಕ್ಸವಾರಿ ಮಾಡಿದವನೊಬ್ಬನೇ
ಮಾರನನ್ನೇ ಸುಟ್ಟುಹಾಕಿದಾ ಶಿವ ಮಲ್ಲೇಶನೇ.

ಯಾಕ್ಸವಾರಿಯ ಮೊದಲ ಕ್ಷಣಗಳಲ್ಲಿ ಭಯವು ಹೊಟ್ಟೆಯೊಳಗೆ ಕೈ ಆಡಿಸಿದಾಗ

ಕಚಗುಳಿಯಾಗಿ ನಮ್ಮ ನಡುಕವನ್ನು ನಗೆ, ಹಾಸ್ಯಚಟಾಕಿಗಳಲ್ಲಿ ಮರಮಾಚಿದ್ದೆವು. ಬಿದ್ದವರು, ಜಾರಿದವರು, ಉದುರಿದವರು ಎಲ್ಲರನ್ನೂ ಮತ್ತೆಮತ್ತೆ ಯಾಕ್ ಮೇಲೆ ಕುಕ್ಕಿಹಾಕಿದಂತೆಯೇ ಯಾತ್ರಿಗಳ ಮೆರವಣಿಗೆ ಮುಂದೆ ಸಾಗಿತ್ತು. ಮೊದಲ ಬಾರಿಗೆ ಯಾಕ್ ಮೇಲೆ ಕುಳಿತುವರ ಪರಿಣಾಮ ಗುರುತರವಾಗಿತ್ತು. ಆ ಪ್ರಾಣಿಯ ದೇಹದಿಂದ ಹೊರಟ ಕಾವು ಅತಿಯಾಗಿ, ನಾವು ಕಾದ ಕಾವಲಿಯ ಮೇಲೆ ಕುಳಿತಂತೆ ಚಡಪಡಿಸಿದೆವು. ಸಾಲದಂದು ನಮ್ಮ ಕಾಲುಗಳಿಗೆ ಒರಟು ಕೂದಲಿನ ನಿರಂತರ ಉಜ್ಜುವಿಕೆಯಿಂದುಂಟಾದ ಉರಿಯು ಸೇರಿತ್ತು. ಸೊಂಟ ಬೆನ್ನು ನೋಯುತ್ತಿತ್ತು. ಯಾಕ್‌ಮ್ಯಾನ್‌ಗಳಿಗೆ ಚಹಾ ಕುಡಿವ ಮನವಾದಾಗಲೇ ನಮಗೂ ಬಿಸಿಬಿಸಿ ಸೀಟಿನಿಂದ ಬಿಡುಗಡೆದೊರೆಯುವ ಸಂಭವ, ಬಿಡುಗಡೆಯಾದ ರೀತಿಯೂ ಅಪೂರ್ವ!

ದಾರ್ಚೆನ್‌ನಿಂದ ಸುಮಾರು ಹತ್ತು ಹನ್ನೆರಡು ಕಿ.ಮೀ ದೂರವನ್ನು ಬೆಟ್ಟಗಳ ಬುಡದಲ್ಲೇ ಕ್ರಮಿಸುತ್ತ, ಚಿಕ್ಕ ಬಯಲುಗಳನ್ನು ದಾಟುತ್ತ ನಡೆದಿದ್ದ ಯಾಕ್ ಮಂದೆಯ ಹಿಂದೆ ಗುಂಪುಗೂಡಿ ಬರುತ್ತಿದ್ದ ಟಿಬೆಟೀಯರು ಹಠಾತ್ತನೆ ಓಡೋಡಿ ಮುಂದೆ ಬಂದು ಎದುರಿನ ಕೆಂಬಣ್ಣದ ಬೆಟ್ಟವನ್ನು ಏರುತ್ತ ಕಲ್ಲು ತೂರತೊಡಗಿದರು. ಇದಾವ ವಿಚಿತ್ರ ಪೂಜಾ ಸಂಪ್ರದಾಯವೆಂದು ನಾವು ಬಕ್ಕಸಬೆರಗಾಗಿ ಕತ್ತೆತ್ತಿ ನೋಡಿದೆವು. ಬೆಟ್ಟದ ಮೊಗದಲ್ಲಿ ಗ್ಸುರಾಲ್ ಟಿಬೆಟೀ ಜಿಂಕೆಯ ಗುಂಪೊಂದು ಸುಳಿದಿತ್ತು. ಟಿಬಟೀ ಯುವಕರು ಮಾಡುತ್ತಿದ್ದುದು ಬೆಟ್ಟದ ಪೂಜೆಯಲ್ಲ, ಬಟ್ಟದ ಜಿಂಕೆಯ ಬೇಟೆಯೆಂದು ತಿಳಿಯಲು ತಡವಾಗಲಿಲ್ಲ.

ನವಯುವಕನ ಗಲ್ಲವನ್ನು ಅಲುಗಿಸುತ್ತಾ ಅವನ ಸುಳಿಪಲ್ಲನಡುವಿನಿಂದ ಚಿಮ್ಮಿ ಬಂದ ನಗೆ ಅವನ ಮೀಸೆಯನ್ನು ಕುಣಿಸಿ, ನೀಳ ನಾಸಿಕವನೇರಿ ಕಣ್ಣಲ್ಲಿ ಮಿಂಚುವಂತೆ ಬೆಟ್ಟದ ತಳಭಾಗದಿಂದ ಮೇಲಕ್ಕೆ ಎಗರಿದ ನಾಯಕ ಜಿಂಕೆ ಮಾನವರ ಕಡೆ ನೋಡಿ, ಹಾರುತ್ತ ಹಾರುತ್ತ ಸುಮಾರು ೧೫೦ ಅಡಿ ಎತ್ತರದಲ್ಲಿದ್ದ ಕಿರುಬಂಡೆಯೊಂದರ ಮೇಲೆ ಚಿಮ್ಮಿ ನಿಂತಿತು. ಒಂದೆರಡುಕ್ಷಣ ನಿಂತು ಕೆಳಗೆ ನೋಡಿ ಒಂದೇ ನೆಗೆತದಲ್ಲಿ ಹನ್ನೆರಡು – ಹದಿನೈದು ಅಡಿ ಎತ್ತರದ ಬಂಡೆಗೆ ಜಿಗಿದು ಹೋಯಿತು. ಅದನ್ನು ಹಿಡಿಯಲೆಂದು ಕಲ್ಲು ಎಸೆಯುತ್ತಿದ್ದ ಯುವಕರು ಹೆಚ್ಚೆಂದರೆ ೫೦ ಅಡಿ ಏರಿದ್ದರು. ಕೆಳಗೆ ನೋಡುತ್ತಿದ್ದ ಜಿಂಕೆ ನಿಮ್ಮ ಕಲ್ಲಿಗೆ ಸಿಗಲಾರೆ ಎಂದು ನಕ್ಕಂತಾಯಿತು. ಮೊದಲ ನಗುವನ್ನನುಸರಿಸಿ ಬರುವ ಕುಲುಕುಲು ನಗೆಯ ಅಲೆಯಂತೆ ಆ ನಾಯಕ ಮೃಗವನ್ನನುಸರಿಸಿ ಚಿಮ್ಮಿ ಹೋದ ಐದಾರು ಜಿಂಕೆಗಳು ಅಲ್ಲಿಯವರೆಗೆ ಟಿಬೆಟೀ ಯುವಕರ ತಲೆಯ ಮೇಲಿನ ಕಿರು ಜಗಲಿಯಲ್ಲಿ ಕೇವಲ ಐದಾರು ಅಡಿ ಎತ್ತರದಲ್ಲಿ ಅವರಿಗೆ ಕಾಣಿಸದಂತೆ ಎದುರಿನಿಂದ ನೋಡುತ್ತಿದ್ದ ನಮಗೂ ಕಾಣಿಸದಂತೆ, ಬೆಟ್ಟದ ಬಣ್ಣದಲ್ಲಿ ಒಂದಾಗಿ ನಿಂತಿದ್ದುವು. ಸದ್ದಿಗೆ ಹೆದರಿ ಮಿಂಚಿನಂತೆ ಸುಳಿದು ಹೋದಾಗಲೇ ಅವುಗಳು ನಮ್ಮ ಕಣ್ಣಿಗೆ ಕಂಡದ್ದು. ಒಡನೆಯೇ ನಮ್ಮೆಲ್ಲರ ಗಂಟಲು ಹರಿಯುವಂತೆ ನಗೆಯಬ್ಬರ ಎದ್ದಿತ್ತು. ನಮ್ಮ ಹೊ ಹೊ ಷ್ಟ ಷ್ಟ ಕೇಳಿ ಕಾರಣ ಅರಸಿ ಮೇಲೆ ನೋಡಿದ ಟಿಬೆಟೀ ಯುವಕರು ಏರಿಹೋಗುತ್ತಿದ್ದ ಜಿಂಕೆಗಳನ್ನು ಕಂಡು ಕೈಲಿ ಕಲ್ಲುಗಳನ್ನು ಹಿಡಿದಿದ್ದಂತೆಯೇ ನೆಲಕ್ಕೆ ಕುಸಿದು ಗಹಗಹಿಸಿ ನಗತೊಡಗಿದರು. ನಗೆಯುಬ್ಬರ ತಹಬಂದಿಗೆ ಬರಲು ಐದು ನಿಮಿಷಗಳೇ ಬೇಕಾದವು. ಬೆಳಗಿನಿಂದಲೂ ಬಿಗುಮಾನದಲ್ಲಿ ಹಿಂದೆ ನಡೆದುಬಂದಿದ್ದ ಯಾಕ್ಮನ್‌ಗಳು ಮತ್ತು ದೇಹದ ಒಂದೊಂದು ಭಾಗದಲ್ಲಿ ಒಂದೊಂದು ರೀತಿಯ ನೋವು ತಿನ್ನುತ್ತ ಮುಖ ಸೊಟ್ಟಮಾಡಿ

ಗೊಣಗುತ್ತ ಸಾಗಿದ್ದ ಯಾತ್ರಿಗಳ ನಡುವ ಸ್ನೇಹದ ಸಲಿಗೆಯ ಸೇತುವೆಯನ್ನು ನಿರ್ಮಿಸಿದ್ದವು – ಬೆಟ್ಟದ ಮೇಲರಳಿದ ನಿಸರ್ಗನಗೆ, ಅದನ್ನನುಸರಿಸಿ ಬಂದ ಮಾನವರ ಸಹಜನಗೆ. ನಗುತ್ತಾ ಕುಳಿತವರು ನಾವು ಸುತ್ತಲೂ ಕಣ್ಣು ಹಾಯಿಸಿದೆವು– ಚಿನ್ನದ ಕಣಿವೆಗೇ ಹಾದು ಬಂದಿದ್ದೆವು. ನಮ್ಮೆರಡೂ ಬದಿಗಳಲ್ಲಿ ಚಿನ್ನದ ಬಣ್ಣದ (ಜಿಂಕೆಯ ಬಣ್ಣವೇ) ಬೆಟ್ಟಗಳು ಮೆಟ್ಟಿಲು ಮೆಟ್ಟಿಲಾಗಿ ಏರಿದ್ದವು. ಅಲ್ಲಲ್ಲಿ ಕಿರುತೊರೆಗಳು ಬಹುಎತ್ತರದಿಂದ ಕೆಳಗೆ ಹರಿದು ಬರುತ್ತಿದ್ದವು. ಅಪ್ರಯತ್ನವಾಗಿ ಎದ್ದು ಕತ್ತೆತ್ತಿ ನೋಡುತ್ತಾ ಮೌನವಾಗಿ ನಡೆಯತೊಡಗಿದೆವು. ೧೫ – ೨೦ ನಿಮಿಷದ ನಡಿಗೆಯಲ್ಲಿ ಎಡಬದಿಯ ಬೆಟ್ಟವನ್ನು ಬಳಸಿ ಬಂದಾಗ ಶಿವನ ಅಂಗಳವನ್ನು 'ಗೋಲ್ಡನ್ ವ್ಯಾಲಿ' ಎಂದೇ ಪ್ರಸಿದ್ಧವಾದ ಕೈಲಾಸಶಿಖರದ ಬಯಲನ್ನು ಸೇರಿದ್ದೆವು. ಬೆಟ್ಟದ ಮೊಗದಲ್ಲಿ ನಗೆತಂದ ಶಿವನ ಪ್ರತ್ಯಕ್ಷ ದರ್ಶನವಾದಾಗ 'ದಿವ್ಯ' ಪದದ ಪರಿಚಯವಾಯಿತು. ನಾವೆಂದು ಕಂಡಿದ್ದ ಪ್ರಕೃತಿಯನ್ನು ನಮ್ಮ 'ಜ್ಞಾನ'ವನ್ನು ಅಲ್ಲಗಳೆದ ಅಲ್ಲಯ್ಯನ ಶಿರದರ್ಶನವಾಗಿತ್ತು ಶಿಖರದಲ್ಲಿ! ದಕ್ಷಿಣ ಭಾಗದಲ್ಲಿ ಹಿಮಲಿಂಗಾಕೃತಿಯಲ್ಲಿದ್ದ ಕೈಲಾಸ ಶಿಖರದ ಹಿಮಚ್ಛಾದಿತ ಪಶ್ಚಿಮ ಭಾಗ ಕೈಲಾಸಪತಿಯ ಮುಖದಂತಿತ್ತು. ಪ್ರಕೃತಿಯೇ ಕೈಯಾರೆ ಕಡೆದಿದ್ದ ಮೊಗವಾಗಿತ್ತು.

ಅರ್ಧ ನಿಮೀಲಿತ ನೇತ್ರಗಳ ನಡುವೆ ತಿಲಕದಂತಿದ್ದ ಮೂರನೆಯ ಕಣ್ಣು, ತುಸುವೇ ಉಬ್ಬಿದ ಫಾಲ, ನೆತ್ತಿಯ ಮೇಲೆ ಹಂತಹಂತದಲ್ಲಿ ಏರಿ ಹಿಡಿಯಾದ ಜಟಾಜೂಟ, ಸೂರ್ಯರಶ್ಮಿ ಬಿದ್ದು ಬೆಳ್ಳಿಯಾದ ಆ ಮುಖ! ಲಿಂಗಾಕಾರದ ಶಿವನಿಗೆ ಮಾನವರೂಪದ ಬೆಳ್ಳಿಯ ಮುಖವಾಡವಿಡುವ ಕಾರಣವು ಈ ನಿಸರ್ಗ ಸೃಷ್ಟಿಯ ಅನುಕರಣೆಯೇ ಇರಬೇಕೆಂಬ ವಿಚಾರ ಮನದಲ್ಲಿ ನೆಲೆಗೊಂಡಿತು. ಬೇರೆಲ್ಲ ದೇವತೆಗಳ ಕಲ್ಪನೆಯ ಜಾಡನ್ನು ಬಿಟ್ಟು ಈ ದೇವನನ್ನು ಜಟಾಧಾರಿಯಾಗಿ, ತ್ರಿನೇತ್ರನಾಗಿ, ಧ್ಯಾನಾಸಕ್ತನಾಗಿ ಕಲ್ಪನೆ ಮಾಡುವ ಕಾರಣ – ಮಾನವ ಹೃದಯದ ಕವಿಪ್ರತಿಭೆ ಪ್ರಕೃತಿಯನ್ನನುಸರಿಸಿ ರಚಿಸಿದ ಪ್ರತಿಮೆಯೇ ಇರಬೇಕೆಂಬ ವಿಚಾರ ದೃಢವಾಗುತ್ತಿತ್ತು. ಬೃಹತ್ತನ್ನು ಅಣುವಿನಲ್ಲಡಗಿಸುವ ರೀತಿ – ಆ ಅಣುವನ್ನು ಮತ್ತೆ ಬೃಂಹಣಗೊಳಿಸಿ ಅದರಲ್ಲಿ ಬೃಹತ್ತನ್ನು ಮನಗಾಣುವರೀತಿ, ಆದ ಅನುಭವವನ್ನು ಮತ್ತೆ ಮತ್ತೆ ಪಡೆಯುವ, ಒಬ್ಬರ ಅನುಭವವನ್ನು ವಿವಿಧ ಮಾಧ್ಯಮದಲ್ಲಿ ಮತ್ತೊಬ್ಬರಿಗೆ ಕೊಡುವ ಪ್ರಯತ್ನ – ಮಾನವನ ಧೀಶಕ್ತಿಗೆ ಮಾತ್ರ ಮೀಸಲು. ಇಂತಹ ಪ್ರಚಂಡ ಶಕ್ತಿಯ ಮಾನವ ಚೈತನ್ಯಕ್ಕೆ ಮತ್ತೊಮ್ಮೆ ತಲೆಬಾಗುವಂತಾಗಿತ್ತು.

ನಿಸರ್ಗನಿರ್ಮಿತ ದಿವ್ಯಮುಖವನ್ನು ನೋಡುತ್ತಲೇ ಇರಬೇಕೆಂಬಾಸೆ ಕಣ್ಣಿಗೆ. ಅದನ್ನು ವಿವರಿಸಿ ಹೇಳುತ್ತ ಹೃದಯದೊಳಗಿಳಿಸುವಾಸೆ ನಾಲಗೆಗೆ. ಒಳಗಿಳಿದ ಮೂರ್ತಿಯನ್ನು ಕಣ್ಣೆತ್ತಿ ಕಾಣುವಾಸೆ ಮನಸ್ಸಿಗೆ. ಅದನ್ನೇ ಧ್ಯಾನಿಸುವಾಸೆ ಬುದ್ಧಿಗೆ. ಈ ರೀತಿಯ ಅನುಭವವನ್ನು ಮತ್ತೊಮ್ಮೆ ಮಗದೊಮ್ಮೆ ಪಡೆಯಲೆಂದೇ ಆರ್ಯರು, ಹೂಣರು, ಬೌದ್ಧರು ಈ ಶಿಖರವನ್ನು ಪವಿತ್ರತಮವೆಂದು ಸಾರಿಸಾರಿ ಹೇಳಿದುದು. ಇಲ್ಲಿಗೆ ಬರಲಾಗದವರಿಗೆಂದೇ ನಿರಾಕಾರನ ಈ ಆಕಾರವನ್ನು ವರ್ಣಿಸಿ, ಮೂಡಿಸಿ, ಬೆಳ್ಳಿಯನ್ನು ಹೊದಿಸಿ – ಬೆಳ್ಳಿಯಲ್ಲದಿದ್ದರೆ ಬೆಣ್ಣೆಯಿಂದಲಾದರೂ ಹಿಮವತ್‌ರೂಪವನ್ನಾಗಿಸಿ ದೇಗುಲಗಳಲ್ಲಿ ಪೂಜಿಸುವ ಪದ್ಧತಿಯನ್ನು ತಂದುದು. ನಿಜಸಮಾಧಿಯಲ್ಲದಿದ್ದರೂ ಭಾವಸಮಾಧಿಗಂತೂ ಇಳಿದಿತ್ತು ಮನ. ಮತ್ತೊಮ್ಮೆ ನನ್ನ ಅದೃಷ್ಟವನ್ನು – ಹಿಮದ ತೆರೆಯಿಲ್ಲದೆ ಸೂರ್ಯರಶ್ಮಿಯಲ್ಲಿ ತೊಳಗಿನಿಂತ ಶಿಖರದಲ್ಲಿ ಶೇಖರನ ಶಿರದರ್ಶನದ ಭಾಗ್ಯವನ್ನು – ಕೊಂಡಾಡಿತ್ತು ಹೃದಯ

ಒಂದು ಗಂಟೆಯ ಕಾಲ ಆ ಬಯಲಿನಲ್ಲೇ ಇದ್ದು, ಕರಗಿನಿಂತ ನನ್ನ ಮಾನಸ ಸರಸ್ಸಿನಲ್ಲಿ ಅಲೆಯೆದ್ದ ಭಾವನಗಳು, ಚಿಂತನೆಗಳು ತಾಕಲಾಡಿದುದೆಷ್ಟೋ. ಕೊನೆಗ ತೇಲಿ ಬಂದ ಭಾವಪಿದು. ಅಲ್ಲಿರುವುದನ್ನು, ಅದನ್ನು ಹೊಂದಿಸಿದ ಪ್ರಕೃತಿ ಲೀಲೆಯನ್ನು ಅರ್ಥೈಸಬಲ್ಲ ಜೀವನಿಲ್ಲದೆ ಅವೆಲ್ಲಾ ಗಾಳಿ, ನೀರು, ಕಲ್ಲು ಮಣ್ಣು, ಆಕಾಶದ ಖಾಲಿತನವಷ್ಟೇ! ಜೀವನಿಂದಾಗಿ ಅವುಗಳಿಗೂ ಜೀವ-ಚೇತನ. ಮನಸ್ಸು ಕಾಲ ದೇಶಗಳ ಎಲ್ಲೆ ದಾಟಬಲ್ಲಷ್ಟು ಮುಕ್ತವಾದರೆ ಜೀವನಿಗೆ ಅನಂತತೆಯ ಅರಿವಾಗಿ ವಿಶ್ವಾತ್ಮನಲ್ಲಿ ಕೆಲಕ್ಷಣವಾದರೂ ಲೀನವಾಗುವುದು ಇಲ್ಲಿ ಬಹು ಸಹಜ. ಅಂತಹ ಜೀವವೇ ಜೀವ-ಮುಕ್ತ ಜೀವ

ತನ್ನ ಸುತ್ತಿನ ಜಗವ ಆಗಿಸುತ
ನೇತಿನೇತಿ ಎಂದೆನುತ ಅಳಿಸುತ್ತ
ಮತ್ತೊಮ್ಮೆ ಮಗದೊಮ್ಮೆ ರಚಿಸುತ್ತ
ತನ್ನ ತಾನರಿವುದವನ ಲೀಲೆ
ಸ್ವ ಭಾವೇ ಆ ಭಾವವಾದ ಜೀವ-ಮುಕ್ತ.

ತನ್ನೆಲ್ಲ ದ್ವಂದ್ವಗಳ ಮೀರಿಮೀರಿದವ
ವಿಶ್ವವನೇ ಆವರಿಸಿ ನಿಂತವನವ
ಗುರಿಯೇ ಇಲ್ಲದಂತಾದನವ
ತಾನೇ ಅದೆಂದರಿತವನ ಆನಂದ
ಆನಂದವೇ ತಾನಾದ ಜೀವ-ಮುಕ್ತ.

ಮೊದಲಿಗೆ ಅಪಾಯವೆಂದೆನಿಸಿದುದು
ತರುವುದೀಗ ರೋಮಾಂಚನವ
ಅಂದಿನ ಭಯಂಕರ ಇಂದು ಸಂತಸದಾಗರ
ಜಗವನ್ನೇ ತಬ್ಬಿ ಓಡಿದವಗೆ
ಜಗವೆದ್ದು ಕೊಡುತಿಹುದು ಮಾರ್ದನಿ
ಶಿವೋಹಂ!ಶಿವೋಹಂ!ಶಿವೋಹಂ!!

ಪ್ರಕೃತಿ ಪುರುಷರ(ಮಾನವರ) ಮಿಲನ-ಶಿವ ಶಕ್ತಿಯರ ಮಿಲನ ಇಲ್ಲಿ ಸಾರ್ಥಕವಾಗಿತ್ತು. 'ಕೈಲಾಸ' ಪದದ ಅರ್ಥವೇ ಅದಾಗಿತ್ತು. ಕೇಲೀನಾಂ ಸಮೂಹಃ ಕೈಲಂ-ತೇನ ಆಸ್ಯತೇ ಸ್ಥೀಯತ ಇತಿ ಕೈಲಾಸಃ. ಕೇಲಿಗಳ(ಕ್ರೀಡೆಗಳ) ಸಮೂಹವೇ ಕೈಲ. ಈ ಸಮೂಹದೊಡನಿರುವುದೇ ಕೈಲಾಸ. ಜೀವನು ಪ್ರಕೃತಿಯೊಂದಿಗೆ-ಶಿವನು ಶಕ್ತಿಯೊಂದಿಗೆ ಕ್ರೀಡಾಸಕ್ತನಾಗಿರುವ ಸ್ಥಳವೇ ಕೈಲಾಸ. ಒಮ್ಮೆ ಈ ಕ್ರೀಡಾ ಸ್ಥಳದ ಅನುಭವವಾದರೆ ಜೀವನ ಪೂರ ಹಸಿರಾಗಿ ನಿಲ್ಲುವ ಅನುಭವ. ನೆನಸಿಕೊಂಡರೆ ಸಾಕು ಜೀವ ಅನಂತದಲ್ಲಿ ಇಣುಕಿದ ಅನುಭವ ಮತ್ತೆ ಮತ್ತೆ ಆಗುತ್ತದಲ್ಲ ಅದು, ಅದೀಗ ಜೀವನ!

ಈ ರೀತಿಯ ಅನುಭವ ಕೊಡುವ ಈ ಲಿಂಗಳದಲ್ಲಿ ಟಿಬೆಟೀ ಬೌದ್ಧರು ಧ್ವಜಾರೋಹಣ ಉತ್ಸವವನ್ನು ಪ್ರತಿ ವರ್ಷ ವೈಶಾಖ ಶುಕ್ಲ ಚತುರ್ದಶಿ-ಪೂರ್ಣಿಮಾ ರಾತ್ರಿ(ಬುದ್ಧ ಪೂರ್ಣಿಮಾ) ಆಚರಿಸುತ್ತಾರೆ. 'ದಾರ್' ಎಂದರ ಧ್ವಜ, 'ಚೆನ್' ಎಂದರೆ ದೊಡ್ಡ- ಮಹಾಧ್ವಜ ಸ್ತಂಭಕ್ಕೆ ಹೊಸ ಧ್ವಜಗಳನ್ನು ಕಟ್ಟಿ ಪೂಜಿಸುವ ಜಾತ್ರೆ 'ದಾರ್ಚೆನ್ ಕುಶೊಕ್' . ಸಹಸ್ರ ಸಂಖ್ಯೆಯಲ್ಲಿ ಜನ ನೆರೆದು ಈ ಉತ್ಸವದಲ್ಲಿ ಭಾಗವಹಿಸುತ್ತಾರೆ.

ಕಾಶ್ಮೀರದಿಂದ ಭೂತಾನದವರೆಗೆ ಹಬ್ಬಿರುವ ಕೈಲಾಸ ಪರ್ವತ ಶ್ರೇಣಿ 'ಗಾಂಗ್‌ಡೈಸ್' ರೇಂಜ್‌ನ ೨೨,೦೨೮ ಅಡಿ ಎತ್ತರದ ಈ ಶಿಖರಕ್ಕೆ ಟಿಬೆಟೀಯರಿಟ್ಟ ಹೆಸರು 'ಕಾಂಗ್ ರಿನ್ ಪೋಚೆ' – ಪವಿತ್ರ ಹಿಮಗಿರಿ–ಪವಿತ್ರ ಗಿರಿಗಳ ರಾಜ. ಟಿಬೆಟೀ ಬೌದ್ಧ ಗ್ರಂಥಗಳ ವಿವರಣೆಯಂತೆ ಅಷ್ಟದಳ ಕಮಲದ ಪೀಠದ ಮೇಲಿರುವ ಈ ಪಚ್ಚೆ ಪರ್ವತದ ಶಿಖರದ ಮೇಲೆ ಸಪ್ತ ವರ್ಣದ ಕಿರೀಟವಿದೆ. ಪರ್ವತವು ಸ್ಫಟಿಕದಲ್ಲಿ ಕೂರಿಸಿದ ಪಚ್ಚೆಯಂತಿದೆ. ಈ ವಿವರಣೆ ಸತ್ಯಕ್ಕೆ ದೂರವಿಲ್ಲ. ಸದಾ ಹಿಮಾವೃತವಾಗಿರುವ ಶಿಖರದ ಮೇಲೆ ಸೂರ್ಯಕಿರಣ ಬಿದ್ದು ಮಂಜಿನ ಹನಿಗಳು ಪ್ರತಿಫಲಿಸಿ ಕಾಮನ ಬಿಲ್ಲು ಮೂಡಿರುವುದು ಸಾಮಾನ್ಯ ದೃಶ್ಯ. ಪರ್ವತವು ಬಹುತೇಕ ಹಸಿರು ಕಲ್ಲಿನಿಂದಾಗಿದ್ದು ಹಿಮವು ನಿಲ್ಲಲಾರದ ಕಡಿದಾದ ಶಿಖರ ಭಾಗವು ಪಚ್ಚೆಯಾಗಿ ತೋರುವುದು. ಈ ಪರ್ವತದ ಸುತ್ತ ಹಬ್ಬಿರುವ ಕಿರುಬೆಟ್ಟಗಳನ್ನು ಮೇಲಿನಿಂದ ನೋಡಿದರೆ ಕಮಲದ ಪಕಳೆಗಳಂತೆ ಕಂಡುಬರುವುದು.

ಅನೇಕ ನದಿಗಳು ಹುಟ್ಟಿ ಹೊರ ಹರಿಯುವ ಕೈಲಾಸ ಶ್ರೇಣಿಯ ನಡುವೆ ಲ್ಹಾಛು ಮತ್ತು ಜಾಂಗ್ ಛು ನದಿಗಳಿಂದ ಆವೃತವಾಗಿರುವ ಕೈಲಾಸ ಪರ್ವತದ ಬಲ ಪಾರ್ಶ್ವದಲ್ಲಿ ತಲೆಯೆತ್ತಿನಿಂತ ಕೈಲಾಸ ಶಿಖರದ ಗುಮ್ಮಟವನ್ನು ಪ್ರತ್ಯೇಕಿಸಿ ಪ್ರದಕ್ಷಿಣೆ ಮಾಡುವುದು ಅಸಾಧ್ಯ. ಆದ್ದರಿಂದ ಇಡೀ ಪರ್ವತವನ್ನೇ ಎರಡೂ ನದಿಗಳ ದಡದಲ್ಲಿ ಸಾಗಿ ಪ್ರದಕ್ಷಿಣೆ ಮಾಡಬೇಕು. ಐವತ್ತೈದು ಕಿ.ಮೀ ಸುತ್ತಳತೆಯ ಹಾದಿ ಕಷ್ಟಸಾಧ್ಯವಾದರೂ ಶಿಖರವು ಒಂದೊಂದು ದಿಕ್ಕಿನಲ್ಲಿ ಒಂದೊಂದು ಆಕೃತಿ ಹೊಂದಿದ್ದು ಪ್ರದಕ್ಷಿಣೆಯ ದಣಿವು ಗಮನಕ್ಕೇ ಬಾರದಂತೆ ಚೇತನದಾಯಿ.

ಮಾನಸ ಸರೋವರದ ದಂಡೆಯಿಂದ ದೂರದಲ್ಲಿ ಕಾಣುವ ಲಿಂಗಾಕೃತಿಯ ಪೂರ್ವ ಭಾಗ ಪಾಣಿಪೀಠದಂತೆ ಚಾಚಿಕೊಂಡಿದ್ದರೆ ದಾರ್ಚೆನ್‌ನ ಸನಿಹದಿಂದ ಸ್ವರ್ಗಕ್ಕೆ ಇಟ್ಟ ಸೋಪಾನಗಳಂತೆ ಶಿಖರದ ಭಾಗವು ಕಾಣಬರುತ್ತದೆ. ಪಶ್ಚಿಮ ದಿಕ್ಕಿನಲ್ಲಿ ತಾಪಸಿಯಂತೆ ಕಂಡರೆ ಉತ್ತರದಲ್ಲಿ ಪಚ್ಚೆ ಲಿಂಗದ ಮುಂದೆ ನಂದಿಯಂತಿರುವ ಗುಡ್ಡವೂ ಕಾಣುವುದು. ಪೂರ್ವ ದಿಕ್ಕಿಗೆ ವಿಭೂತಿಯಿಂದಲಂಕೃತ ಸ್ವರ್ಣ ಲಿಂಗವಾಗಿ ತೋರಿದರೆ ಪಶ್ಚಿಮೋತ್ತರದಲ್ಲಿ ಈಜಿಪ್ಟಿನ ಪಿರಾಮಿಡ್‌ನಂತೆ ಆಕಾಶವನ್ನು ತಿವಿದು ನಿಂತಿದೆ. ಒಂದೊಂದು ತಿರುವಿನಲ್ಲೂ ಹೊಸ ಹೊಸ ರೂಪ ತಳೆದು ಭಿನ್ನ ವೇಷ ಧರಿಸಿ ಮನ ಸೂರೆಗೊಳ್ಳುವ ಕೈಲಾಸ ಶಿಖರವು ಪ್ರದಕ್ಷಿಣಾ ಪಥದುದ್ದಕ್ಕೂ ನಮ್ಮನ್ನು ದಿವ್ಯಾಕರ್ಷಣೆಗೆ ಒಳ ಮಾಡುವುದು. ಆದ್ದರಿಂದಲೇ ಮತ್ತೆ ಮತ್ತೆ ಸುತ್ತಿಬರುವ ಮನಸ್ಸಾಗುವುದು. ಪ್ರಾಕೃತಿಕ ಸೌಂದರ್ಯದ ಪರಾಕಾಷ್ಠೆಯಾಗಿರುವ ಈ ಶಿಖರಕ್ಕೆ ಪೌರಾಣಿಕ ಹಿನ್ನಲೆಯನ್ನು ಕೊಟ್ಟು ಪವಿತ್ರತೆಯ ಪರಾಕಾಷ್ಠೆಯಾಗಿ ಮಾಡುವುದು ಮಾನವ ಸಹಜ ಪ್ರತಿಕ್ರಿಯೆ.

'ಕಾಂಗ್ ರಿ ಕರ್ಛಕ್' ಟಿಬೆಟೀ ಕೈಲಾಸ ಪುರಾಣದಲ್ಲಿ ವಿವರಿಸಿದಂತೆ ಕೈಲಾಸ ಪರ್ವತ

ವಿಶ್ವದ ಹೃದಯ ಭಾಗ. ಅದರ ನಾಲ್ಕೂ ಕಡೆಗಳಲ್ಲಿ ಪಾದ ಚಿನ್ಹೆಗಳಿವೆ. ಕೈಲಾಸ ಪರ್ವತವನ್ನು ಮೇಲಿನ ಲೋಕದವರು ಕೊಂಡೊಯ್ಯದಂತೆ ಭೂಮಿಗೆ ಒತ್ತಿಹಿಡಿದ ಬುದ್ಧನ ಪಾದ ಚಿನ್ಹೆಗಳಿವು. ಅಂತೆಯೇ ಈ ಪರ್ವತದ ನಾಲ್ಕೂ ಕಡೆ ಸರಪಳಿಗಳಿದ್ದು ಕೆಳಲೋಕದವರಿಗೂ ಸಿಗದಂತೆ ಕೈಲಾಸವು ಭೂಮಿಯಲ್ಲೇ ಇರುವುದು. ಟಿಬೆಟೀ ಪುರಾಣದಂತೆ ಒಮ್ಮೆ ರಾಕ್ಷಸ ತಾಲದ ರಾಜನು ಕೇವಲ ಮೂರು ಹೆಜ್ಜೆಯಲ್ಲಿ ಭಾರತಕ್ಕೆ ಬಂದು ಬುದ್ಧ ಭಗವಾನನ ಸ್ವರ್ಣಮೂರ್ತಿಯನ್ನು ತಂದು ತನ್ನ ಸರೋವರದಲ್ಲಿ ಅಡಗಿಸುವ ಉದ್ದೇಶದಿಂದ ಕೈಲಾಸ ಪರ್ವತಕ್ಕೆ ಹೋಗಿ ಅದರ ಶಿಖರವನ್ನು ಹಗ್ಗದಿಂದ ಬಿಗಿದು ಅದನ್ನು ಹಾರಿಸಲು ಉದ್ಯುಕ್ತನಾದನು. ತನ್ನ ದಿವ್ಯದೃಷ್ಟಿಯಲ್ಲಿ ಇದನ್ನು ಗಮನಿಸಿದ ಬುದ್ಧದೇವ ತನ್ನ ಐನೂರು ಬೋಧಿಸತ್ವರೊಡನೆ ಹಂಸರೂಪದಲ್ಲಿ ಅಲ್ಲಿಗೆ ಬಂದು ಮನುಷ್ಯರೂಪ ಧರಿಸಿದನು. ರಾಜನ ಮುಂದೆ ಸಮ್ಮೋಹಕ ನೃತ್ಯವಾಡಿ ರಾಜನು ರಾತ್ರಿಪೂರ ಅಲ್ಲೇ ಕಳೆಯುವಂತೆ ಮಾಡಿದನು. ಅದೇ ವೇಳೆಯಲ್ಲಿ ಕೈಲಾಸ ಶಿಖರದ ನಾಲ್ಕೂ ಕಡೆ ತನ್ನ ಪಾದವನ್ನೊತ್ತಿ ಅದು ಮೇಲಕ್ಕೆ ಹಾರದಂತೆ ಮಾಡಿದನು. ರಾಜನಿಗೆ ಶಿಲೆಯಾಗಿ ಹೋಗೆಂದು ಶಾಪವಿತ್ತನು. ಈ ರೀತಿ ಶಿಲೆಯಾಗಿ ನಿಂತ ರಾಜನೇ ಗೊಂಬೊ ಫೆಂಗ್ ಪರ್ವತ. ಕೈಲಾಸ ಶಿಖರದ ಮಧ್ಯೆ ಕಾಣುವರೇಖೆ ಈ ರಾಜನು ಬಿಗಿದ ಹಗ್ಗವೆಂದು ಇಲ್ಲಿಯ ಜನ ತೋರಿಸುವರು. ನಮ್ಮ ಪುರಾಣದಂತೆ ಕೈಲಾಸವನ್ನೆತ್ತಿ ಲಂಕೆಗೆ ಒಯ್ಯಲು ಉದ್ಯುಕ್ತನಾದ ರಾವಣನು ಬಿಗಿದ ಹಗ್ಗ ಇದೆಂದು ಪ್ರತೀತಿ. ಒಂದೇ ಜಾನಪದ ಕಥೆಯ ಜಾಡು ಬದಲಿಸಿ ರೂಪಗೊಂಡ ಎರಡು ಪುರಾಣ ಕಥೆಗಳಾಗಿರಬಹುದೆನಿಸಿತು.

ಕೈಲಾಸ ಪರ್ವತದ ಮಹಾದೇವನ ಹೆಸರು ದೆಮ್ ಚ್ಹೊಕ್ (ಧರ್ಮಪಾಲ) ಅಥವಾ ಪಾವೊ. ಈ ದೇವ ವ್ಯಾಘ್ರ ಚರ್ಮಾಂಬರನಾಗಿದ್ದು ಮಾನವ ಕಪಾಲಗಳ ಮಾಲೆ ಧರಿಸಿರುವನು. ಒಂದು ಕೈಯಲ್ಲಿ ಡಮರು, ಮತ್ತೊಂದು ಕೈಯಲ್ಲಿ ಖಟ್ವ (ತ್ರಿಶೂಲ) ಹಿಡಿದಿರುವನು. ಕೈಲಾಸದ ಸುತ್ತಲೂ ೯೮೦ ಪಂಕ್ತಿಗಳಲ್ಲಿ ಪ್ರತಿಯೊಂದು ಪಂಕ್ತಿಯಲ್ಲಿ ೫೫೦ರಂತೆ ದೇವತೆಗಳು ಉಪಸ್ಥಿತರಿರುವರು. ಅವರೆಲ್ಲರೂ ದೆಮ್ ಚ್ಹೊಕ್ ನಂತೆಯೇ ವ್ಯಾಘ್ರಚರ್ಮ ಹೊದ್ದು ಡಮರು ತ್ರಿಶೂಲ ಪಾಣಿಗಳಾಗಿರುವರು. ದೆಮ್ ಚ್ಹೊಕ್‌ನ ಪತ್ನಿ ದೊರ್ಜೆ ಫಾಂಗ್-ಮೊ (ವಜ್ರವರಾಹಿ ಅಥವಾ ಶಕ್ತಿ) ಪತಿಯೊಂದಿಗೆ ಬಿಡಿಸಲಾಗದ ಮಿಥುನ ಬಂಧನದಲ್ಲಿರುವಂತೆ ಪ್ರತಿಮೆಗಳಲ್ಲಿ ಚಿತ್ರಗಳಲ್ಲಿ ರೂಪಿತಳಾಗಿರುವಳು. ಕೈಲಾಸ ಶಿಖರದ ಪಶ್ಚಿಮ ಪಾರ್ಶ್ವದಲ್ಲಿರುವ ಸಣ್ಣ ಹಿಮಶಿಖರದಲ್ಲಿ ದೊರ್ಜೆ ಫಾಂಗ್ ಮೊಳ ಆವಾಸ.

ಟಿಬೆಟೀ ಬೌದ್ಧರ ನಂಬಿಗೆಯಂತೆ ಕೈಲಾಸ ಶಿಖರದ ಒಂದು ಪ್ರದಕ್ಷಿಣೆ 'ಕೊರ್ಲಾ' ಬಂದರೆ ಈ ಜನ್ಮದ ಪಾಪವೆಲ್ಲಾ ತೊಳೆದು ಹೋಗುವುದು. ಹತ್ತು ಸುತ್ತು ಬಂದರೆ ಒಂದು ಕಲ್ಪದ ಪಾಪ ಪರಿಹಾರ. ೧೦೮ ಸುತ್ತು ಬಂದರೆ ಈ ಜನ್ಮದಲ್ಲೇ ನಿರ್ವಾಣ ಪ್ರಾಪ್ತಿಯಾಗಿ ಯಾತ್ರಿಯು ಬೋಧಿಸತ್ವನಾಗುವನು. ಈ ದುರ್ಗಮ ಪರ್ವತದ ಪ್ರದಕ್ಷಿಣೆಯನ್ನು ೧೦೮ ಸಲ ಮಾಡುವಲ್ಲಿ ಜೀವಕ್ಕೆ ಈ ಜನ್ಮದಿಂದ ಬಿಡುಗಡೆ ಸಿಗುವುದಂತೂ ಖಂಡಿತ.

ಕೈಲಾಸ ಶಿಖರದ ಮೇಲೆ ಅಷ್ಟದಿಕ್ಪಾಲಕರು, ಬೋಧಿಸತ್ವರು, ದೇವತೆಗಳು, ಲಾಮಾಗುರುಗಳು, ಗಂಧರ್ವರು ಬೌದ್ಧಪಂಚಾಂಗದ ಅಶ್ವಸಂವತ್ಸರದಲ್ಲಿ ಸಭೆಸೇರಿ ಈ ಶಿಖರವನ್ನು ಪವಿತ್ರಗೊಳಿಸಿದರು. ಅಂತೆ ಅಶ್ವಸಂವತ್ಸರ ಶ್ರೇಷ್ಠ. ಈ ಶಿಖರದ ಬಳಿ ಸಾರಿದ ಬೌದ್ಧಗುರುಗಳನೇಕರ ಪಾದಸ್ಪರ್ಶದಿಂದ

ಪವಿತ್ರವಾದ ಪ್ರದಕ್ಷಿಣೆಯ ದಾರಿಯಲ್ಲಿ ಇಂದಿಗೂ ಸಾವಿರಾರುಮಂದಿ ಯಾತ್ರೆ ಮಾಡುವರು. ನಮ್ಮ ಪ್ರದಕ್ಷಿಣೆಯ ಕಾಲದಲ್ಲಿ ಪ್ರತಿಹೆಜ್ಜೆಗೆ ಸಾಷ್ಟಾಂಗ ನಮಸ್ಕಾರ ಮಾಡುತ್ತ ಬರುತ್ತಿದ್ದವರನ್ನು ಕಾಣುವ ಅದೃಷ್ಟ ನಮಗೂ ಇತ್ತು.

೫೫ ಕಿ.ಮೀ ಉದ್ದದ ಹೊರ-ಪ್ರದಕ್ಷಿಣಾ ಪಥದೊಳಗೆ ಇನ್ನೆರಡು ಪ್ರದಕ್ಷಿಣೆಯ ಮಾರ್ಗಗಳಿವೆಯಂತೆ. ಚಿಕ್ಕದಾದರೂ ಇನ್ನೂ ಎತ್ತರದಲ್ಲಿರುವ ಹಾಗೂ ಕಠಿಣತರ ಮಾರ್ಗಗಳು. ಹೊರ ಪ್ರದಕ್ಷಿಣೆಯನ್ನು ೨೧ ಸಲ ಮಾಡಿದವರಿಗೆ ಮಾತ್ರ ಒಳವಲಯಕ್ಕೆ ಪ್ರವೇಶ ಸಿಗುವುದು. ಎರಡನೆಯ ಮಾರ್ಗದಲ್ಲಿ ಹೋಗುವವರು ನಿಜವಾದ ಭಕ್ತಾಗ್ರೇಸರರಿರಬೇಕು. ಜೀವದ ಹಂಗು ತೊರೆದಿರಬೇಕು. ಈ ದಾರಿಯಲ್ಲಿ ಸಾವು ಸಾಮಾನ್ಯ ಸಂಗತಿ. ಮೂರನೆಯ ಹಾಗೂ ಅತಿದುರ್ಗಮ ಪ್ರದಕ್ಷಿಣೆ ಶಿಖರಕ್ಕೆ ತಾಗಿದಂತೆಯೇ ಇದ್ದು ಅತಿಮಾನವರು ಮಾತ್ರ ಮಾಡಲು ಸಾಧ್ಯ. ಅಂತಹವರಿಗೆ ಶಿಖರದ ಮೇಲೆ ದೇವ ದುಂದುಭಿ, ಗೆಜ್ಜೆ ತಾಳಗಳ ಧ್ವನಿ, ಇತರ ವಾದ್ಯಗಳನಾದ ಕೇಳಿ ಬರುತ್ತದೆ ಮತ್ತು ದೇವಾನುದೇವತೆಗಳ ದರ್ಶನವಾಗುತ್ತದೆ ಎಂಬ ನಂಬಿಕೆ ಟಿಬೆಟೀಯರಿಗೆ.
ನಮಗೆ ಹೊರವಲಯದ ಮೇಲೇರಿದಂತೆ ಕಿವಿಯಲ್ಲಿ ದೇವ ದುಂದುಭಿ ಗೆಜ್ಜೆತಾಳ ಧ್ವನಿಯು ಕೇಳಿಬಂತು – ರಕ್ತದೊತ್ತಡದಿಂದಾಗಿ. ಕಣ್ಮುಂದೆ ತಾರೆಗಳು ನರ್ತನಗೈದವು – ತಲೆ ಚಿಪ್ಪನ್ನೇ ಔಕಿ ಹಿಡಿದಂತಾಗಿ, ತಲೆ ಶೂಲೆ, ವಾಕರಿಕೆಯಿಂದಾಗಿ. ಸುರ ಸುಂದರಿಯರು, ಗಂಧರ್ವರು (ಯಾಕ್‌ಮೆನ್‌ಗಳು) ಕೈಹಿಡಿದು ಮೇಲಕ್ಕೆ ನಡೆಸಿದರು – ನಾವು ನಿತ್ರಾಣಗೊಂಡು ಬಾಯಾರಿ ಬಸವಳಿದು ನೆಲಕಚ್ಚಿದಾಗ!

ಬೆಟ್ಟದ ಮೇಲೆ ಅಲ್ಲಲ್ಲಿ ಬೆಳೆದಿದ್ದ ಹುಲ್ಲು ಮೇಯುತ್ತ ದೂರದ ವರೆಗೆ ಚದುರಿದ್ದ ಯಾಕ್‌ಗಳನ್ನು ತಂದು ನಮ್ಮನ್ನು ಹತ್ತಿಸುವ ಮೊದಲೇ ಆದಷ್ಟು ಕಾಲ್ನಡಿಗೆಯಲ್ಲೇ ಸವೆಸಲು ಹೊರಟವರು ಎರಡು ಕಿ.ಮೀ.ನ ನಡಿಗೆಗೇ ದಣಿದು ನಂದಿವಾಹನದ ಎದುರುನೋಡುತ್ತ ಅಲ್ಲೇ ಕುಳಿತೆವು. ಈ ಎತ್ತರದಲ್ಲಿ ವಾಯುವಿನ ವಿರಳತೆಯಿಂದಾಗಿ ಸ್ವಲ್ಪದೂರದ ನಡಿಗೆಯು ಬಹುತ್ರಾಸದಾಯಕ. ಆಮ್ಲಜನಕದ ಪೂರೈಕೆಗಾಗಿ ಪ್ರತಿಬಾರಿಯೂ ಆಳವಾದ ದೀರ್ಘವಾದ ಉಸಿರಾಟವಾಗಿ ಪ್ರಾಣಾಯಾಮ ಸಹಜವಾಗಿತ್ತು.

ಯಾಕ್ ಮೇಲೆ ಕುಳಿತ ಕೆಲವೇ ನಿಮಿಷಗಳಲ್ಲಿ ಅವು ತಮ್ಮ ಧೋರಣೆಯನ್ನು ತೋರಿಸಹತ್ತಿದವು. ಹುಲ್ಲು ಮೇದದ್ದು ಸಾಲದಾಗಿ ನೆಲಕ್ಕೆ ಬಾಗಿದವು ಕೆಲವು. ಬಾಯಾರಿ ನೀರು ಬಯಸಿ ಹೊಳೆಗಿಳಿದವು ಕೆಲವು. ತಿಂದಿದ್ದು ಹೆಚ್ಚಾಗಿ ಕಾಲ್ಕೆರೆದು ಕೊಂಬು ತೋರಿಸಿ ಜಗಳಕ್ಕೆ ನಿಂತವು ಹಲವು. ಹೋಗಬೇಕಿದ್ದ ದಾರಿ ಬಿಟ್ಟು ತಮ್ಮದೇ ದಾರಿಕಂಡು ಕೊಂಡವು ಒಂದೆರಡು. ಮೇಲೆ ಕುಳಿತವರ ಅಂಕೆಯಲ್ಲಿರದೆ ತಮ್ಮ ಮನ ಬಂದಂತೆ ನಡೆದ ವಾಹನಗಳಿವು.

ಯಾಕ್‌ಗಳನ್ನು ಎಮ್ಮೆ ಹಸುಗಳಂತೆ ಆನೆಕುದುರೆಗಳಂತೆ ಪಳಗಿಸುವುದು ದುಸ್ಸಾಧ್ಯ. ಮೂಗುದಾರದ ಪ್ರಯೋಗವೇ ಇಲ್ಲದ ಅವುಗಳನ್ನು ನಿಯಂತ್ರಿಸುವ ಏಕೈಕ ಸಾಧನವೆಂದರೆ ಹಗ್ಗ, ಇಲ್ಲದಿದ್ದರೆ ಮ್ಯಾಟಡೋರ್‌ನಂತೆ ನೇರವಾಗಿ ಕೊಂಬು ಹಿಡಿದು ಬಗ್ಗಿಸುವುದು. ಅವು ದೂರದಲ್ಲಿದ್ದರೆ ಕಲ್ಲುಗಳನ್ನು ಅವುಗಳ ಎಡಕ್ಕೆ ಅಥವಾ ಹಿಂದೆ ಬೀಳುವಂತೆ, ಆದರೆ ಅವುಗಳಿಗೆ ತಾಗದಂತೆ, ಎಸೆಯುವುದು. ಈ ಹುಸಿಕಲ್ಲೆಸೆತದೊಂದಿಗೆ ಮಾಲಿಕನು ಬಾಯಿಯಲ್ಲಿ ಹೊರಡಿಸುವ ಸ್ವರ,

ಸಿಳ್ಳು, ಲೊಟ್ಟೆ ಸದ್ದು, ಸದ್ದಿನುಸಿರು ಕಡಗ ಏರುದನಿಯ ಹಾಡೂಕೂಡ ಅವುಗಳನ್ನು ದಾರಿಗೆ ತರುತ್ತಿದ್ದುದನ್ನು ನೋಡಿದೆ. ಅವುಗಳನ್ನು ಹೊಡೆದು ಬಡಿದು ಮಣಿಸಿದುದನ್ನು ಕಾಣಲಿಲ್ಲ. ಮರಳುಗಾಡಿನಲ್ಲಿ ಒಂಟೆಗಳಂತೆ ಹಿಮಾಲಯದ ಎತ್ತರದ ನಾಡುಗಳಲ್ಲಿ – ಟಿಬೆಟ್, ಚೀನಾ, ನೇಪಾಳ, ಭೂತಾನ, ಭಾರತದ ಗಡಿ ಪ್ರದೇಶದಲ್ಲಿ ಯಾಕ್ ಅತಿ ಅವಶ್ಯಕ ಪ್ರಾಣಿ. ಅಲ್ಲಿಗೆ ಹೇಳಿ ಮಾಡಿಸಿದಂತಹ ದೇಹರಚನೆ ಅವುಗಳದು. ಹಾಲು, ಮಾಂಸ, ಹೇರಳ ಉಣ್ಣೆ, ಚಕ್ಕಳ ಮತ್ತು ಸಗಣಿಯ ಉರವಲು ಕೊಡುವ ಈ ಮೃಗದ ಮುಖ್ಯ ಪ್ರಯೋಜನ ಸಾಮಾನು ಸಾಗಿಸುವುದು. ಬೇರಾವ ಪ್ರಾಣಿಯೂ ಭಾರಹೊತ್ತು ಏರಲಾಗದ ಎತ್ತರಕ್ಕ ಧಡೂತಿ ಮೈಯ ಯಾಕ್ ಸಲೀಸಾಗಿ, ಅನಾಯಾಸವಾಗಿ, ೧೨೦ – ೧೫೦ ಭಾರವನ್ನು ಹೊತ್ತು ದುರ್ಗಮ ಮಾರ್ಗದಲ್ಲಿಯೂ ಏರಿ ಹೋಗುವುದು. ಮಾರ್ಗವೇ ಇಲ್ಲದ ಕಡೆಗಳಲ್ಲಿಯೂ ಇವನ್ನು ನಡಸುವುದು ಸಾಧ್ಯ. ನಾವು ಯಾತ್ರಿಗಳೂಕೂಡ ಅವುಗಳ ಮೇಲೆ ಹೇರಿದ ಸರಕುಗಳಂತೆಯೇ! ಟಿಬೆಟೀಯರ ಸಣ್ಣಮಕ್ಕಳೂ ಕೂಡ ಅದರ ಮೇಲೆ ಕುಳಿತದ್ದನ್ನು ನಾವು ಕಾಣಲಿಲ್ಲ. ನಮ್ಮನ್ನು ಕೂರಿಸಿ ನಾವು ಹೆದರುವುದನ್ನು ಕಂಡು ಮತ್ತೂ ಹೆದರಿಸಿ ತಮಾಷೆ ನೋಡುವ ಮೋಜಿನ ಪ್ರಸಂಗವಾಗಿತ್ತವರಿಗೆ ನಮ್ಮ ಈ ಯಾಕ್‌ಸವಾರಿ.

ಅನಿರೀಕ್ಷಿತ ಚಲನ – ಸದ್ದು, ಹಠಾತ್ತನೆ ಬೆನ್ನ ಮೇಲೆ ಬೀಳುವ ಭಾರ ಯಾವುದೇ ಆದರೂ ಯಾಕ್ ಬೆದರಿ, ಹೇಗೆ ಪ್ರತಿಕ್ರಿಯಿಸುವುದೋ ಹೇಳಲು ಬಾರದು. ಯಾಕ್ ಮೇಲೆ ಕೂತವರಿಗೆ ಮೊದಲ ಸೂಚನೆಯೆಂದರೆ ಅದರ ಹೆಗ್ಗತ್ತಿನ ಕೂದಲನ್ನು ಎರಡೂ ಕೈಗಳಿಂದ ಕಪಿಮುಷ್ಟಿಯಲ್ಲಿ ಹಿಡಿಯುವುದು. ಅದೆಷ್ಟೇ ಕುಣಿದಾಡಿದರೂ ಕೈಬಿಡದೆ ನೇತಾಡುವುದು. ಎರಡನೆಯ ಸೂಚನೆ ಹೆದರಿಕೆಯಿಂದ ಕೂಗಿ ಕಿರುಚಿ ಅವುಗಳನ್ನು ಗಾಬರಿಗೊಳಿಸಬಾರದು. ತೆಪ್ಪನೆ ಕುಳಿತು ಒಡೆಯನು ರುವವರೆಗೆ ತಾಳ್ಮೆಯಿಂದ ಕಾಯಬೇಕು – ಅದರ ಬೆನ್ನ ಮೇಲೆಯೇ ನಿದ್ದೆ ಹೋದರೂ ಸರಿ. ಆದರೆ ಇಳಿಯುವ ಸಾಹಸಕ್ಕೆ ತೊಡಗಬಾರದು! ಜೀವನದಲ್ಲಿ ಎಂದೆಂದೂ ಮರೆಯಲಾಗದ, ಪುನರಾವರ್ತನೆಗೊಳ್ಳದ ವಿಶಿಷ್ಟಾನುಭವ – ಈ ಯಾಕ್ಸವಾರಿ. ಈ ಸ್ವಯಂಚಾಲಿತ ವಾಹನಗಳನ್ನೇರಿ ನಾವು ಲ್ಹಾಛು ದಾಟಿದ ಪ್ರಸಂಗ ಉತ್ತಮ ದರ್ಜೆಯ ವಿನೋದ ಪ್ರಹಸನವಾಗಿತ್ತು ಟಿಬೆಟೀ ತಂಡಕ್ಕೆ, ಅವುಗಳಿಂದ ಇಳಿದ ಬಳಿಕ ನಮಗೂ ಸಹ.

ಹೊಳೆದಾಟಿದ ಬಳಿಕ ಯಾಕ್‌ನಿಂದಿಳಿದವರು ಪುನಃ ಹತ್ತುವುದಿಲ್ಲವೆಂದು ಮುಷ್ಕರ ಹೂಡಲು ಎರಡು ಬಲವಾದ ಕಾರಣಗಳು. ನಡಿಗೆಯ ಕಷ್ಟವನ್ನಾದರೂ ಸಹಿಸಬಹುದು, ಉರುಚಿದ ಗಾಯಕ್ಕೆ ಪೋಲ್ಟೀಸ್ ಕೊಡುವ ಯಾಕ್ ಬೇಡವೆನ್ನುವುದು ಒಂದು. ಎರಡನೆಯದಾಗಿ ಯಾಕ್ ಮೇಲೆ ಕುಳಿತರೆ ನಮ್ಮ ಗಮನವೆಲ್ಲ ಅದರ ಮೇಲೆ ಭದ್ರವಾಗಿ ಬೀಳದಂತೆ ಕುಳಿತಿರುವುದಾಗುವುದೇ ಹೊರತು, ದಾರಿಯುದ್ದಕ್ಕೂ ಹರಡಿರುವ ವಿವಿಧ ವರ್ಣಗಳ ಶಿಲೆ, ವಿವಿಧ ವಿನ್ಯಾಸದ ಬೆಟ್ಟ, ಹುಲ್ಲು, ಹೂಗಳನ್ನು ನೋಡುತ್ತ ಪ್ರಕೃತಿಯ ಚೆಲುವನ್ನು ಆಸ್ವಾದಿಸುತ್ತ ಆನಂದಿಸಲು ಆಗುತ್ತಿರಲಿಲ್ಲ. ಸೂರ್ಯ ಮುಳುಗಲು ಇನ್ನೂ ಬಹಳ ಸಮಯವೂ ಇತ್ತು. ಅರೆಮನಸ್ಸಿನಲ್ಲಿ ಶಿವಗಣರು ಒಪ್ಪಿಗೆಯಿತ್ತರು.

ಮಾನಸ ಸರೋವರದಲ್ಲೊಂದು ಕತೆಯಾಗಿದ್ದ ಪ್ರಕೃತಿ ದೇವಿ ಕೈಲಾಸ ಸಾನ್ನಿಧ್ಯದಲ್ಲಿ ಮತ್ತೊಂದು ಕತೆಯಾಗಿ ಕೌತುಕದ ತೌರಾಗಿದ್ದಳು. ದಾರಿಯುದ್ದಕ್ಕೂ ಚಿತ್ರ ವಿಚಿತ್ರ ಕಲ್ಲುಗಳನ್ನು ಜಡಿದಿದ್ದ ಹಸಿರು ಹುಲ್ಲಿನ ಕಂದು ಮಣ್ಣಿನ ರತ್ನಗಂಬಳಿಯನ್ನು ಹಾಸಿದ್ದಳು. ಬಿಸಿಲಿಗೆ ಮಿರುಗುವ

ತೊರೆಗಳ ಬೆಳ್ಳಿದಾರಗಳನ್ನು ನೇಯ್ದಿದ್ದಳು. ನೀಲಿ, ಬಿಳಿ, ಗುಲಾಬಿ, ಹಳದಿ, ಹೂಗಳನ್ನೆರೆಚಿದ್ದಳು. ಜನಜಂಗುಳಿಯಿಂದಾಗುವ ಪರಿಸರ ಮಾಲಿನ್ಯಕ್ಕೆ ಅವಕಾಶವೇ ಇರಲಿಲ್ಲವಾಗಿ ಹೊಚ್ಚ ಹೊಸ ನಾಡು ಹಾಡಾಗಿತ್ತು. ಅದರಲ್ಲಿ ಆಡಿ ಹಾಡುವ ಹಕ್ಕಿಗಳು ನಾವೊಂದಿಪ್ಪತ್ತು ಮಂದಿ ಮಾನವರು! ನಿರ್ಜನವಾಗಿತ್ತು ಅಲ್ಲಯ್ಯನ ನಾಡು.

ಮೊಣಕಾಲವರೆಗಿನ ತಣ್ಣನೆಯ ತಿಳಿನೀರ ಝರಿಗಳನ್ನು ದಾಟುವಾಗ ಅವುಗಳ ಕುಣಿ ಕುಣಿಯುವ ಹರಿವಿನ ಲಾಲಿತ್ಯ ಮಕ್ಕಳಾಟದಂತೆ ಸ್ಪರ್ಶಿಸಿ ಮುದ ನೀಡಿತ್ತು. ಅದರೊಂದಿಗೆ ಪಥದಲ್ಲಿ ಕಂಡು ಬಂದ ದಾಟಬೇಕಾದ ಬೋಳು ಬೆಟ್ಟಗಳು ಬಯಲುಗಳ ದಿಗಂಬರತೆ-ಗಿಡಗಂಟಿಗಳಿಲ್ಲದ ನಗ್ನತೆಯೇ ಕೈಲಾಸದ ಸೌಂದರ್ಯವಾಗಿತ್ತು. ಕತ್ತೆತ್ತುವುದಿರಲಿ-ಕಣ್ಣೆತ್ತಿದರೇ ಕಂಡು ಬರುತ್ತಿದ್ದ ಕಡು ನೀಲಾಕಾಶದಲ್ಲಿ ಆಟವಾಡುತ್ತಿದ್ದ ಪುಟ್ಟ ಬಿಳೀ ಮೋಡಗಳು ನಮ್ಮ ಸೌಂದರ್ಯ ಪ್ರಜ್ಞೆಯನ್ನು ಜಾಗ್ರತಗೊಳಿಸಿ ಪರಿಸರಕ್ಕೆ ಸ್ಪಂದಿಸುವಂತೆ ಮಾಡಿದ್ದವು. ಜೊತೆಯಲ್ಲೇ ದಿನದ ಚಾರಣದಲ್ಲಿ ನಮ್ಮ ಅರಿವಿಗೆ ಬಂದಂತೆ ಅಲ್ಲಿನ ಭೌಗೋಳಿಕ ವಿಲಕ್ಷಣತೆ ನಮ್ಮ ತರ್ಕ ಬುದ್ಧಿಯನ್ನು ಬಡಿದೆಬ್ಬಿಸಿತ್ತು.

ಸುತ್ತಲಿನ ಬೆಟ್ಟಗಳ ತೆರೆದಿಟ್ಟ ಶಿಲಾಭಾಗಗಳ ನೈಜ ಬಣ್ಣಗಳು ವೈವಿಧ್ಯಮಯ. ಹಸಿರು ಕಲ್ಲಿನ ಬೆಟ್ಟ, ಕಂದು ಬೆಟ್ಟ, ಬೂದು ನೀಲಿ ಬೆಟ್ಟ, ತಿಳಿ ಹಳದಿ-ಯಾ-ಕಿತ್ತಳ ಬಣ್ಣದ ಬೆಟ್ಟಗಳು ಬುದ್ಧಿಗೆ ಒಂದು ಸವಾಲಾದರೆ ನುಣುಪಾದ ಬೆಟ್ಟ, ಮೆಟ್ಟಲಾಗಿ ಮೇಲೇರಿದ್ದ ಬೆಟ್ಟ, ಪದರುಪದರಾಗಿ ಹರಡಿದ್ದ ಬೆಟ್ಟ, ನೊರಜುಗಲ್ಲಿನ, ಪುಡಿ ಪುಡಿಯಾಗಿ ಜರುಗುವ ಮೈಯ ಬೆಟ್ಟ, ಮೈಯೆಲ್ಲಾ ಕುಳಿಗಳಾಗಿ ತಾತಾತೂತಾದ ಬೆಟ್ಟ. ಹೀಗೆ ಹಲವು ರೀತಿಯ ಶಿಲಾ ಲಕ್ಷಣಗಳ ಪ್ರದರ್ಶನ ಒಂದೇ ಪ್ರದೇಶದಲ್ಲಿ ಕಾಣಬರುತ್ತಿದ್ದುದು ಮತ್ತೊಂದು ಸವಾಲಾಗಿತ್ತು.

ಒಂದರೆಡು ಕಿ.ಮೀ ಅಂತರದಲ್ಲಿ ಒಣ ಬೆಟ್ಟಗಳ ನಡುವೆಯೇ ಸದಾ ಹಿಮದ ಟೊಪ್ಪಿ ತೊಟ್ಟು ನಿಂತ ಶಿಖರಗಳು ಒಂದು ಸೋಜಿಗವಾದರೆ, ಬೆನ್ನು ಕೆನ್ನೆಗೆ ಚುರುಕು ಮುಟ್ಟಿಸುವ ಬಿಸಿಲಿನಲ್ಲೆ ಎದುರಿನ ಬೆಟ್ಟಕ್ಕೆ ಮಂಜಿನ ತೆರೆಯೆಳೆವ ಮೋಡಗಳು 'ಈಗೇನೆನ್ನುತ್ತದೆ ನಿನ್ನ ಬುದ್ಧಿ?' ಎಂದು ಕೇಳುತ್ತಿದ್ದವು. ನಮ್ಮ ವಿವೇಚನಾಶಕ್ತಿಯನ್ನು ಆಧರಿಸಿ ಬೆಳೆದಿದ್ದ ಅಹಂ ಭಾವವನ್ನು ಕೊಚ್ಚಿ ಹಾಕಿದ್ದವು.

'ನೀನು' ಆಗುವ ಮುನ್ನ ನಾವು ಹೇಗಿರುವೆವೆಂದು ನೋಡಬಲ್ಲೆಯಾ?' ಎಂದು ಪಂಚತತ್ವಗಳು-ಭೂಮಿ, ಜಲ, ವಾಯು, ಅಗ್ನಿ(ಸೂರ್ಯನ ರೂಪದಲ್ಲಿ) ಮತ್ತು ಆಕಾಶ-ಜಿಜ್ಞಾಸೆಗೆ ಪ್ರಚೋದಿಸಿದ್ದವು. ತಮ್ಮ ಮೂಲ ಸ್ಥಿತಿಯನ್ನು-ಜೀವ ರಚನೆಯಲ್ಲಿ ತೊಡಗುವ ಮುನ್ನಿನ ಸ್ಥಿತಿಯನ್ನು ಪರಿಚಯಿಸಿದ್ದವು. ಪಂಚತತ್ವಗಳ ಅಖಂಡತೆಯ ಭಿತ್ತಿಯಲ್ಲಿ ಖಂಡತೆಯ ಬೆಳಕು ನೆರಳಿನಾಟ ನಡೆದಿತ್ತು. ನಿಸರ್ಗದ 'ಸಿದ್ಧ' ಸ್ಥಿತಿಯನ್ನೇ ಅನುಭವಿಸುತ್ತ ಬಂದಿದ್ದ ಜೀವಕ್ಕೆ 'ಸಾಧ್ಯ' ಸ್ಥಿತಿಯನ್ನು ಪರಿಚಯಿಸಿದ್ದವು. ಈ ಬಗೆಯ ಯೋಚನೆಗಳು ಮೂಡುತ್ತಲೇ ಜೀವ ತಲ್ಲಣಿಸಿದ ನೆನಪೇ ಮೈನವಿರೇಳಿಸುತ್ತದೆ. ಇಂದಿಗೂ ಎಂದಿಗೂ! ಅಲ್ಲಯ್ಯನ ಈ ಅಂಗಳದಲ್ಲಿ ಮಾನವ ಹಸ್ತಕ್ಷೇಪವಿಲ್ಲದ ವಿಶುದ್ಧತೆಯ ಸ್ಥಿತಿಯಲ್ಲಿ ಪಂಚತತ್ವಗಳ ಸಂಘಟನೆ-ವಿಘಟನೆಯ ಅನೂಹ್ಯತೆಯನ್ನು ಮನಗಂಡಿದ್ದೆ. ಪಂಚೇಂದ್ರಿಯಗಳು ಪ್ರಕೃತಿಗೆ ಬಹುನಿಕಟವಾಗಿ ಅಲ್ಲಿನ ಪವಿತ್ರತೆಯಲ್ಲಿ ತೊನೆದಾಡಿದ್ದವು.

ಚಿತ್ತಸಂವಾದ ನಿಂತು ಮನಸ್ಸು ಕೆಲ ಕಾಲ ಸ್ತಬ್ಧವಾಗಿತ್ತು. ಈ ಅನಿರ್ವಚನೀಯತೆಯನ್ನು ನೀಗಲೆಂಬಂತೆ ದಿರಾಪುಕ್ ಶಿಬಿರ ತಲುಪಿದಾಗ ನಾಲಗೆ ಚುರುಕಾಗಿ ಸಹಯಾತ್ರಿಗಳಲ್ಲಿ ಮಾತುಕತೆ ನಗೆಚಾಟಿಕೆ ಉಂಡು ಮಲುಗುವವರೆಗೆ ನಡೆದಿತ್ತು. ಈ ವಿಪರೀತದ ಮನಸ್ಥಿತಿಯೇ ಎಲ್ಲರಲ್ಲೂ! ಬಿಗಿ ಮಾಡಿದ ವೀಣೆಯ ತಂತಿಯು ಊರಿ ಮೀಟಿದರೆ ಕಡಿದು ಹೋಗುವಂತೆ ನಮ್ಮ ವರ್ತನೆ–ಸಣ್ಣ ಪುಟ್ಟ ವಿಚಾರಕ್ಕೂ ತೀವ್ರತರ ಪ್ರತಿಕ್ರಿಯೆ, ಸೂಕ್ಷ್ಮತಮ ಮನಸ್ಸಿನ ಅತಿ ಭಾವುಕತೆ.

ಬಹು ದೂರದಿಂದಲೇ ಕಾಣಬರುವ ಬಾಹುಬಲಿಯ ವಿಗ್ರಹ ಶ್ರವಣಬೆಳ್ಗೊಳದ ಇಂದ್ರಗಿರಿಯನ್ನು ಸಮೀಪಿಸಿದಾಗ ಕಣ್ಮರೆಯಾಗುವಂತೆಯೇ ಮಾನಸ ಸರೋವರದ, ರಾಕ್ಷಸ ತಾಲದ ದೂರದಿಂದ ಪೂರ್ಣವಾಗಿ ಕಂಡು ಬಂದ ಕೈಲಾಸ ಶಿಖರವು ಕೈಲಾಸ ಪರ್ವತವನ್ನು ಸಮೀಪಿಸಿದಂತೆ ಹಲವಾರು ಕಡೆ ಕಣ್ಮರೆಯಾಗಿ ಬಿಡುತ್ತಿತ್ತು. ಮತ್ತೊಮ್ಮೆ ಅದರ ಭಾಗ ಗೋಚರವಾದಾಗ ಅದರ ಸ್ವರೂಪ ಬದಲಾಗಿರುತ್ತಿತ್ತು. ದೂರದಿಂದ ಕಂಡ ಬೆಳ್ಳಿಯಗುಮ್ಮಟ ದಿರಾಪುಕನಲ್ಲಿ ನೀಲ ಶಿಖರವಾಗಿ ನೀಲಕಂಠನಿಗೆ ವಿಭೂತಿಯಿಟ್ಟಂತೆ ಕಾಣುತ್ತಿತ್ತು. ಅದರ ಮುಂದೆ ಕುಳಿತ ನಂದಿಯನ್ನು ಕಡೆದವಳು ಪ್ರಕೃತಿ. ಲ್ಹಾ ಛುನ ಹೊರಮಂಡೆಯಲ್ಲಿದ್ದ ನಮಗೆ ಒಳದಂಡೆಯ ಕೈಲಾಸ ಶಿಖರ ಬಹುಸಮೀಪದಲ್ಲಿದ್ದಂತಿತ್ತು. ಹೋಗಬಹುದಲ್ಲವೇ ಎಂದಾಗ 'ನೋಡಲು ಹತ್ತಿರವಷ್ಟೆ. ನಡೆದರೆ ಕಡೇಪಕ್ಷ ೫ ಕಿ.ಮೀ ಅಂತರವಿದೆ. ಈಗ ಕತ್ತಲಾವರಿಸುವ ವೇಳೆ ಬೇಡ.' ಎಂದಾಗ ಮನ ತೆಪ್ಪಗಾಯಿತು. ಪಾಲಿಗೆ ಬಂದದ್ದು ಪಂಚಾಮೃತವೆಂದು ನದಿಯ ನಡುವಿನ ಬಂಡೆಯಲ್ಲಿ ಕುಳಿತು ನೀರೊಳಗೆ ಕಾಣುತ್ತಿದ್ದ ಆಕಾಶದಲ್ಲಿ ಕಾಲಾಡಿಸುತ್ತಿದ್ದವಳಿಗೆ ದೂರದಿಂದ ಯಾರೋ ಕರೆದಂತಾಗಿ ಕತ್ತೆತ್ತಿದೆ. ಕ್ಯಾಂಪಿಗೂ ಮೇಲೆ ಬೆಟ್ಟದ ಬಗಲಿನಲ್ಲಿದ್ದ ದಿರಾಪುಕ್ ದೇಗುಲ ಕಣ್ಣಿಗೆ ಬಿದ್ದಂತೆಯೇ ಅದಕ್ಕೂ ಮೇಲೆ ಬೆಟ್ಟದ ತುದಿಯಲ್ಲಿದ್ದ ಸೂರ್ಯನ ಬೆಳಕು ಕೋರೈಸಿತ್ತು. ಕೆಲವೇ ಕ್ಷಣಗಳಲ್ಲಿ ಬೆಳಕಿನುಂಡೆ ಉರುಳಿಯಾಗಿತ್ತು. ಮರುಗಳಿಗೆಯೇ ಕಣ್ಣು ತಂತಾನೇ ಕೈಲಾಸ ಶಿಖರಕ್ಕೆ ಹೊರಳಿ ಅದರ ನೀಲ ಸುಂದರ ಸುಧೆಯನ್ನೀಂಟುತ್ತಿತ್ತು. ಕಣ್ಮುಚ್ಚಿದರೆ ಬೆಳಗ್ಗೆ ಕಂಡ ದಿವ್ಯ ಮುಖವೇ ತೇಲಿ ಬರುತ್ತಿತ್ತು. ಪೂರ್ವದಲ್ಲಿ ಋಷಿಗಳು, ಕವಿಗಳು, ಯೋಗಿಗಳು ಕಾಣುತ್ತಿದ್ದ, ಬಯಸುತ್ತಿದ್ದ, ಆರಾಧಿಸುತ್ತಿದ್ದ 'ಸಂಧ್ಯಾ' ಎಂದರೆ ಇದೇ ಇರಬೇಕು. ನಿರ್ಜೀವ ಸಮಯವೂ ಚೈತನ್ಯ ಪಡೆದ ದೇವಿಯ ರೂಪವಾಂತು ಮನವನ್ನು ತುರೀಯಾವಸ್ಥೆಗೆ ಕೊಂಡೊಯ್ಯುವ ವಾಹಿನಿಯಾಗುವುದು. ಟಿಬೆಟ್ಟಿನಲ್ಲಿ ಪ್ರವಾಸದವೇಳೆ ಕಂಡ ಎಲ್ಲ ಬೌದ್ಧ ದೇಗುಲಗಳೂ ಇಂತಹ ಧ್ಯಾನಯೋಗ್ಯ ತಾಣಗಳಾಗಿದ್ದವು. ಮಾನಸದ ತಡಿಯ ಸೆರಲುಂಗ್, ಚುಗು, ಜೇವು ಗೋಂಪಾಗಳು ಕೈಲಾಸದ ದಿರಾಪುಕ್, ಜುತುಲ್‌ಪುಕ್, ದಾರ್ಚೆನ್‌ನ ಗೊಂಪಾಗಳು, ಕರ್ನಾಲಿ ನದಿಯ ದಡದಲ್ಲಿನ ಸಿಂಬ್ಲಿಂಗ್ ಹಾಗೂ ಖೋಜಾರ್ ದೇಗುಲಗಳು ಪರಿಸರದ ರುದ್ರ ರಮಣೀಯ ವಿಹಂಗಮ ನೋಟ ಕೊಡುವ ದೇವಮಂದಿರಗಳಾಗಿದ್ದವು.

ಕೈಲಾಸ ಪರಿಕ್ರಮದ ಮುಂದಿನ ಗುರಿ–ಡೋಲ್ಮಾ–ಲಾ–ಪಾಸ್. ಈ ಏರು ಇಡೀ ಕೈಲಾಸ ಮಾನಸ ಯಾತ್ರೆಯ ತುತ್ತ ತುದಿಯ ಏರುವಿಕೆಯಾಗಿತ್ತು. ಅಲ್ಲದೆ ಯಾತ್ರೆಯ 'ಕ್ಲೈಮ್ಯಾಕ್ಸ್' ಕೂಡ ಆಗಿತ್ತು. ಈ ಪಾಸ್‌ನಿಂದ ನಮ್ಮ ಪ್ರವಾಸ ಮರಳಿ ಬರುವುದಾಗಿತ್ತು. ನಾವು ಸುಮಾರು ೧೯ ಸಾವಿರ ಅಡಿಗಳ ಮಟ್ಟವನ್ನು ತಲುಪುವವರಿದ್ದೆವು. ಕೇವಲ ಐದು ಕಿ.ಮೀ ದಾರಿಯಲ್ಲಿ ಮೂರು ಸಾವಿರ ಅಡಿಗಳಷ್ಟು ಏರಬೇಕಿತ್ತು. ದೈಹಿಕ ತ್ರಾಣ, ಮಾನಸಿಕ ಬಲ, ಚಿತ್ತದ ಏಕಾಗ್ರತೆ

ಎಲ್ಲವೂ ಪರೀಕ್ಷೆಗೊಳ್ಳುವುದಿತ್ತು.

ಇಂದು ಬೆಳಗ್ಗೆ ಕಠಿಣ ಚಾರಣಕ್ಕೆ ತಯಾರಾಗಿ ಕೋಣೆಯಿಂದ ಹೊರಬಂದುದೇ ನೋಡಿದ ಮೊದಲ ನೋಟ-ಕೇಳಿದ ಮಾತು ನಮ್ಮೆಲ್ಲರ ಸ್ಥಿತಿಗತಿ ಗೆ ಕನ್ನಡಿ ಹಿಡಿದಿತ್ತು. ನಿನ್ನೆ ಯಾಕ್ ಮೇಲೆ ಹಾರಿ ಕುಳಿತ ಎರಡೇ ನಿಮಿಷದಲ್ಲಿ ದೂರಕ್ಕೆ ಒಗೆಯಲ್ಪಟ್ಟಿದ್ದ ಮನೋಜ್ ಹರಿದಾಸ್ ತಂಡದ ಕಿರಿಯ ಸದಸ್ಯ ನಮ್ಮೆಲ್ಲರ 'ತಮ್ಮ' (ಈ ಒಗೆತದಿಂದಾಗಿ ಅವನ ಸೊಂಟಕ್ಕೆ ಬಲವಾದ ಪೆಟ್ಟು ಬಿದ್ದಿತ್ತು!) ತನ್ನ ಯಾಕ್‌ನ ಪಕ್ಕದಲ್ಲಿ ನಿಂತು ಅದರ ಬೆನ್ನು ಸವರುತ್ತಾ ಮಾತಾಡಿಸುತ್ತಾ ಒಪ್ಪಂದಕ್ಕೆಳೆಸಿದ್ದ –'ಹೇ ನಂದಿ, ಈ ದಿನ ಏನೂ ತಂಟೆ ತಕರಾರಿಲ್ಲದೆ ನನ್ನನ್ನು ಜಾಂಗ್ ದಿರಾಪುಕ್ ತಲುಪಿಸಿದರೆ ನಿನಗೆ ಒಂದು ಕೆಜಿ ಚೆನ್ನಾ(ಕಡಲೆ ಕಾಳು) ನೈವೇದ್ಯವೇರಿಸುತ್ತೇನೆ. ಜೊತೆಗೆ ಅರ್ಧ ಕೆಜಿ ಗುಡ (ಬೆಲ್ಲವೂ) ಸಹ. ಇಲ್ಲದಿದ್ದರೆ ನಿನ್ನ ಬಾಲದ ಕುಚ್ಚು ಮತ್ತು ಕೊಂಬುಗಳು ಉಳಿಯದಂತೆ ನೋಡಿಕೊಳ್ಳುವೆನು!' – ಎಲ್ಲಿಂದ ಇವೆರಡೂ ನೈವೇದ್ಯಗಳನ್ನು ಹೊಂದಿಸುವನಿದ್ದನೋ ತಿಳಿಯಲಿಲ್ಲ. ಎಲ್ಲರೂ ಈ ದಿನವನ್ನು ದಿನದ ಆಗುಹೋಗುಗಳನ್ನು ಶಿವನಿಗೊಪ್ಪಿಸಿ ದಿರಾಪುಕ್ ಶಿಬಿರದಿಂದ ಕೈಲಾಸ ಪ್ರದಕ್ಷಿಣೆಯನ್ನು ಮುಂದುವರೆಸಿದೆವು.

ದಾರ್ಚೆನ್‌ನಿಂದ ದಿರಾಪುಕ್‌ವರೆಗಿನ ಪ್ರದಕ್ಷಿಣೆಯ ಹಾದಿ ಬೆಟ್ಟಗಳ ನಡುವಣ ಪುಟ್ಟ ಮೈದಾನಗಳಲ್ಲಿ ಕೆಲವೆಡೆ ಏರು ದಿಣ್ಣೆಗಳನ್ನೂ ಹಾಯ್ದು ಹೋಗಿದ್ದುದು ದಿರಾಪುಕ್ ನಂತರ ಬೆಟ್ಟಗಳ ನಡುವಿನ ಕಿರಿದಾದ ಓಣಿಗಳಲ್ಲಿ ಸಾಗಿತ್ತು. ಎರಡೂ ಕಡೆ ಆಕಾಶಕ್ಕೇರಿನಿಂತ ಬೆಟ್ಟಗಳ ಗೋಡೆ, ಅಲ್ಲಲ್ಲಿ ಈ ಬೆಟ್ಟಗಳ ಮಗ್ಗುಲಿಗೆ ಅಂಟಿದ್ದ ಬರ್ಫದ ತೇಪೆ, ಅಡ್ಡಾದಿಡ್ಡಿ ಒಟ್ಟಿದಂತಿದ್ದ ಕಲ್ಲು ಬಂಡೆಗಳ ರಾಶಿ, ಈ ಬಂಡೆಗಳ ಮೇಲೆ ಅಸಂಖ್ಯಾತ ಯಾತ್ರಿಗಳು ಹೊದಿಸಿ ಹೋಗಿದ್ದ ತುಂಡು ಬಟ್ಟೆಗಳು ಅಷ್ಟಷ್ಟು ದೂರಕ್ಕೆ ಬಂಡೆಗಳ ಮೇಲೆ ಕುಳಿತಿರುತ್ತಿದ್ದ ಯಾಕ್ ಬುರುಡೆ ಕೊಳ್ಳುಗಳು, ಕುರಿಯ ಕೊಂಬುಗಳು, ಅಲ್ಲಲ್ಲಿ ಪೇರಿಸಿಟ್ಟ ಕಲ್ಲುಗಳ ಮೇಲೆ ಪೂಜೆಗೊಂಡ ಲಿಂಗಾಕೃತಿಯ ಕಲ್ಲುಗಳು ಆಕ್ಷಣಕ್ಕೆ ನಿರ್ಜನ ಪ್ರದೇಶವಾಗಿದ್ದರೂ ಭಿಕ್ಷು ಯಾತ್ರಿ ಜನರ ಓಡಾಟವಿರುವ ಕೈಲಾಸ ಪ್ರದೇಶವು ಪವಿತ್ರ ಕ್ಷೇತ್ರವೆಂದು ಸಾರಿದ್ದವು.

ನಾವು ನಡೆದಿದ್ದ ದಾರಿಯ ಬಲಭಾಗಕ್ಕಿರುವ ಕೈಲಾಸ ಪರ್ವತವು ಆಗೊಮ್ಮೆ ಈಗೊಮ್ಮೆ ಶಿಖರದ ದರ್ಶನವೀಯುತ್ತಿದ್ದರೆ, ಕೋಟಿ ವರ್ಷಗಳ ಹಿಂದೆ ನಡೆದ ಹಿಮಾಲಯದ ಜನನ ಕಥೆಗೆ, ಏಷಿಯಾ ಖಂಡದ ದಕ್ಷಿಣ ಭಾಗದ ಉತ್ಥಾನಕ್ಕೆ ಸಾಕ್ಷಿಯಾಗಿ ಎಡ ಭಾಗಕ್ಕಿರುವ ಬೆಟ್ಟ ಗುಡ್ಡಗಳ ಕಲ್ಲು ರಾಶಿ ಕಂಡು ಬಂದಿದ್ದವು.

ಕೈಲಾಸ ಪರ್ವತದ ಪೂರ್ವೋತ್ತರಕ್ಕಿರುವ ದೋಲ್ಮಾ-ಪಾಸ್‌ಅನ್ನು ಏರುವದಾರಿಯು ಗ್ರಾನೈಟ್‌ನ ಚಿಕ್ಕ – ದೊಡ್ಡ ಬಂಡೆಗಳಿಂದಾದುದು. ಗಿರಿಗಳಿಂದ ಇಳಿದು ಬರುವ ಒರತೆಗಳ ಮೇಲೆಯೇ ಸಾಗುವ ದಾರಿ. ಒಂದು ಪಕ್ಕದಲ್ಲಿ, ಕೆಲವೆಡೆ ಮಾತ್ರ ಸಮತಟ್ಟಿನ ನೆಲವೇನೋ ಇದ್ದಿತಾದರೂ, ಹಳ್ಳಗಳನ್ನು ಮುಚ್ಚಿದ ಬರ್ಫ ಯಾವುದು, ಗಟ್ಟಿ ನೆಲದ ಜಾಗ ಯಾವುದು, ಜೌಗು ನೆಲ ಯಾವದೆಂದು ಹೇಳುವಂತಿರಲಿಲ್ಲ. ಅದರಿಂದಾಗಿ ಗೊತ್ತಿದ್ದ ಸಂಕಷ್ಟವೇ ಲೇಸೆಂದು ಒರತೆ-ಬಂಡೆಗಳ ಏರಾಟ. ಸಮತೋಲನ ಕಾಯ್ದುಕೊಳ್ಳುವ ಓಲಾಟ. ಸ್ಥೂಲ ಶರೀರದ ಮೇಲೆ ದಪ್ಪನೆಯ

ಉಣ್ಣೆ ಉಡುಪು ಹಾಕಿ ತಲೆಗೆ ಮಫ್ಲರ್ ಸುತ್ತಿದ್ದ ನಾವು ಕಲ್ಲು ಬಂಡೆಗಳ ದಾರಿಯಲ್ಲಿ ಹಾರುತ್ತ ಅತ್ತಿತ್ತ ಓಲಾಡುತ್ತ ನಡೆಯುತ್ತಿದ್ದುದು ಸರ್ಕಸ್‌ನಲ್ಲಿ ಚಿಕ್ಕ ಚೆಂಡೊಂದರ ಮೇಲೆ ಬ್ಯಾಲೆನ್ಸ್ ಮಾಡುತ್ತಾ ಸುತ್ತು ಬರುವ ಕರಡಿಯಂತೆ ತೋರಿರಬೇಕು. ಚಿಕ್ಕಂದಿನ ಚರುಕಿನ ಓಟವನ್ನು ನೆನೆಸಿಕೊಳ್ಳುವಂತಾಗಿತ್ತು.

ಯಾಕ್‌ಗಾಗಲೀ ನಮಗಾಗಲೀ ಅಪಾಯವಿಲ್ಲದ ರಸ್ತೆ ಬಂದ ಕೂಡಲೇ ವಾಹನಾರೂಢರಾಗಿ ಏದುಸಿರನ್ನು ಹತ್ತಿಕ್ಕುವ ಪ್ರಯತ್ನ. ಈ ಮಟ್ಟದಲ್ಲಿ ಒಂದೇ ಒಂದು ಅಡಿ ಮೇಲೇರುವುದು ಚಾಮುಂಡಿ ಬೆಟ್ಟದ ಇಪ್ಪತ್ತು ಮೆಟ್ಟಿಲೇರುವುದಕ್ಕೆ ಸಮ. ಪ್ರತಿ ಐದು ಹೆಜ್ಜೆಗೊಮ್ಮೆ ನಿಂತು ಎದೆ ನೀವಿಕೊಂಡು ಪ್ರಾಣಾಯಾಮದ ಕುಂಭಕ ಮಾಡಿ ಮುಂದುವರೆಯಬೇಕಾದ ಪರಿಸ್ಥಿತಿ. ಬಾಯಾರಿ ಬಂದರೂ ನೀರು ಕುಡಿಯವಂತಿಲ್ಲ. ಹೆಚ್ಚು ನೀರು ಕುಡಿದರೆ ವಾಕರಿಕೆ ಬರುತ್ತಿತ್ತು. ಈ ಏರಿನ ದಾರಿಯ ಅಗಲ ಹೆಚ್ಚೆಂದರೆ ಮೂರಡಿ. ಕೆಲವಡೆ ದಾರಿಯೇ ಇಲ್ಲ. ತಮ್ಮ ಆರಡಿ ದೇಹವನ್ನು ಈ ಕಿರುದಾರಿಯ ಏರಿನ ತಿರುವಿನಲ್ಲಿ ಕೊಂಡುಯ್ಯುತ್ತಿದ್ದ ಯಾಕ್‌ಗಳ ಚಾಲಾಕಿತನ, ಹೆಜ್ಜೆಯೂರುವಾಗಿನ ಎಚ್ಚರಿಕೆ, ನಂತರದ ಸ್ಥಿರತೆ, ಬೇಕಾದಲ್ಲಿ ಬಂಡೆಗಳ ಸಂದಿನಲ್ಲಿ ಕೊಂಬು ತೂರಿಸಿ ಪಡೆಯುತ್ತಿದ್ದ ಹೆಚ್ಚಿನ ಹಿಡಿತ, ತಮ್ಮ ಮೈಭಾರವನ್ನು ತಡೆಯುವಂತಹ ಬಂಡೆಗಳನ್ನೇ ಆರಿಸಿ(ಅದಕ್ಕಾಗಿ ನೇರದಾರಿ ಬಿಟ್ಟರೂ ಸರಿ!) ಮುಂದುವರೆಯುವ ಸ್ವರಕ್ಷಣಾ ರೀತಿ-ಸವಾರಿ ಮಾಡಿಯೇ ಅರಿಯಬೇಕು. ಜೊತೆಗೆ ೬೦ ಡಿಗ್ರಿ ಕೋನದ ಏರು. ಅದೇ ಕೋನದ ಇಳಿತ ಬಂದಾಗ ಯಾಕ್‌ನ ದೀರ್ಘ ಕಾಯಕ್ಕೆ ಸಮಾನಾಂತರದಲ್ಲಿ ಅದರ ಬೆನ್ನ ಮೇಲೆ ನಾವು ಮಲಗಿದ ರೀತಿ-(ಇಲ್ಲದಿದ್ದರೆ ಉರುಳಿ ಬೀಳುವುದು ಖಂಡಿತ) ಮೈನವಿರೇಳಿಸುವ ಅನುಭವ. ಹೀಗೆ ಏರಿ ಹತ್ತುವಾಗ ಅವುಗಳ ಮೇಲಿದ್ದ ನಮ್ಮ ಪ್ರಾಣ ನಮ್ಮ ಕೈಲಿತ್ತೋ, ಬಾಯಿಗೇ ಬಂದಿತ್ತೋ ಅಥವಾ ಯಮನ ಪಾಶದಲ್ಲಿ ಗಿರವಿ ಇಟ್ಟಿದ್ದೆವೊ ಯೋಚಿಸಲೂ ಆಗದಂತಹ ಮನಸ್ಥಿತಿಯಲ್ಲಿದ್ದೆವು. ಕ್ಷಣದಿಂದ ಕ್ಷಣಕ್ಕೆ ಜೀವಿಸುವುದೇನೆಂಬುದನ್ನು ಅರಿತೆವು. ಶರೀರದ ನರನರವೂ ಬಿಗಿದುಕೊಂಡಿದ್ದು ಯಾಕ್‌ನಿಂದ ಇಳಿದಾಗ ಇಂದ್ರಿಯಗಳೆಲ್ಲವೂ ಬಹು ಸೂಕ್ಷ್ಮಗ್ರಾಹಿಗಳಾಗಿ ಪ್ರಕೃತಿಗೆ ಸ್ಪಂದಿಸುವಂತೆ ನರಮಂಡಲವೇ ಜಾಗೃತವಾಗಿತ್ತು-ಸಚೇತನವಾಗಿತ್ತು. ಮೊಂಡು ಬಿದ್ದಿದ್ದ ಇಂದ್ರಿಯಗಳನ್ನು ಈ ರೀತಿ ಹರಿತಗೊಳಿಸಿ ಡೊಲ್ಮಾ-ಲಾ ದ ಸೊಬಗನ್ನು ಹೀರಿಕೊಳ್ಳಲು ಪ್ರಕೃತಿ ಅನುಗೊಳಿಸಿದ್ದಳು. ನಮ್ಮ ಆನಂದಾನುಭವದ ಆಳತೆಯನ್ನು ವಿಸ್ತರಿಸಿದ್ದಳು. ಕಡೆಯ ಐವತ್ತು ಅಡಿಗಳ ಮೆಟ್ಟಿಲನ್ನು ಕಾಲ್ನಡಿಗೆಯಲ್ಲಿ ಮುಗಿಸಿ ಡೊಲ್ಮಾ ಪಾಸ್ ಏರಿ ನಿಂತಾಗ-ತೂಷ್ಣೀಂ ನಿಂತೆವು.

ಹಿಂದೆ, ಮುಂದೆ, ಬಗಲಿನಲ್ಲಿ ಶಿಖರಗಳು ಹೊಳೆವ ರಜತ ನಖಗಳಂತೆ ಆಕಾಶವನ್ನು ಬಗಿಯುತ್ತಿದ್ದವು. ನೀಲಾಕಾಶದಿಂದ ಇಳಿದ ಮುಗ್ಧಧವಳ ಗಂಗೆಯ ಸೋನೆ ಈ ಶಿಖಾರಾಂಗುಲಿಗಳ ನಡುವೆ ಹರಿದು ಹೆಪ್ಪುಗಟ್ಟಿ ಅಲ್ಲಲ್ಲಿ ನಿಂತಿತ್ತು. ಆ ಎತ್ತರದಲ್ಲಿ ನಿಂತಿದ್ದವರಿಗೆ ಆಕಾಶದ ಕಡು ನೀಲಿ ಮೋಡಗಳ ಬಿಳಿ, ಹಿಮ ಪ್ರವಾಹದ ತಿಳಿನೀರಿನ ಹೊಳಪು, ಸೂರ್ಯನ ಬೆಳಕು, ಪರ್ವತಗಳ ಕಪ್ಪು ನೀಲಿ ಎಲ್ಲವೂ ಕಲೆತುಕೊಂಡು ಮೇಲೆ ಕೆಳಗೆ ಆದಂತಹ ಅನುಭವ. ಒಂದು ರೀತಿಯಲ್ಲಿ ಗಗನ ಯಾತ್ರಿಗಳೇ ಆಗಿದ್ದೆವು. ನಿಸರ್ಗ ಸೃಷ್ಟಿಯ ಸೊಬಗು ಇಲ್ಲಿ ಹೊಳೆಯಾಗಿ ಹರಿದಿತ್ತು. ಇಂತಹ ತಾಣದಲ್ಲಿ ನಿಂತ ಮಾನವನ ಆನಂದ ಮೇರೆ ಮೀರಿ ಇಂದ್ರಿಯಾತೀತದ ಕಡೆಗೆ

ಹೊರಳುವುದು ಬಹು ಸಹಜ. ಅನುಭಾವದಲ್ಲಿ ತೇಲಾಡಿದ ಮನಸ್ಸು ಇಹಕ್ಕೆ ಮರಳಿದಾಗ ಈ ತಾಣಕ್ಕಿರುವ ದಿವ್ಯತೆಯನ್ನು ಗುರುತಿಸಿ ನಮಿಸುವ ಪರಿಪಾಠ ಪುರಾಣರಚನೆಯಲ್ಲಿ ಪರ್ಯವಸಾನವಾಗುವುದೂ ಅನಿವಾರ್ಯವೆಂಬಷ್ಟು ಸಹಜ.

ಟಿಬೆಟೀಯರಿಗೆ ಈ ಸ್ಥಳ ಹಲವು ಕಾರಣಗಳಿಂದ ಧಾರ್ಮಿಕ ಮಹತ್ವವುಳ್ಳದ್ದು. ಟಿಬೆಟ್ಟಿನಲ್ಲಿ ಮೊದಲು ರೂಢಿಯಲ್ಲಿದ್ದ 'ಬಾನ್'ಸಂಪ್ರದಾಯದ (ಶಕ್ತಿಪೂಜೆ – ಭೂತಾರಾಧನೆ ಮತ್ತು ತಂತ್ರವಿದ್ಯೆ) ಮೇಲೆ ಬೌದ್ಧಧರ್ಮವು ಸಾಧಿಸಿದ ವಿಜಯದ ಸ್ಥಳವಿದು. ಒಂದರ ಮೇಲೊಂದು ಪೇರಿಸಿಟ್ಟಿರುವಂತಿರುವ ಹೆಬ್ಬಂಡೆಗಳು ಬಾನ್ ಗುರು ನಾರೋ ಬೊಂಕನ್‌ನ ಮಂತ್ರಶಕ್ತಿಯನ್ನು ಬೌದ್ಧಗುರು ಮಿಲರೆಪಾನ ಧಾರ್ಮಿಕ ಶಕ್ತಿಯು ನಾಶಗೊಳಿಸಿದ ಕಥೆಯನ್ನು ಹೇಳುತ್ತವೆ. ಬೌದ್ಧಯಾತ್ರಾರ್ಥಿಗಳು ಈ ಬಂಡೆಗಳಿಗೆ ವಸ್ತ್ರ ತೋರಣ ಕಟ್ಟಿ ಪ್ರಾರ್ಥಿಸುವರು.

ಹಿಮಶಿಖರಗಳಿಂದಿಳಿದು ಬಂದು ಇಲ್ಲಿ ಘನರೂಪ ಪಡೆದ ನೀರಹಾಸುಗಳು ಮತ್ತೊಂದು ಪುರಾಣ ಕಥೆಯನ್ನು ಹೇಳುತ್ತವೆ. ಟಿಬೆಟೀಯರ ಅಚ್ಚುಮೆಚ್ಚಿನ ಧ್ಯಾನಯೋಗ್ಯ ದೇವತೆ 'ತಾರಾಳ' ಟಿಬೆಟೀ ಹೆಸರು ಸ್ಗ್ರೋಲ್ಮಾ – ದೋಲ್ಮಾ ತನ್ನ ಇಪ್ಪತ್ತೊಂದು ರೂಪಗಳಲ್ಲಿ ಇಲ್ಲಿನ ಬಂಡೆಗಳಲ್ಲಿ ನೆಲೆಸಿರುವಳೆಂದು ಟಿಬೆಟೀಯರ ನಂಬಿಕೆ. ಅಂತೆಯೇ ಈ ಪಾಸ್‌ಗೆ ದೋಲ್ಮಾ – ಲಾ ಎಂದು ಹೆಸರು. ಟಿಬೆಟ್ಟಿನ ಅಧಿದೈವ–ಆರಾಧ್ಯದೈವ ಮಹಾಕರುಣ ಬೋಧಿಸತ್ವ ಅವಲೋಕಿತೇಶ್ವರ (ಚೆನ್ರಿಸಿಗ್) ಒಮ್ಮೆ ಎಲ್ಲ ಪ್ರಾಣಿಗಳ ವೇದನೆಯನ್ನು ತೊಡೆದು ಹಾಕುವೆನೆಂದು ಪಣತೊಟ್ಟನಂತೆ. ದೀರ್ಘಕಾಲದ ಶ್ರಮದಿಂದಲೂ ಯಾವ ಪರಿಣಾಮವೂ ಕಾಣದೆ ಪ್ರಾಣಿಗಳ ತೊಳಲಾಟ ನೋಡಲಾಗದೆ ಅತ್ತನಂತೆ. ಅವನ ಕಣ್ಣೀರಿನಿಂದ ಉದ್ಭವಿಸಿದ ಸ್ತ್ರೀ ಬೋಧಿಸತ್ವಳೇ ತಾರಾ. ಮಾನವರ ಕಷ್ಟಗಳನ್ನು ಪರಿಹರಿಸುವ, ದುಃಖ ನಿವಾರಿಸುವ ತಾರಾ (ಭವವನ್ನು ದಾಟಿಸುವಳೆಂಬ ಅರ್ಥದಲ್ಲಿ) ತಾಯಿಯಂತೆ ಸಂರಕ್ಷಿಸುವ ದೋಲ್ಮಾ–ಳ ಎಲ್ಲ ರೂಪಗಳನ್ನು ಪೂಜಿಸುವರಾದರೂ ಹಸಿರು ತಾರಾ ಮತ್ತು ಶ್ವೇತತಾರಾ ಹೆಚ್ಚು ಜನಪ್ರಿಯರು. ಜನ ಸಾಮಾನ್ಯರಿಗೂ ಇವರಿಬ್ಬರ ಸ್ತೋತ್ರ ಸೂಕ್ತಗಳು ಹೃದ್ಗತವಾಗಿರುತ್ತವೆ. ಹೆಣ್ಣು ತೋಳಗಳ ಮಾರುವೇಷದಲ್ಲಿದ್ದ ಇಪ್ಪತ್ತೊಂದು ಮಂದಿ ದೋಲ್ಮಾಗಳು ಬೌದ್ಧಗುರು 'ಗೊತ್ಸಾಂಗ್ ಪಾ'ನಿಗೆ ದಾರಿತೋರಿಸುತ್ತ ಈ ಪಾಸ್‌ಗೆ ಕರೆತಂದವರು ಇಲ್ಲಿನ ಹಿಮರಾಶಿಯಲ್ಲಿ ಐಕ್ಯರಾದರೆಂದು ಪ್ರತೀತಿ. ಈ ಪರ್ವತಾಗ್ರದಲ್ಲಿ ಧ್ವಜನೆಟ್ಟು ತೋರಣಗಳಿಂದಲಂಕರಿಸಿ ನಮಿಸುವರೆಲ್ಲ ಬೌದ್ಧ ಭಿಕ್ಷುಗಳು ಯಾತ್ರಿಗಳು.

ವಿಲಕ್ಷಣ ಪರಿಸರ, ವಿಲಕ್ಷಣ ಶರೀರ ಸ್ಥಿತಿ, ವಿಲಕ್ಷಣ ಮಾನಸಿಕ ಸ್ಥಿತಿ ಎಲ್ಲವೂ ಸೇರಿ, ಯಾವ ಪುರಾಣ ಕಥೆಯ ನೆರವೂ ಇಲ್ಲದೆಯೇ ಮನ ಅಲ್ಲಿ ಆಗ ಭೂಮಾನುಭೂತಿ ಪಡೆದಿತ್ತು. ಸುತ್ತಲಿನ ಪರಿಸರವನ್ನು ನೋಡುತ್ತಾ ಕಾಲದ ಅನಂತತೆಯನ್ನು, ವಿಶ್ವದ ವೈಶಾಲ್ಯವನ್ನು ಪರಿಭಾವಿಸುತ್ತಾ ನಿಂತಲ್ಲೇ ಒಂದು ಎರಡು ಎಷ್ಟೋಸಲ ತಿರುಗಿದ್ದೆ. 'ಬರೇ ಪ್ರದಕ್ಷಿಣೆಯೇ ಆಯಿತಲ್ಲ! ಬಗ್ಗಿ ನಮಸ್ಕರಿಸಿ ಇನ್ನು.' ಎಂದು ಸನಿಹದಲ್ಲಿದ್ದ ರಘುಪತಿಯವರು ಎಚ್ಚರಿಸಿದಾಗಲೇ ಬುದ್ಧಿಗೆ ಹೊಳೆದದ್ದು 'ಆತ್ಮಪ್ರದಕ್ಷಿಣಾ' ಎಂಬ ಪದದ ವಿಸ್ತೃತ ಅರ್ಥ. ಹಬ್ಬ ಹರಿದಿನಗಳಲ್ಲಿ ಪೂಜಾಸಮಯದಲ್ಲಿ ಹೇಳುವ ಆತ್ಮಪ್ರದಕ್ಷಣೆಯು ಆತ್ಮವು ವಿಶ್ವಾತ್ಮನಲ್ಲಿ ಒಂದಾಗಲು ಸಾಗುವ ರೀತಿಯೆಂಬ ಅರ್ಥ. ತತ್‌ಕ್ಷಣವೇ ಮನಃಪೂರ್ವಕ – ಅಲ್ಲಲ್ಲ– ತ್ರಿಕರಣ ಪೂರ್ವಕ ನಮಸ್ಕರಿಸಿದೆ. ಇದೇ ಮೊದಲ

ಸಾಷ್ಟಾಂಗ ನಮಸ್ಕಾರ, ಅರ್ಥವರಿತು ಸಂಕಲ್ಪಪೂರ್ವಕ ಮಾಡಿದ ಮೊದಲ ನಮಸ್ಕಾರ! ಜೀವನ ಪರ್ಯಂತ ಮಾಡುವ ಎಲ್ಲ ನಮಸ್ಕಾರಗಳೂ ಈ ಮೊದಲ ನಮಸ್ಕಾರದ ಅರಿವಿನಲ್ಲಿ ಆಗುವುದೆಂಬ ಆನಂದ – ಅಷ್ಟೇ ಸಾಕು ಕೈಲಾಸ ಪ್ರದಕ್ಷಿಣೆಯ ಪುಣ್ಯವಾಗಲು.

ಡೊಲ್ಮಾ-ಲಾ- ತುದಿಯಿಂದ ಅವರೋಹಣಕ್ಕೆ ತೊಡಗಿದಂತೆ, ಕೈಲಾಸ ಪರ್ವತಕ್ಕಂಟಿದಂತೆ ಕಂಡು ಬಂದಿತು ದೇವಗನ್ನಡಿಯಂತಿದ್ದ ಗೌರಿ ಕುಂಡ. ಬೌದ್ಧರು ಹೆಸರಿಸುವಂತೆ 'ಥುಕಿ ಜೆಂಗ್ ಬೊ'. ಅಂಡಾಕಾರದ ಈ ಕುಂಡದ ಬಣ್ಣ ತಿಳಿಹಸುರಿನಿಂದ ಕಡು ಪಚ್ಚೆಯವರೆಗೆ. ಅಂಚಿನಲ್ಲಿ ಬೆಳ್ಳಿಕಟ್ಟು. ನೋಡಲು ಬಲು ಅಂದವಾಗಿದ್ದ ಕುಂಡದ ಬಳಿಗೆ ಹೋಗಲು ಸುಮಾರು ನಾನೂರು ಅಡಿಗಳಷ್ಟು ಕೆಳಗಿಳಿದು ಹೋಗಬೇಕಿತ್ತು. ಮತ್ತೆ ಮೇಲೇರುವಾಗಿನ ಸುಸ್ತನ್ನು ನೆನೆಸಿಕೊಂಡು ಇಳಿವ ಯೋಚನೆ ಕೈಬಿಟ್ಟೆವು. ಅಲ್ಲದೆ ಆ ವೇಳೆಯಲ್ಲಿ ಪರ್ವತದ ಮೇಲ್ಭಾಗದಿಂದ ಸಿಡಿದು ಕೆಳಗೆ ಬೀಳುತ್ತಿದ್ದ ಶಿಲಾ ಖಂಡಗಳು 'ಇಳಿದು ಬಂದರೆ ನಿಮ್ಮ ತಲೆ ಸಾವಿರ ಹೋಳಾದೀತು' ಎಂದು ಎಚ್ಚರಿಸಿದವು. ಗಾಳಿ ಬೀಸಿ ಬೀಸಿ ನಿಮ್ನಮಧ್ಯವುಂಟಾಗಿದ್ದ ಪರ್ವತಭಾಗ ಸದ್ದನ್ನು ಪ್ರತಿಧ್ವನಿಸುತ್ತಿದ್ದು, ಬಂಡೆ ಸಿಡಿದ ಸದ್ದು, ತುಂಡುಗಳು ಉರುಳುವ ಸದ್ದು, ನೀರಿಗೆ ಬೀಳುವ ಸದ್ದು, ಎಲ್ಲವೂ ಮೂರು ಪಟ್ಟಾಗಿತ್ತು. ನಡುಕ ತರುವ ರುದ್ರಭೂಮಿಯಾಗಿತ್ತು. ದುಡ್ಡಿನ ಆಸೆ ತೋರಿಸಿದರೂ ಟಿಬೆಟೀ ತಂಡದವರು ಕೆಳಗಿಳಿದು ಗೌರಿಕುಂಡದ ನೀರನ್ನು ತರದಾದರು. ದೃಶ್ಯಗಳನ್ನು ಸೆರೆಹಿಡಿಯಲು ಕ್ಯಾಮರಾ ತಂದಿದ್ದೆನಾದರೂ ಶ್ರವ್ಯ ಸಂಗತಿಗಳನ್ನು ಸೆರೆಹಿಡಿಯಲು ಟೇಪ್ ರೆಕಾರ್ಡರ್ ತರದೆ ತಪ್ಪು ಮಾಡಿದ್ದೆ. ಯಾಕ್ ಹೊಟ್ಟೆಯೊಳಗಿಂದ ಹೊರಡುವ ಹುಂಕಾರ, ಬಂಡೆಯ ಒಳಗೇ ಗುಳುಗುಳನೆ ಹರಿಯುವ ನೀರಿನ ಸದ್ದು, ಗೌರಿಕುಂಡದ ಶಿಲಾ ಸ್ಫೋಟ – ಎಲ್ಲವೂ ಬೇರೆಲ್ಲೂ ಕೇಳಸಿಗದ ಶ್ರವ್ಯ ಕೌತುಕಗಳಾಗಿದ್ದವು. ಗೌರಿಯು ಕುಂಡದಲ್ಲಿ ಸ್ನಾನಕ್ಕಿಳಿದಿದ್ದಾಗ ಗೌರಿಪುತ್ರನಿಗೂ ಗೌರಿವಲ್ಲಭನಿಗೂ ನಡೆದ ಲಟಾಪಟಿಯ ಮರುಶ್ರವಣವಾದಂತಿತ್ತು ಗೌರಿಕುಂಡದಲ್ಲಿನ ಸದ್ದು.

ಸ್ನೋಲ್ಯಾಗ್ರಳು ನಡೆದು ಅದೃಶ್ಯರಾದ ಜಾಡನ್ನೇ ಹಿಡಿದು ಇಳಿಯತೊಡಗಿದೆವು. ಮುನ್ನೂರು ಅಡಿ ಅಗಲಕ್ಕೆ ಹರಡಿ ಕೆಳಗೆ ಹರಿದು ಹೆಪ್ಪಾಗಿದ್ದ ಹಿಮ ಪ್ರವಾಹವನ್ನು ದಾಟಲು ಅದರ ಮೇಲೆ ಮೂಲೆಯಾಗಿ ಅರ್ಧ ಕಿ.ಮೀ ಜಾರುತ್ತಾ ನಡೆದು ಕೈಲಾಸದ ಪೂರ್ವೋತ್ತರ ದಿಕ್ಕಿನಿಂದ ಪೂರ್ವಕ್ಕೆ ತಿರುಗಿದ್ದೆವು. ನಾವು ಮನುಜರು ಧರೆಗೆ ಇಳಿಯುತ್ತ ಹೋದಂತೆ ಇಕ್ಕೆಲದ ಪರ್ವತಗಳು ಆಗಸಕ್ಕೆ ಏರಿದ್ದವು. ಅಲ್ಲಿ ತಮ್ಮ ಬಾವುಟವನ್ನು ಹಾರಾಡಿಸಿದ್ದವು.  ಎರಡು ಕಿ.ಮೀ ದಾರಿಯಲ್ಲಿ ಎರಡುವರೆ ಸಾವಿರ ಅಡಿಗಳಷ್ಟು ಕೆಳಗಿಳಿದು ಲ್ಹಾಮ್ ಛುಖೀರ್ ಬಯಲನ್ನು ಮುಟ್ಟಿದೆವು. ಡೊಲ್ಮಾ ಗಿರಿಯ ಮೇಲೆ ನಮ್ಮನ್ನು ಇಳಿಸಿ ಮುಂದೆ ಸಾಗಿಹೋಗಿದ್ದ ಯಾಕ್ ಮಂದೆಯನ್ನು ಸೇರಿಕೊಳ್ಳಲು ಇನ್ನೂ ಒಂದು ಕಿ. ಮೀ ನಡೆದು ಜಾಂಗ್‌ಛು ಹೊಳೆಯನ್ನು ಎರಡು ಬಾರಿ ದಾಟಬೇಕಿತ್ತು. ಇಲ್ಲವೇ ಪರ್ವತದ ಮೇಲಿನಿಂದ ಕೆಳಗುರುಳಿ ಬಿದ್ದಿದ್ದ ಮೂರು ಫರ್ಲಾಂಗ್ ಅಗಲದ ಕಲ್ಬಂಡೆಗಳ ಹೊಳೆಯನ್ನು ದಾಟಬೇಕಿತ್ತು. ಎರಡೂ ಕಷ್ಟಕರವೇ. ಸ್ವಲ್ಪ ವಯಸ್ಸಾದವರು ನೀರ ಹೊಳೆಗೆ ಹೆದರಿ ಕಲ್ಲು ಬಂಡೆಗಳನ್ನು ದಾಟಲು ತೊಡಗಿದ್ದರು. ದೊಡ್ಡದೊಡ್ಡ ಕಲ್ಲುಗಳ ಮೇಲೆ ಹೆಜ್ಜೆಯಿಡುವಾಗ ಅದೇನಾದರೂ ಅಲುಗಾಡಿದರೆ ಆಯತಪ್ಪಿ ಬೀಳುವ ಸಂಭವ. ಕುಕ್ಕರಿಸಿದ್ದಂತೂ ಅನೇಕಬಾರಿ ಆಯಿತಂತೆ. ನಾವು 'ಧೈರ್ಯವಂತ'ರು ನೀರಿನ ಹೊಳೆದಾಟಿದವರು ಬೇಗನೇ ಯಾಕ್‌ನ ಮೈದಾನವನ್ನು ತಲುಪಿದ್ದೆವು.

ಅರ್ಧಗಂಟೆಯ ವಿರಾಮ ಪಡೆದೆವು.

ದೇಹದಡಿ ಮರಳಹಾಸು, ತಲೆಯ ಕಡೆ ಕೈಲಾಸದಿಬ್ಬ, ಕಾಲಕಡೆ ಜುಳುಜುಳು ಸದ್ದಿನ ಜಾಂಗ್‌ಛು ಹೊದೆಯಲು ಕಡು ನೀಲಿ ಆಗಸ. ಕಣ್ಣೆದುರು ಹೊಳೆಯ ಆಚೆಯ ದಡದ ಓರಿಬೆಟ್ಟದ ರಂಗ ಮಂಚ. ಯಾಕ್ ತಂಡದವರು ಹಾಡುತ್ತಿದ್ದ ಅಪರಿಚಿತ ತಾನ. ಎಲ್ಲವೂ ಮತ್ತೇರಿಸುತ್ತಿತ್ತು. ಸುತ್ತಲಿನ ಪರಿಸರ ನನ್ನನ್ನು ಹಿಮಾಲಯದ ಸೃಷ್ಟಿಯ ಕಾಲಕ್ಕೆ ಏಳುಕೋಟಿ ವರ್ಷಗಳ ಹಿಂದಕ್ಕೆ ಜಾರಿಸಿತ್ತು. ಹೆಚ್ಚೆಂದರೆ ೨೫೦೦ ಅಡಿಗಳ ಭೂಮಟ್ಟದಲ್ಲಿ ವಾಸಿಸುವ ನಾವು ಬಯಲು ದೇಶದವರು ಕಂಡಿದ್ದ ಪ್ರಕೃತಿ ಮಾಮೂಲಿ ಹಸುರುಡುಗೆಯುಟ್ಟು ವಿವಿಧ ಜೀವ ಜಂತುಗಳೊಡನೆ ಕೂಡಿದ್ದ ಪ್ರಕೃತಿ ಇಲ್ಲಿ ತನ್ನ ಹುಟ್ಟುಡುಗೆಯಲ್ಲಿ ನಿಂತಿದ್ದಳು. ತೆರೆಮರೆಯ, ಸೃಷ್ಟಿಯಕಾಲದ ಅವಳ ರೂಪವನ್ನು ಸ್ವಭಾವವನ್ನು ಪರಿಭಾವಿಸುತ್ತಿದ್ದಾಗಲೇ ಎದುರಿಗೆ ಹೊಳೆಯ ಆಚಿನ ದಂಡೆಯ ಬೆಟ್ಟದ ಮಗ್ಗುಲಲ್ಲಿ, ಹಳದಿ ಕೊಡೆ ಹಿಡಿದು ನಡೆದಿದ್ದ, ಬೌದ್ಧ ಭಿಕ್ಷುಣಿಯರ ಮಠದ ಮುಖ್ಯೋಪಾಧ್ಯಾಯಿನಿ ಹಾಗೂ ಅವರ ಹಿಂದೆ ಮುಂದೆ ಹತ್ತು ಮಂದಿ ಯುವಸನ್ಯಾಸಿನಿಯರು ಸಾಲುಹಿಡಿದು ನಡೆದು ಹೋದರು. ಹತ್ತಿರದ ಗೊಂಪಾದಲ್ಲಿ ನಡೆಯಲಿದ್ದ ಹಿರಿಯ ಗೇಶೆ ಲಾಮಾವೊಬ್ಬರ ಧರ್ಮಪ್ರವಚನ ಕೇಳ ಹೊರಟವರು. ಮನವು ಕಾಲದ ಏಣಿಯಲ್ಲಿ ಏರುತ್ತಾ ಕ್ರಿ.ಶ. ಹತ್ತನೆಯ ಶತಮಾನಕ್ಕೆ ಬಂದು ನಿಂತಿತು. ಅಂದು ನಡೆವಿರಬಹುದಾದ ಧಾರ್ಮಿಕ ಕ್ರಾಂತಿಯನ್ನು ಊಹಿಸುತ್ತಿತ್ತು. ಕಲ್ಲು ರಾಶಿಯನ್ನು ದಾಟಿಬಂದ ಯಾತ್ರಿಗಳು ಪಕ್ಕದಲ್ಲಿ ಬಂದು ಕುಳಿತು ಪಾನೀ – ಪಾನೀ ಎಂದು ಒರಲಿಕೊಂಡಾಗಲೇ ಇಪ್ಪತ್ತನೆಯ ಶತಮಾನಕ್ಕೆ ಇಂದಿಗೆ ಹತ್ತಿ ಬಂದೆ.

ಕೈಲಾಸ – ಮಾನಸ ಪ್ರದೇಶದ ಪ್ರಕೃತಿ ಸಾಮಾನ್ಯನ ಮನಸ್ಸಿಗೆ ಕವಿ ಮನದ ರೆಕ್ಕೆಗಳನ್ನು ಕಟ್ಟಿದರೆ ಕವಿಮನ ಪಕ್ಷಿಗೆ ಮತ್ತೆರಡು ರೆಕ್ಕೆ ಮೇಲಾಗು ಕಣ್ಣುಕೊಟ್ಟು ವಿಶ್ವಕವಿ ಬ್ರಹ್ಮನೊಡನೆ ಸೆಣಸು ಎನ್ನುವಳು. ಹಾರುವ ಮನವಿರಬೇಕಷ್ಟೆ. ಇಲ್ಲದಿದ್ದರೆ ಇಲ್ಲಿನ ಪ್ರಕೃತಿ ಬರಡಾಗಿ, ಡಾಕಿನಿಯಾಗಿ ಕ್ರೂರ ಪರಿಸರಕ್ಕೆ ಒತ್ತಿಹಿಡಿದು ಹಿಪ್ಪೆ ಮಾಡುತ್ತಾಳೆ. 'ಇದು ಶಕ್ತಿಯ ನಾಡು ಶಾಕ್ತೇಯರ ಬೀಡು. ಮತ್ತೊಮ್ಮೆ ಇಲ್ಲಿಗೆ ಬಂದೀಯೆ ಎಚ್ಚರ!' ಎಂದು ಹೆದರಿಸುತ್ತಾಳೆ.

ಉಳಿದ ಹತ್ತುಹನ್ನೆರಡು ಕಿ.ಮೀ ದಾರಿಯನ್ನು ಯಾಕ್ಸವಾರಿ ಮಾಡುತ್ತ ವಾಲಿಕೊಂಡು ಜೂಗರಿಸುತ್ತಾ, ಇಳಿಸಿರೆಂದು ಗೋಗರೆಯುತ್ತಾ ಕ್ರಮಿಸಿದ್ದೆವು. ಮುಕ್ಕಾಲು ಟನ್‌ಗಿಂತಲೂ ಭಾರೀ ತೂಕವಿದ್ದ ಯಾಕ್ ಜರುಗುವ ಮಣ್ಣಿನ ಗುಡ್ಡಗಳ ಕಾಲುದಾರಿಯಲ್ಲಿ ನಡೆಯುವಾಗ ಕೆಳಗೆ ಜಾರುತ್ತಿದ್ದ ರೀತಿಯಲ್ಲಿ ನಾವು ಗಟ್ಟಿನೆಲ ಮುಟ್ಟುವುದೆಂದಿಗೆ ಎನಿಸಿತ್ತು. ಒಂದು ಯಾಕ್‌ನ ಬೆನ್ನ ಮೇಲಿದ್ದ ಸಾಮಾನಿನ ಹೊರೆ ಜಾರಿ ಅದರ ಹೊಟ್ಟೆಯಡಿಗೆ ನೇತಾಡಿದ ಪ್ರಸಂಗ, ಹಾಗೆ ಜಾರಿ ಬಂದ ಸಾಮಾನಿನ ಮೂಟೆಯನ್ನು ಎಳೆದಾಡಿದಾಗ ಗಂಟು ಬಿಚ್ಚಿ ಒಳಗಿದ್ದ ಸಾಮಾನುಗಳು ಚೆಲ್ಲಾಡಿ ಕೆಳಗುರುಳಿಕೊಂಡ ಫಜೀತಿ, ಬಿಚ್ಚಿಹೋಗಿದ್ದ ಮೂಟೆಯಲ್ಲಿ ಸಾಮಾನುಗಳನ್ನು ಮತ್ತೆ ತುರುಕಿ ಗಂಟಿಕ್ಕಿ, ಎಗರಾಡುವ ಯಾಕ್ ಮೇಲೆ ಬಲವಂತದಲ್ಲಿ ಹೇರಿ ಹಗ್ಗ ಬಿಗಿದ ಸುದೀರ್ಘ ಕಲಾಪ, ಇವೆಲ್ಲವನ್ನು ಇಂಥದೇ ಮತ್ತೊಂದು ಯಾಕ್ ಮೇಲೆ ಕುಳಿತು ನೋಡಿದರೂ ಭಯದಿಂದ ಕೆಳಗೆ ಬೀಳದೆ ಮುಂದುವರಿದ ಸಂದರ್ಭ ಇಂದು ನಗೆತರುವುದಾದರೂ ಅಂದು ಆತಂಕ ಕೊಟ್ಟ ಸಂಗತಿಗಳು.

ಕಡೆಯ ೨-೩ ಕಿ.ಮೀ ದಾರಿಯನ್ನು ಕಾಲಿಗೆ ಶ್ರಮವಾದರೂ ಜೀಕುವ ಭಯವಿಲ್ಲದ ನಡಿಗೆಯಲ್ಲಿ ಮುಗಿಸಿ ಜುತುಲ್ ಪುಕ್ ಕ್ಯಾಂಪ್ ತಲುಪಿದಾಗ ಕುಡಿದವರಂತೆ ತೂರಾಡುತ್ತಿದ್ದೆವು.

ಕ್ಯಾಂಪ್‌ನ ಕೋಣೆಯೊಳಕ್ಕೂ ಹೋಗದೆ ನೇರ ನದೀದಂಡೆಗೇ ಬಂದು ಅಡ್ಡಾದ. ಮನಸ್ಸು ಶರೀರ ಸಮಸ್ಥಿತಿಗೆ ಬರಲು ಅರ್ಧತಾಸೇ ಬೇಕಾಗಿತ್ತು. ನದಿದಂಡೆಯ ಮೈದಾನದಲ್ಲಿ ಮೈಚೆಲ್ಲಿ ಆಗಸಕ್ಕೆ ಮೊಗಮಾಡಿ ಅಂಗೈ ದಿಂಬಿನಲ್ಲಿ ತಲೆಯಿಟ್ಟಾಗಿನ ಸುಖ – ಸ್ವರ್ಗ ಸುಖ. ನೆಮ್ಮದಿ – ನಿರ್ವಾಣದ ನೆಮ್ಮದಿ.

ಯಾಕ್ ತಂಡದ ಮಹಿಳೆಯರು ಮಧ್ಯಾಹ್ನದಿಂದಲೂ ದಾರಿಯಲ್ಲಿ ಆಗಾಗ ಬೆಟ್ಟವೇರಿ ಒಂದರಿಂದ ಒಂದುವರೆ ಅಡಿ ಎತ್ತರದ ಹಸಿರು ಕುರುಚಲು ಗಿಡವನ್ನು ಕಿತ್ತು ಜೋಡಿಸಿಕೊಳ್ಳುತ್ತಿದ್ದರು. ಮೇವಿಗಾಗಿರಬೇಕೆಂಬ ಊಹೆ ತಪ್ಪಾಗಿತ್ತು. ರಾತ್ರಿಯ ಅಡುಗೆಯನ್ನು ಮಾಡಲು ಅದನ್ನು ಉರುವಲಾಗಿ ಬಳಸಿದ್ದರು. ಜೊತೆಗೆ ಮಾನಸದಡಿಯಲ್ಲಿ ಸಿಗುವ ತ್ಸೊಪೊದಂತೆಯೇ ಸುಗಂಧ ಬೀರುವ ಪಾಂಗ್ ಪೊ ಹುಲ್ಲನ್ನೂ ಒಟ್ಟುತ್ತಿದ್ದರು. ಸಂಸ್ಕೃತ ಸುಭಾಷಿತವೊಂದು ನೆನಪಾಯಿತು. (ಮಲಯೇ ಭಿಲ್ಲ ಪುರಂಧ್ರೀ ಚಂದನತರು ಕಾಷ್ಠಮಿಂಧನಂ ಕುರುತೇ.) ಇದೇ ಪಾಂಗ್ ಪೊ ಹುಲ್ಲನ್ನು ಭಾರತದ ಭೋಟಿಯಾಗಳು ಟಿಬೆಟ್ಟಿನಿಂದ ದುಡ್ಡು ಕೊಟ್ಟು ತರಿಸಿ ದೇವರ ಪೂಜೆಯಲ್ಲಿ ಧೂಪವಾಗಿ ಹಚ್ಚುತ್ತಾರೆ.

ಹಸಿರು ಹಸೀಗಿಡವು ಉರಿಯುತ್ತಿತ್ತು. ಕಾರಣ ಅದರಲ್ಲಿದ್ದ ತೈಲಾಂಶದ ಹೆಚ್ಚಳ. ಹುಲ್ಲು ಚಳಿಗಾಲದಲ್ಲಿ ಬದುಕುಳಿಯಲು ಕಂಡುಕೊಂಡ ದಾರಿ ರವಿಯ ಊರ್ಜವನ್ನು ತೈಲರೂಪದಲ್ಲಿ ಸಂಗ್ರಹಿಸಿಕೊಳ್ಳುವುದು. ಈ ಗಿಡದ ಜೊತೆಗೆ ಉರಿದ ದವನದ ಹುಲ್ಲಿನ ಹೊಗೆ ಟಿಬೆಟೀಯರ ಟೆಂಟಿನಲ್ಲಿರಬಹುದಾದ ಕೀಟಗಳನ್ನು ಹೊರಗೋಡಿಸಿತ್ತು.

ಸಂಜೆಯ ಸೂರ್ಯ ಪಡುವಣಕ್ಕಿಳಿದಿದ್ದಾಗ ಟಿಬೆಟೀ ತಂಡದಲ್ಲಿದ್ದ ನೇಪಾಳೀ ಮಹಿಳಾ ಸಂಸಾರದ ಸಾಯಂ ಸಂಧ್ಯಾ ನಡೆದಿತ್ತು. ಎಪ್ಪತ್ತರ ವೃದ್ಧೆ ಸೂರ್ಯನಮಸ್ಕಾರ ಮಾಡಿದ ನಂತರ ಅವಳ ಸೊಸೆ ಮತ್ತು ಮೊಮ್ಮಗ್ಗಳು ಅವಳಿಗೆ ನಮಸ್ಕರಿಸಿ ಗುಡಾರದೊಳಗೆ ನಡೆದರು. ಹೊರಗೇ ಕುಳಿತ ವೃದ್ಧೆಯ ಮಂತ್ರ ಪಠಣ ಮುಂದುವರೆದಿತ್ತು. ತುಸುದೂರದಲ್ಲಿ ಟಿಬೆಟೀ ವಯಸ್ಕನೊಬ್ಬ ಜಪಸರದಲ್ಲಿ ಮನವಿಟ್ಟು ಓಂ ಮಣಿ ಪದ್ಮೇಹುಂ ಜಪಿಸುತ್ತಿದ್ದ. ಇತರ ಯುವಕರು ನದಿಯಿಂದ ಗುಡಾರಕ್ಕೆ ನೀರು ಹೊತ್ತು ಗುಡುಗಾಡಿದ್ದರು. ಕೆಲವರು ನನ್ನಂತೆ ಮೈದಾನದಲ್ಲಿ ಹೊರಳಾಡಿದ್ದರು. ಖುಶಿಯಲ್ಲಿದ್ದರು. ಐದು ದಿನದಿಂದಲೂ ಟಿಬೆಟೀಯರ ಸಂಗಡವೇ ನಡೆದಿದ್ದರೂ ಇದೇ ಮೊದಲ ಸಂಜೆ ಅವರ ಗುಡಾರಗಳ ಬಳಿ ನಿಂತು ಅವರ ಕಾರ್ಯಕ್ರಮವನ್ನು ನೋಡಿದ್ದು. ಹಿಂದಿನೆಲ್ಲ ಸಂಜೆಗಳೂ ಸ್ವಚಿಂತನೆಯಲ್ಲಿ, ಸಹಯಾತ್ರಿಗಳೊಡನೆ ಪ್ರಕೃತಿ ವೀಕ್ಷಣೆಯಲ್ಲಿ ಅಥವಾ ಗೆಳತಿಯರೊಡನೆ ಒಲೆಯ ಮುಂದೆ ಅಡುಗೆ ಮಾಡುವಲ್ಲಿ ಕಳೆದು ಹೋಗಿತ್ತು. ಟಿಬೆಟೀ ಭಾಷೆ ಬಂದಿದ್ದರೆ ಎಲ್ಲ ಸಂಜೆಗಳನ್ನು ಅವರೊಡನೆ ಕಳೆದು ಅವರ ಜೀವನ ರೀತಿ ನೀತಿ ಕಷ್ಟ ಸುಖ ತಿಳಿಯಬಹುದಿತ್ತು. ಅನೇಕ ಮಾಹಿತಿಗಳನ್ನು ನೇರ ಸಂಗ್ರಹಿಸಬಹುದಿತ್ತು. ಈ ಭಾಷಾ ಕೊರತೆ ಕೊನೆಯವರೆಗೆ ನಿಂತು ಹೋಯಿತು.

ಲ್ಹಾ ಛುಗಿಂತಲೂ ಹೆಚ್ಚು ನೀರು ಹಾಗೂ ಆಳವಿದ್ದ ಜಾಂಗ್‌ಛು ನದಿಯ ಬಲದಂಡೆಯ

ಮೇಲೆ ಕೈಲಾಸ ಪರ್ವತದ ತಪ್ಪಲಿನಲ್ಲಿಯೇ ಪ್ರದಕ್ಷಿಣೆಯ ಕಡೆಯ ದಿನದ ದಾರಿ. ಡೋಲ್ಮಾ ಪರ್ವತದ ಹಿರಿಯ ಏರು ಭೂತಕಾಲಕ್ಕೆ ಸರಿದಿತ್ತು. ಈ ನೆಮ್ಮದಿಯಲ್ಲೇ ಬುದ್ಧಿಗೆ ಕೈಲಾಸದ ಪರಿಸರದ ಪರಿಚಯದ ಗುಂಗು ಹತ್ತಿತ್ತು. ಇಂದು ಸವೆಸಬೇಕಿದ್ದ ದಾರಿ ಕೇವಲ ಹನ್ನೆರಡು ಕಿ.ಮೀ ಎಂಬ ಸಮಾಧಾನ ಮಧ್ಯಾಹ್ನದ ಊಟಕ್ಕೆ ದಾರ್ಚೆನ್‌ಗೇ ತಲುಪುವೆವೆಂಬ ಸಿಹಿ ದೃಷ್ಟಿ ಎಲ್ಲರ ನಡಿಗೆಯನ್ನು ನಿಧಾನಗೊಳಿಸಿತ್ತು. ಆರಾಮದ ಗತಿಯಲ್ಲಿ ಸಾಗಿತ್ತು ಯಾತ್ರಿಗಳ ದಿಬ್ಬಣ.

ಹೆಜ್ಜೆ ಹೆಜ್ಜೆಗೂ ಕಾಣಬರುತ್ತಿದ್ದ ವಿಚಿತ್ರ ನಮೂನೆಗಳ ವರ್ಣಮಯ ಶಿಲೆಗಳನ್ನು ಆಯುತ್ತ, ವಿವಿಧ ಪ್ರಕಾರದ ಬಣ್ಣದ ಬಂಡೆಗಳನ್ನು ಕೈಯಿಂದ ಸವರುತ್ತಾ ನಡೆದಿದ್ದೆ. ನನ್ನ ಸಂಗಡವೇ ಬರುತ್ತಿದ್ದ ಟಿಬೆಟೀ ಯುವಕ ಮೋಲೊ (ಮೋರೊ? ಅದು ಅವನ ನಿಜನಾಮಧೇಯವೋ ಸಂಬಂಧ ಸೂಚಕ ಪದವೋ ಅಥವಾ ಹುಡುಗ – ಮಾಣೀ ಎಂಬತಹ ಸಂಬೋಧನಾ ಪದವೋ ಇಲ್ಲವೆ ಗೆಳೆಯರಿಟ್ಟ ಗುಣವಾಚಕವೋ–ಒಟ್ಟಿನಲ್ಲಿ ಹಾಗೆ ಕರೆದಾಗ ಹಿಂತಿರುಗಿ ನೋಡಿದರೂ ಕಣ್ಣಂಚಿನಲ್ಲಿ ತುಟಿಯ ಮೇಲೆ ನಗೆ ಕುಳಿತಿರುತ್ತಿತ್ತು. ಆ ಪದದ ಅರ್ಥ ನನ್ನ ಮಟ್ಟಿಗೆ ಅವನ ರಹಸ್ಯವಾಗಿತ್ತು) –ಶಾಲಂ ಶಾಲಂ ಎಂದೂ ಕೇಳತೊಡಗಿದಾಗ ಅದೇನೆಂದು ತಿಳಿಯುವ ನನ್ನ ಪ್ರಯತ್ನ ಅವನ ಗೆಳೆಯರನ್ನು ನಗೆಗಡಲಿಗಿಳಿಸಿತ್ತು. ಹಿಂದೆ ಬರುತ್ತಿದ್ದ ನೇಪಾಳೀ ಮಹಿಳೆಯನ್ನು ಕೇಳಿದಾಗಲೇ ಈ ಒಗಟಿನ ಉತ್ತರ ಸಿಕ್ಕಿದ್ದು. ಶಾಲಗ್ರಾಮ–ಸಾಲಿಗ್ರಾಮವನ್ನು ಆರಿಸಿಕೊಳ್ಳುವ ಸಲಹೆ ಕೊಟ್ಟಿದ್ದ ಮೋಲೋ.

'ಶಾಲಗ್ರಾಮ' –ಸಂಸ್ಕೃತ ಸಮಾಸಪದದ ಅರ್ಥ 'ಶಿಲೆಯಾದ ಕೀಟ' ಅಂದರೆ ಕೀಟದ ಪಳೆಯುಳಿಕೆ–ಫಾಸಿಲ್. ಕೀಟಗಳು, ಸಸ್ಯಗಳು, ಪ್ರಾಣಿಗಳು ಭೂ ಪದರದ ಭಾರದಿಂದ ಶಿಲೆಯಾಗುವುದನ್ನು ಬಹುಕಾಲದ ಹಿಂದೆಯೇ ಗುರುತಿಸಿದ ನಮ್ಮ ಪೂರ್ವಜರು ಅದಕ್ಕೆ ಕೊಟ್ಟ ಪಾರಿಭಾಷಿಕ ಪದವೇ ಶಾಲಗ್ರಾಮ. ಪಾಶ್ಚಾತ್ಯ ವಿಜ್ಞಾನಿಯ ವಿವರಣೆ ಭಾರತೀಯರಿಗೆ ಹೊಸದೇನಲ್ಲ. ಹಿಂದೂಗಳು ಈ ಕಲ್ಲುಗಳನ್ನು ವಿಷ್ಣುವಿನ ಪ್ರತೀಕವೆಂದು ಪೂಜಿಸುವುದು ಬಹುಶಃ ಮತ್ಸ್ಯಾವತಾರದ ಸಂಕೇತವಾಗಿರಬಹುದು. ಇಂತಹ ಸಾಲಿಗ್ರಾಮದ ಕಲ್ಲುಗಳು ಹಿಮಾಲಯದ ಅನೇಕ ಸ್ಥಳಗಳಲ್ಲಿ ದೊರೆಯುತ್ತವೆ. ಟಿಬೆಟ್‌ನ ಪರ್ವತ ಪ್ರದೇಶದಲ್ಲಿ ಸಿಕ್ಕುವ ಈ ಕಲ್ಲುಗಳನ್ನು ಟಿಬೆಟೀಯರು ಹುಡುಕಿ ತಂದು ಮಾರುತ್ತಾರೆ.

ಕೈಲಾಸ ಮಾನಸ ಪ್ರದಕ್ಷಿಣೆಯ ಹಾದಿಯಲ್ಲೇ ವಿವಿಧ ನಮೂನೆಯ ವಿವಧ ಬಣ್ಣಗಳ ಕಲ್ಲುಗಳು ನಮಗೆ ಸಿಕ್ಕವು. ಒಂದು ಜಾತಿಯ ಕಲ್ಲಿನೊಳಗೆ ಮತ್ತೊಂದು ಜಾತಿಯ ಕಲ್ಲು, ಜೇಡರ ಬಲೆಯಂತೆ ಬಿಳಿದಾರಗಳೆಳೆದಿದ್ದ ಬಣ್ಣ ಬಣ್ಣದ ಕಲ್ಲು, ವಿವಿಧ ಖನಿಜದ ಎಳೆಗಳಿದ್ದ ಕಲ್ಲು–ಇವುಗಳ ವೈವಿಧ್ಯಮಯ ಸೃಷ್ಟಿಯೂ ಹಿಮಾಲಯದ ಹುಟ್ಟು ಬೆಳವಣಿಗೆಯಲ್ಲಿ ಅಡಗಿರುವುದು.

ನೆಲದಲ್ಲೇ ನೆಟ್ಟಿದ್ದ ನನ್ನ ಗಮನವನ್ನು ಬೆನ್ನುತಟ್ಟಿ ಸೆಳೆದ ಮೋಲೊ ಎದುರಿನ ಬಯಲನ್ನು ಕೈಚಾಚಿ ತೋರಿಸಿದ. ಕಂಡು ಬಂದಿದ್ದು ನೀಲ ನೀರ ಹಾಸು ಪರಖಾ ಬಯಲಿನಿಂದಾಚೆಗಿದ್ದ ರಾಕ್ಷಸ ತಾಲ್. ನನ್ನೊಡಲಿಗೆ ಬನ್ನಿರೆಂದು ರಾವಣನ ಹೃದಯ ಕರೆದಿತ್ತು. ಅರ್ಧ ಗಂಟೆಯ ನಡಿಗೆಯಂತರದಲ್ಲಿ ಇದ್ದಂತೆ ತೋರಿದರೂ ಸುಮಾರು ೨೫. ಕಿ.ಮೀ ದೂರದಲ್ಲಿತ್ತು. ಈ ಪ್ರದೇಶದಲ್ಲಿನ

ಶುಭ್ರ ಹವೆಯು ವಿರಳವೂ ಆಗಿರುವುದರಿಂದ ಧೂಳಿನ, ಗಾಳಿಯ ದಟ್ಟ ಪರದೆಯಿಲ್ಲದೆ ಸೂರ್ಯನ ಬೆಳಕು ಪ್ರಖರವಾಗಿ ಬೆಟ್ಟಗುಡ್ಡಗಳು, ನದೀ–ಮೈದಾನಗಳು ಸರೋವರಗಳು ಊರು ಕಟ್ಟಡಗಳು, ಮುಗಿಲ ಮೋಡಗಳೂ ಕೂಡ ಬಹಳ ಹತ್ತಿರವಿರುವಂತೆ ತೋರುವುದು. ಅಲ್ಲದೆ, ಹೋಲಿಸಿ ಅಂದಾಜು ಮಾಡಲು ಯಾವುದೇ ಗಿಡಮರಗಳ ಸಹಾಯವಿಲ್ಲದೆ ದೂರವನ್ನು ಎತ್ತರವನ್ನು ಅಳೆಯುವುದು ದುಸ್ಸಾಧ್ಯ. ಬೆಳದಿಂಗಳು, ಆಕಾಶಗಂಗೆಯ ಬೆಳಕೂ ಕೂಡ ಹೆಚ್ಚು ಪ್ರಕಾಶಮಾನವೆನಿಸುವುದು.

ನೀರಿಗಂತೂ ಹೋಗಲಾರೆವೆಂದರಿತ ನಮ್ಮ ಆಸಕ್ತಿ ಕೆರಳಿಸಿದ ಸಂಗತಿಯೆಂದರೆ ದಾರಿಯ ಪಕ್ಕದಲ್ಲಿ ಅಲ್ಲಲ್ಲಿ ಪೇರಿಸಿಟ್ಟಿದ್ದ ಬಣ್ಣ ಬಣ್ಣದ ಕಲ್ಲುಗಳು ಅವುಗಳ ಮೇಲೆ ಕೆತ್ತಿದ್ದ'ಓಂ ಮಣಿ ಪದ್ಮೇಹುಂ' ಮಂತ್ರದ ಸಾಲು ಅಥವಾ ಅದರ ತುಣುಕುಗಳು. ಕೈಲಾಸಕ್ಕೆ, ಮಾನಸಕ್ಕೆ ಬರುವ ಬೌದ್ಧಯಾತ್ರಿಗಳು ಹರಕೆ ಸಲ್ಲಿಸಲು ಬುದ್ಧನಿಗೆ ಪೂಜೆ ಸಲ್ಲಿಸಲು ಮಂತ್ರಕೆತ್ತಿಸಿದ ಕಲ್ಲುಗ್ಗಳನ್ನು ಯಾತ್ರೆಯ ದಾರಿಯಲ್ಲಿಟ್ಟು ಬರುತ್ತಾರೆ. ಯಾತ್ರೆಗೆ ಬರಲಾಗದವರ ಕಲ್ಲುಗಳನ್ನೂ ಇಲ್ಲಿ ತಂದಿರಿಸುತ್ತಾರೆ. ಮುಂದಿನ ಜೀವನದ ಭಾರವನ್ನು ಎತ್ತುವ ಮನೋಬಲ ಪಡೆವ ರೀತಿಯಿದು. ಅಂತೆಯೇ ಇನ್ನೊಂದು ಸಂಪ್ರದಾಯ–ದನಗಾಹಿಗಳು ತಮ್ಮ ಕುರಿ, ಕುದುರೆ, ಯಾಕ್ ಪ್ರಾಣಿ ಸಂಪತ್ತಿನ ಕ್ಷೇಮಾಭಿವೃದ್ಧಿಗಾಗಿ ಬಲಿಕೊಟ್ಟ ಪ್ರಾಣಿಯ ಕೊಂಬನ್ನು ಹುಲ್ಲು ಗಾವಲಿನ ರಕ್ಷಣೆಗಾಗಿ ಬಯಲಿನಲ್ಲಿ ಬೆಟ್ಟದ ತಪ್ಪಲಿನಲ್ಲಿ, ಗೋಂಪಾಗಳೆದುರಿನಲ್ಲಿ ಮಂತ್ರದ ಕಲ್ಲುಗಳೊಂದಿಗೆ ಇರಿಸಿ ಹೋಗುವುದು. ಹಬ್ಬ ಉತ್ಸವದ ದಿನಗಳಲ್ಲಿ ಬಲಿಕೊಟ್ಟ ಪ್ರಾಣಿಗಳ ಕೊಂಬಗಳನ್ನೂ ಇಲ್ಲಿಗೆ ತಂದು ಸೇರಿಸುತ್ತಾರೆ.

ಟಕಲಾಕೋಟ್‌ನ ಮಂಡಿಯಲ್ಲಿ ಕುಳಿತು ವ್ಯಾಪಾರ ಮಾಡುತ್ತಲೇ ಜಪಸರವನ್ನು ತಿರುಗಿಸುತ್ತಿದ್ದ ಶೆಟ್ಟಿ, ಬೆನ್ನಲ್ಲಿ ಹೊರೆಹೊತ್ತು ಬಾಗಿ ನಡೆಯುತ್ತಿದ್ದರೂ ಕೈಲಿದ್ದ ಜಪಚಕ್ರದಲ್ಲಿ ಮನವಿಟ್ಟ ಹಳ್ಳಿ ಹೆಂಗಸು, ಬ್ರಹ್ಮಪುತ್ರ ನದಿಯ ದಡದಲ್ಲಿ ಮಂಡಿಯೂರಿ ಗ್ರಂಥ ಪಠಣದೊಂದಿಗೆ ಕೈಯಲ್ಲಿ ಚಕ್ರ ತಿರುಗಿಸುತ್ತಿದ್ದ ಭಿಕ್ಷು, ಗೊಂಪಾದ ಹೊರಜಗಲಿಯಲ್ಲಿ ಜೋಡಿಸಿದ್ದ ಮಂತ್ರ ಚಕ್ರಗಳನ್ನು ತಿರುಗಿಸಿ ಕಣ್ಣು ಹಣೆಗೊತ್ತಿಕೊಳ್ಳುತ್ತಿದ್ದ ಧಾರ್ಮಿಕ ಜನರು–ಬಹುಶಃ ಈ ಮಂತ್ರ ಪಠಣವೇ ಜನತೆಗೆ ಅಲ್ಲಿನ ಬಂಜರು ಭೂಮಿಯಲ್ಲಿ ದುರ್ಭರ ಜೀವನವನ್ನು ನಡೆಸುವ ಸಹನೆ ತಂದುಕೊಟ್ಟಿರಬೇಕು!

ಕಾಲುಗಳು ಕೈಲಾಸ ಪರ್ವತದ ಸುತ್ತ ಬರುತ್ತಿದ್ದರೆ ಕಣ್ಣುಗಳು ರಾವಣ ಹೃದಯವನ್ನು ತಡಕಾಡಿದ್ದವು. ಮನಸ್ಸು ಮಣಿ ಮಂತ್ರವನ್ನು ಪರಿಭಾವಿಸುತ್ತಿತ್ತು. ಬುದ್ಧಿ ಹಿಮಾಲಯ ಪ್ರದೇಶದ ಹುಟ್ಟನ್ನೇ ವಿಚಾರಿಸುತ್ತಿತ್ತು. ಈ ಸ್ಥಿತಿ ಹೆಚ್ಚು ಹೊತ್ತಿರಲಾರಂದತಾದದ್ದು ಹಸಿದ ಹೊಟ್ಟೆ ಕಾಲಿಗೆ ಚುರುಕು ಮುಟ್ಟಿಸಿದಾಗ, ದೂರದ ದಾರ್ಚೆನ್ ಕೋಟೆ–ಅಲ್ಲ–ಗೋಡೆ ಕಣ್ಣಿಗೆ ಬಿದ್ದಾಗ. ರಾವಿಯಂಗಳದ ಶಿಬಿರ ಅದೇ ಆದರೂ ಏನೋ ಹೊಸ ಬಗೆ–ಹಬ್ಬದ ಸಡಗರ ಇದ್ದಂತಿತ್ತು. ಕೋಟೆಯೊಳಗೆ ಬಂದಂತೆ ಗೊತ್ತಾಯಿತು ಈ ಸಡಗರ, ಹೊಸತನ ನಮ್ಮೊಳ್ಳಾಗಿದ್ದ ಬದಲಾವಣೆಯೆಂದು. ಎಲ್ಲರನ್ನೂ ಎಲ್ಲವನ್ನೂ ಹೊಸದಾಗಿ ನಿಚ್ಚಳವಾಗಿ ಕಾಣುವ ಪರಿಯರಿತ ಹೊಸತನವದು. ಮಾಂಧಾತ ಪರ್ವತ ಶಿಖರಗಳು, ರಾಕ್ಷಸತಾಲ, ಮಾನಸ ಸರೋವರ ಕೈಲಾಸ ಪರ್ವತಗಳು ತಂದು ಕೊಟ್ಟಿದ್ದ ಅನುಭಾವದ ಹೊಸ ಭಾವವದು.

ಆದಿ ಮಾನವನಿಂದ ಆಧುನಿಕ ಮಾನವನವರೆಗೆ ಏಕತಂತುವಾಗಿ ಹರಿದು ಬಂದಿರುವ

ಭಾವವೇ ಅನುಭಾವ–'ಮಿಸ್ಟಿಕ್ ಎಕ್ಸ್‌ಪೀರಿಯೆನ್ಸ್!' ಪರಿಸರದಲ್ಲಿನ ಭವ್ಯ ದೃಶ್ಯಗಳನ್ನು ನೋಡಿ ವಿಮೂಢನಾಗುವುದು. ಈ ಇಂದ್ರಿಯಾತೀತ ಅನುಭವವನ್ನು ಮತ್ತೆ ಮತ್ತೆ ಪಡೆಯಲು ಈ ಭವ್ಯ ಭಕ್ತಿಯನ್ನಾಗಿಸಿಕೊಳ್ಳಲು ಪ್ರಯತ್ನಿಸುವುದು. ಅದಕ್ಕಾಗಿ ದೇಗುಲ, ಪೂಜೆ ಎಂದು ಭವ್ಯವನ್ನು ಮಾನವೀಯ ಮಾಡುವುದು ಮಾನವನ ಮೂಲ ಸ್ವಭಾವದ ಒಂದು ಮುಖ. ನನ್ನೆಲ್ಲ ದೇಶ ವಿದೇಶ ಪರ್ಯಟನೆಗಳಲ್ಲಿ ಕಂಡ ಇಂತಹ ತಾಣಗಳೆಷ್ಟು! ಭಾರತ ಭೂಶಿರದಲ್ಲಿ ನಿಂತು ನೋಡಿದ ಅಗಾಧ ಜಲರಾಶಿಯ ನಿರಂತರ ತರಂಗಗಳ ನೀಲ ಅಖಂಡತೆ ಕಡಲ ಹೆದ್ದೆರೆಗಳು ಭಾರತ ಭೂಖಂಡವನ್ನೇ ತಳ್ಳುತ್ತಿರುವಂತ–ನಿಸರ್ಗ ಶಕ್ತಿಯ ಪರಿಚಯವಾದುದಿಲ್ಲಿ. ಸುಡಾನ್, ಈಜಿಪ್ಟಿನಲ್ಲಿ ಕಂಡಿದ್ದು ದಿಗಂತದವರೆಗೆ ಅವ್ಯಾಹತವಾಗಿ ಹರಡಿದ್ದ ಮರಳರಾಶಿ. ಸುಡು ಬಿಸಿಲಿನ ಝಳ ಹಾವಾಡಿದಂತೆ ನೆಲದಿಂದ ಮೇಲೇರಿ ಸೃಷ್ಟಿಸಿದ್ದ ಮರೀಚಿಕೆಯ ಮರಳುಗಾಡು ಕಾಲವೇ ಕಾಲ್ಮುರಿದು ಕುಳಿತಂತೆ. ಭೂಮಿ ಆಕಾಶ ಒಂದಾಗಿ ಹರಡಿದ್ದ ಬಿಸಿ ಬೆಳಕಿನ ರಾಶಿ. ಹಿಮಾಲಯದಲ್ಲಿ, ಸ್ವಿಟ್ಜರ್ಲೆಂಡ್‌ನಲ್ಲಿ ನೋಡಿದ್ದ ಪರ್ವತ ಪಂಕ್ತಿಗಳ ವನರಾಜಿಯ ಸಮೃದ್ಧಿ, ಸರ್ವವನ್ನೂ ಹೊಚ್ಚಿದ್ದ ಹರಿದ್ವರ್ಣದ ಜೀವಂತತೆ. ರವಿಯ ಊರ್ಜವನ್ನು ತಮ್ಮದಾಗಿಸಿಕೊಂಡಿದ್ದ ಹರಿತ್ ಶಕ್ತಿ! ಪೂರ್ವ ಆಫ್ರಿಕಾದಲ್ಲಿ ಪ್ರಾಣಿಗಳ ಆಡುಂಬೊಲವಾಗಿ ಬಿಚ್ಚಿಕೊಂಡಿದ್ದ ಬಯಲುಗಳು. ಒಂದನ್ನೊಂದು ಆಹಾರವಾಗಿ ಮಾಡಿಕೊಂಡ ಜೀವಜಾಲದ ಹಾಸುಹೊಕ್ಕಿನ ಬಯಲುಗಳು. ಪ್ರಾಣಿ ಮಾತ್ರದ ನಶ್ವರತೆಯ ಹಿನ್ನೆಲೆಯಾಗಿ ನಿರಂತರ ಹರಿದಿದ್ದ ಪ್ರಾಣ ಪ್ರವಾಹ. ಹಳತಾದುದನ್ನು ನೂಕಿಕೊಂಡು ಬರುವ ಹೊಸತು ಜೀವಗಳ ಪ್ರವಾಹದ ಶಾಶ್ವತತೆಯ ಅರಿವಾದುದಿಲ್ಲಿ. ಇವೆಲ್ಲ ನನ್ನನ್ನು ಮರುಚಿಂತನೆಗೆ ತೊಡಗಿಸಿದ ಅನುಭವಗಳೇ. ಇವೆಲ್ಲವನ್ನೂ ಮೀರಿದುದು ಕೈಲಾಸ ಮಾನಸ ಪ್ರದೇಶದಲ್ಲಾದ ಇಂದ್ರಿಯಾತೀತ ಅನುಭವ. ಆದಿ ಮಾನವ ಕಾಲದ ದಿಗ್ಭ್ರಮೆಯೇ ನನ್ನನ್ನು ಮೆಟ್ಟಿತ್ತು. ನನ್ನ ಆಧುನಿಕತೆಯನ್ನು ಪ್ರಶ್ನಿಸುವುದಿರಲಿ ನನ್ನಿರವನ್ನೇ ಜಗ್ಗಾಡಿಸಿ ಬಿಟ್ಟ ಅನುಭವವದು. ಹಳತಾಗಿದ್ದುದನ್ನು ತಳ್ಳಿಕೊಂಡು ಹೊಸತೊಂದು ತುಂಬಿಬಂದ ಅನುಭವ.

ನಡು ಮಧ್ಯಾಹ್ನ. ಅಡುಗೆಗೆಂದು ಸ್ಟೌ ಮೇಲೆ ನೀರಿಡಲು ಬಾಗಿದವಳ ಕಾಲ ಬಳಿ ಅಕ್ಕಿ ಕಾಳು ಚೆಲ್ಲಿದಂತಾಗಿ 'ಪೊಟ್ಟಣ ಒಡೆದು ಹೋಯಿತೆ!'ಎನ್ನುತ್ತಾ ಹಿಂತಿರುಗಿ ಕತ್ತೆತ್ತಿದೆ. ಕೈಲಿ ಅಕ್ಕಿ ಚೀಲ ಹಿಡಿದಿದ್ದ ನಿರ್ಮಲಾದೇವಿಯ ಗಮನವೆಲ್ಲಾ ಹೊಸ್ತಿಲ ಬಳಿ. ಚೆಲ್ಲಿದ್ದುದು ಮುತ್ತುಗಳು ನೀರಹನಿಮುತ್ತುಗಳು. ಬಿಸಿಲಿನಲ್ಲೇ ಮಳೆಯಾಗುತ್ತಿತ್ತು. ನೀರ ಹನಿಗಳು ಚಳಿಯಿಂದ ಗಟ್ಟಿಯಾಗಿ ಮುತ್ತುಗಳಾಗಿದ್ದವು. ಸಹಸ್ರ ಸಹಸ್ರ ನೀರಹಾರಗಳು ಕಡಿದು ಪೋಣಿಸಿದ್ದ ಮುತ್ತುಗಳು ಉದುರಿ ಉರುಳುರುಳಿ ನೆಲವೆಲ್ಲೆಲ್ಲ ಚೆಲ್ಲಾಡಿದವು ನೆಲಕ್ಕೆ ಬಿದ್ದೊಡನೆ ಪುಟಿಪುಟಿದು ಸದ್ದಿಲ್ಲದ ನರ್ತನ ನಡೆಸಿದವು. ಸೊಬಗಿನ ತೌರೂರು ಕೈಲಾಸದ ಸೊಬಗಿನ ಸುರಿಮಳೆಯನ್ನು ಹೊಸದಾಗಿ ನೋಡಲೆಂದು ಪ್ರಕೃತಿ ನಮಗೆ ನೀಡಿದ್ದ ವರವಿದು. ಭಾವುಕ ಮನದ ಆನಂದ ಕಣ್ಣಲ್ಲಿ ತುಳುಕಿತ್ತು. ಟಿಬೆಟ್ಟಿನ, ಅದರಲ್ಲೂ ಕೈಲಾಸ ಮಾನಸ ಖಂಡದ ಹವಾಮಾನವೇ ಹೀಗೆ. ಯಾವ ಮುನ್ಸೂಚನೆಯೂ ಇಲ್ಲದೆ ಬದಲಾಗಿ ಬಿಡುವ ರೀತಿ. ನಮ್ಮ ಪ್ರವಾಸದ ಜುಲೈ ತಿಂಗಳು ಬೇಸಿಗೆಯ ಕಾಲವಾದರೂ ದಿನದ ಉಷ್ಣಾಂಶ ೧೮ ಸೆ.ಗಿಂತ ಹೆಚ್ಚಗಿರಲಿಲ್ಲ. ಮೋಡ ಮುಚ್ಚಿಕೊಂಡಾಗ ಮತ್ತು ರಾತ್ರಿಯಲ್ಲಿ ಉಷ್ಣಾಂಶ ಇನ್ನೂ ಇಳಿದಿರುತ್ತಿತ್ತು. ಸೂರ್ಯನ ಬೆಳಕಿದ್ದರೂ ಕೈಲಾಸ ಮಾಂಧಾತ ಶಿಖರಗಳು ಮೋಡಗಳ ಹಿಂದೆ ಅಡಗಿ ನಮ್ಮೊಡನೆ ಕಣ್ಣುಮುಚ್ಚಾಲೆಯಾಡುತ್ತಿದ್ದವು. ಗಳಿಗೆಗೊಮ್ಮೆಯೆಂಬಂತೆ ಹವೆ ಬದಲಾಗಿ

ಬಿಡುತ್ತಿತ್ತು. ಈಗ ಚುರುಗುಟ್ಟುವ ಬಿಸಿಲಿನಲ್ಲಿ ಮೈ ಬೆವೆತರೆ ಮರುಗಳಿಗೆಯೇ ಮೋಡ ಕವಿದು ತಣ್ಣನೆಯ ಗಾಳಿ ಬೀಸಿ ಬರುತ್ತಿತ್ತು. ಇದ್ದಕ್ಕಿದ್ದಂತೆ ತುಂತುರು ಮಳೆ ಇಲ್ಲ ಆಲಿಕಲ್ಲು ಮಳೆ. ಬಿಸಿಲಿದ್ದಂತೆಯೇ ಧಾರಾಕಾರದ ಮಳೆಯೂ ಒಮ್ಮೆ ಆಗಿತ್ತು. ಅರ್ಧ ಗಂಟೆಯಲ್ಲಿ ಮತ್ತೆ ಶಾಂತಿ!

ಮಾನಸ ಪರಿಯನರಿತವರಾರು?
ಮೋಡವಿಲ್ಲದೆಯೇ ಹಿಮಸುರಿವುದಿಲ್ಲಿ!

ಒಂದೇ ಕಾಲದಲ್ಲಿ ನಮ್ಮ ಬಳಿ ಬಿಸಿಲಿದ್ದರೆ ೧/೨ ಕಿ.ಮೀ ದೂರದಲ್ಲಿ ಮಳೆ ಇಲ್ಲವೆ ಮೋಡ ಕವಿದ ವಾತಾವರಣ. ಕೈಲಾಸ ಶಿಖರವು ಬೆಳ್ಳಿಯ ಗುಮ್ಮಟವಾದರೆ ದೂರದ ಮಾಂಧಾತವು ತಾಮ್ರದ ಕವಚ ಹೊದ್ದಿರುತ್ತಿತ್ತು. ದೂರದ ಬೆಟ್ಟಗಳು ಕರೀಮೋಡಗಳ ಕಂಬಳಿ ಹೊದ್ದಿರುತ್ತಿದ್ದವು, ಇಲ್ಲವೆ ಮುಳುಗುವ ಸೂರ್ಯನ ಕೆಂಪು ತಳೆದು ಅಗ್ನಿ ಶಿಖರಗಳಾಗುತ್ತಿದ್ದವು. ಒಮ್ಮೆ ಬೆಚ್ಚನೆಯ ಗಾಳಿ ಸುಳಿದು ಸ್ವಾಗತಿಸಿದರೆ ಒಮ್ಮೊಮ್ಮೆ ಶೀತ ಗಾಳಿ ಬೀಸಿ ಬಡಿದು ಮುದುಡಿಕೊಳ್ಳುವಂತೆ ಮಾಡುತ್ತಿತ್ತು. ಈ ಪ್ರದೇಶದ ಆಕಾಶವೋ ತನ್ನೊಡೆಯ ನೀಲಕಂಠನಂತೆಯೇ ಕಡು ನೀಲಿ. ತನ್ನ ಗೆಳೆಯ ನೀಲಕಂಠ ನವಿಲಿನ ಕುತ್ತಿಗೆಯ ಬಣ್ಣದಂತೆ ಅಪರೂಪದ ಕಡು ನೀಲಿ. ಇಲ್ಲಿನ ಪ್ರಕೃತಿಯೇ ಹೀಗೆ!ಯಾರೇ ಇಲ್ಲಿಗೆ ಬಂದರೂ ತನ್ನ ಮೋಡಿಯ ಬಲೆ ಬೀಸಿ ಮನವನ್ನು ಕಟ್ಟಿಹಾಕುತ್ತಾಳೆ (ಕವಿ ಕಲೆಗಾರ, ವಿಜ್ಞಾನಿವೈದ್ಯ, ಆಸ್ತಿಕ-ನಾಸ್ತಿಕ, ಲೌಕಿಕ, ಆಧ್ಯಾತ್ಮಿ ಯುವಕ-ವೃದ್ಧ ಸ್ತ್ರೀ ಪುರುಷ- ಯಾರೇ ಆದರೂ ಇವಳ ಸಮ್ಮೋಹನಾಸ್ತ್ರಕ್ಕೆ ಬಲಿಯಾಗಲೇ ಬೇಕು)

ಅಮೂರ್ತ ಭಾವನೆಗಳಿಗೆ, ನಿಗೂಢನಂಬಿಕೆಗಳಿಗೆ, ಅಭೇದ್ಯ ಶ್ರದ್ಧೆಗೆ ಭೌತಿಕ ನೆಲೆಯೊಂದಿದ್ದರೆ ಅದು ನಿಶ್ಚಯವಾಗಿ ಟಿಬೆಟ್ಟಿನ ಪಶ್ಚಿಮಕ್ಕಿರುವ ನ್ಗಾರಿ ಜಿಲ್ಲೆ! ಶಾಂತಿಯೇ ನೆಲೆಗೊಂಡ, ಬಿಡುಬೀಸಾದ ಸೀಮೆ, ಮೇಲೆ ನೀಲಾಕಾಶ ಸುತ್ತಲೂ ಹಿಮಾವೃತ ಶಿಖರಗಳು, ಸೌಂದರ್ಯವೇ ಮಡುಗಟ್ಟಿದ ಸರೋವರಗಳು-ಶ್ರೇಷ್ಠ ವಿಚಾರಧಾರೆಗಳನ್ನು ಭಟ್ಟಿಯಿಳಿಸಿರುವ ಕ್ಷೇತ್ರವಿದು ಕೈಲಾಸ ಮಾನಸ ಖಂಡ. ಇಲ್ಲಿನ ಶುಭ್ರ ಹವೆಯಲ್ಲಿ ಯಾತ್ರಿಗಳೊಂದಿಗೆ ಹೆಜ್ಜೆ ಹಾಕುತ್ತಾ ಅಪ್ರಯತ್ನವಾಗಿ ಮಣಿ ಮಂತ್ರವನ್ನು ಕೇಳುತ್ತ, ನೋಡುತ್ತ ಸಾಗಿದಂತೆ ಕಡು ನಾಸ್ತಿಕನೂ ಶಿಖರಗಳ ಶಿಖರ-ಕೈಲಾಸಕ್ಕೆ ತಲ ಬಾಗುವನು ನದಿಗಳ ಜನನಿ ಮಾನಸಕ್ಕೆ ನಮಿಸುವನು. ನಿಸರ್ಗಾರಾಧಕನಲ್ಲದಿದ್ದರೂ ಇಲ್ಲಿಯ ನಿಸರ್ಗಕ್ಕೆ ಮನಸೋತು ಅವಳ ಪ್ರೇಮಿಯಾಗುವನು. ಇಲ್ಲಿಯ ಸರಳ ಸರಸ ಹೃದಯದ ಜನರ ಸಹಜ ಆದರಾತಿಥ್ಯ-ಪುರಾಣ ಕಥೆ, ಹಾಡು, ಕುಣಿತ, ನಿರ್ಬಂಧ ಸ್ವರಧಾಟಿ ಎಲ್ಲವೂ ಆಗುಂತಕನನ್ನು ತಮ್ಮ ಜಾನಪದ ಕಂಬಳಿಯಲ್ಲಿ ಬೆಚ್ಚಗಾಗಿಸುತ್ತವೆ. ಇಲ್ಲಿಯ ಗುಡಿಗೋಪುರ, ಕೋಟೆ-ಪೇಟೆ, ಮನೆ ಮಠಗಳು ಒಂದೊಂದೂ ಚರಿತ್ರೆಯ ಪುಟಗಳಾಗಿ ಸಾಮಾನ್ಯನನ್ನು ಇತಿಹಾಸಕಾರನನ್ನಾಗಿಸುತ್ತವೆ. ಇಲ್ಲಿನ ನೆಲ-ಜಲ ಅಂಜುಬುರುಕನನ್ನೂ ಸಾಹಸಮಯ ಚಾರಣದಲ್ಲಿ ತೊಡಗಿಸುತ್ತದೆ.

ಜೇಬಿನಲ್ಲಿ ಹೆಕ್ಕಿಕೊಂಡ ಕಲ್ಲು ತುಣುಕುಗಳು, ಹೆಗಲ ಚೀಲದಲ್ಲಿ ತುಂಬಿಸಿ ಇಟ್ಟುಕೊಂಡ ಪವಿತ್ರ ಜಲದ ಕ್ಯಾನ್‌ಗಳು, ಕೈಚೀಲದಲ್ಲಿ ಕೊಂಡಿಟ್ಟುಕೊಂಡ ವಸ್ತುಗಳು ಕ್ಯಾಮರಾದಲ್ಲಿ ಸೆರೆಹಿಡಿದುಕೊಂಡ ದೃಶ್ಯಗಳು, ಇವೆಲ್ಲಕ್ಕಿಂತಲೂ ಶಾಶ್ವತವಾಗುಳಿವಂತಹುದು ನಮ್ಮ ಹೃದಯದಲ್ಲಿ ಆಯ್ದಿಟ್ಟುಕೊಂಡ ಸ್ನೇಹಜೀವಿಗಳೊಡನಾಟದ ಅನುಭವಗಳು ಅಂದು ನಮ್ಮ ಮೊಗದಲ್ಲಿ ಕಿರುನಗೆ

ತಂದ, ನಗೆ ಹೊನಲಾಗಿ ಹರಿದು ಪಕ್ಕೆ ನೋವು ತಂದ, ಅಚ್ಚರಿತಂದ ಕ್ಷಣಗಳು ಇಂದು ನನ್ನ ಲೋಕಾನುಭವದ ಖಜಾನೆಗೆ ಸೇರಿಸಿದ ಮೊಹರುಗಳಾಗಿವೆ. ಕೆಲವು ಸಂಗತಿಗಳಂತೂ ಮಾನವೀಯತೆ, ಸಹಬಾಳ್ವೆ, ಸರಳ ಜೀವನ ಶ್ರದ್ಧೆಯ ಕುರುಹುಗಳಾಗಿ ಮನದಲ್ಲಿ ಅಚ್ಚಳಿಯದಂತೆ ನೆಲೆಸಿ ಹೋದವು.

ಟಕಲಾಕೋಟ್‌ಗೆ ಮರಳುವ ಬಸ್ಸಿನಲ್ಲಿ ಕುಳಿತಾಗ ಮುಂದಿನ ಸೀಟಿನಲ್ಲಿದ್ದ ಯುವಕರಿಬ್ಬರು ತಮ್ಮ ಮನೆಯವರಿಗೆ ವಿದಾಯ ಹೇಳಿದರು. ಹೊರಗೆ ತಾಯಿಯ ಕೈಲಿದ್ದ ಮಗು ಅಪ್ಪನಿಗಾಗಿ ಕೈಚಾಚಿ ಅಳುವುದನ್ನು ಕಂಡ ತಾಯಿ ನಕ್ಕು ಗಂಡನಕಡೆಗೆ ಬೀರಿದ ಪ್ರೇಮ ಪೂರ್ಣ ನೋಟ - ಸವಿನೆನಪು. ಅಂತೆಯೇ ೧೮೦೦೦ ಅಡಿ ಎತ್ತರದ ದೋಲ್ಮಾ ಪಾಸ್‌ನಲ್ಲಿ ಎದುರಾದ ಯುವಕ, ಅವನ ಕೈಲಿದ್ದ ತಿಂಗಳಾಗದ ಎಳೆಯ ಮಗು ಮತ್ತು ಅವನ ಹಿಂದೆಯೇ ನಡೆದು ಬಂದ ಹಸಿ ಮೈಯ ಹುಡುಗಿ. ಅವರಿಬ್ಬರು ನಮ್ಮನ್ನು ನೋಡಿ ಕತ್ತು ಕೊಂಕಿಸಿ ಬೀರಿದ ಮುಗ್ಧ ನಗೆ! ಬಹುಶಃ ಹರಕೆ ಸಲ್ಲಿಸಲೆಂದು ಪವಿತ್ರ ಗಿರಿಯನ್ನು ಪ್ರದಕ್ಷಿಣೆ ಮಾಡುತ್ತಿದ್ದ ಶ್ರದ್ಧಾಳು ದಂಪತಿಗಳಿರಬೇಕು.

ಕೈಗೆ ಸಿಕ್ಕದೆ ಕೊಸರಾಡುತ್ತಿದ್ದ ಯಾಕ್‌ನ ಕೊಂಬುಗಳನ್ನು ಹಿಡಿದು ಜಗ್ಗಿ, ಅದರ ಮುಖವನ್ನು ನೆಲಕ್ಕೆ ಬಗ್ಗಿಸಿದ ಸಾಹಸ ಯುವಕನ ಮುಖದಲ್ಲಿ ಮೆರೆದ ಯೌವನೋತ್ಸಾಹದ ಕೆಂಪು – ಇವರು ಜೀವನದ ಎಲ್ಲ ಸಮಸ್ಯೆಗಳನ್ನು ಇದೇ ರೀತಿ ಮುಖಾಮುಖಿ ಎದುರಿಸುತ್ತಾರೆನಿಸಿತು. ಹಾಗೆಯೇ ಬೆಟ್ಟದ ಜಿಂಕೆಯನ್ನು ಹಿಡಿಯಲೆತ್ನಿಸಿ ಸೋತಾಗ ಸೋಲುಮುಖ ಹಾಕಿ ಕಪಿಸದೆ ಗಹಗಹಿಸಿ ನಕ್ಕು ನಮ್ಮನ್ನು ನಗೆಗಡಲಿನಲ್ಲಿ ತೇಲಿಸಿದ ಯುವಕರ ಧೋರಣೆ ಅನುಕರಣೀಯವೆನಿಸಿತು.

ಊಟಕ್ಕೆಂದು ಮೈದಾನದಲ್ಲಿ ವಿಶ್ರಮಿಸುತ್ತಿದ್ದಾಗ ತಮ್ಮ ಮಧ್ಯೆ ರೊಟ್ಟಿ, ಮಾಂಸದ ತುಣುಕುಗಳು, ತಿಂಡಿಗಳಿದ್ದ ಬಟ್ಟೆ ಚೀಲವಿಟ್ಟು ಅದರ ಸುತ್ತಲೂ ವರ್ತುಲಾಕಾರದಲ್ಲಿ, ಮೈಯನ್ನು ಹೊರಚಾಚಿ ಮಲಗಿದ್ದ ಏಳೆಂಟು ಜನ ಟಿಬೆಟೀಯರು ಹರಟುತ್ತಾ ಒಂದೊಂದೇ ತುಂಡನ್ನು ಬಾಯಿಗಿಟ್ಟು ಜಗಿಯುತ್ತಿದ್ದರು. ನಿಂತು ನೋಡಲು ಸೇವಂತಿಗೆ ಹೂವಿನಂತೆ ಮನೋಹರವಾಗಿ ಕಂಡು ಬಂದರು. ನಿಧಾನದಲ್ಲಿ ಎಲ್ಲರೊಂದಾಗಿ ಒಂದೇ ಚೀಲದಿಂದ ತಿಂದ ರೀತಿ ಸೌಹಾರ್ದತೆಯ ಕುರುಹಾಗಿತ್ತು.

ದಾರ್ಚೆನ್‌ನ ಅಂಗಡಿಯೊಂದರ ಒಡತಿಯೊಂದಿಗೆ ಕೈಸನ್ನೆಯಲ್ಲಿ ಮಾತನಾಡುತ್ತಿದ್ದಾಗ, ತಾವೂ ತಮ್ಮ ಮುರುಕು 'ಇಂಗ್ಲೀಷ್' ಜ್ಞಾನವನ್ನು ಪ್ರದರ್ಶಿಸಿದ 'ಯಜಮಾನರು' ಫೋಟೊ ತೆಗೆಯುವೆನೆಂದಾಕ್ಷಣವೇ ಕೂಡಲೆಂದು ತಲೆಯಾಡಿಸಿ, ಹೆಂಡತಿಯನ್ನು ತರುಬಿಕೊಂಡು ಒಳನಡೆದ ರೀತಿ ಅಚ್ಚರಿ ತಂದಿತ್ತು.

ಫೋಟೊ ತೆಗೆಸಿಕೊಂಡವರ ಪ್ರಾಣವನ್ನು ಛಾಯಾಚಿತ್ರ ಸೆರೆಹಿಡಿದು ಬಿಡುವುದರಿಂದ ಆ ವ್ಯಕ್ತಿ ಸಾವಿಗೆ ನಿಕಟವಾಗುತ್ತಾನೆ ಎನ್ನುವುದು ಇಲ್ಲಿಯ ಹಳ್ಳಿಗರ ನಂಬಿಕೆ. ಫೋಟೋ ಬಗೆಗಿನ ಭೀತಿಯ ಮತ್ತೊಂದು ಅನುಭವ ಜೈದಿಯಲ್ಲಾಯಿತು. ಅಪರಿಚಿತರ ಕಣ್ಣಿಗೆ ಬೀಳದಿರಲೆಂದು ದೇವರ ಕೋಣೆಯಲ್ಲಿ ಮಲಗಿಸಿದ್ದ ಆರು ತಿಂಗಳ ಮಗುವನ್ನು ನೋಡಲೆಂದು ಒಳಹೊಕ್ಕೆವು. ಹಿಂದೆಯೇ ನಮ್ಮನ್ನು ಗುದ್ದುತ್ತಾ ಬಂದ ಎಂಟು ವರ್ಷದ ಹುಡುಗ ತಂಗಿಯನ್ನು ನಮ್ಮಿಂದ ಮರೆ ಮಾಡಲು ಅದರ ಮೇಲೆಯೇ ಮಲಗಿದ. 'ನಿನ್ನದೂ ಫೋಟೊ ತೆಗೆಯುವೆ' ಎಂದು ಕ್ಯಾಮರಾ

ತೆಗೆದಾಗ ಅವನ ಮುಖದಲ್ಲಿ ಮೂಡಿದ ಕೋಪ- ಭಯ ನೋಡತಕ್ಕದಾಗಿತ್ತು. ಸ್ಸಾರಿ ಸ್ಸಾರಿ! ಎನ್ನುತ್ತಾ ಓಂದೆಗೆದೆವು ಸಭ್ಯರಂತಿಪ್ಪ ನಾವು!

ಕೈಲಾಸ ಪ್ರದಕ್ಷಿಣೆ ಬರುವಾಗ ಸಂಗಡದಲ್ಲೇ ನಡೆದಿದ್ದ ಟಿಬೆಟೀ ಯುವಕ ಮೋಲೋ ಕೈಲಾಸ ಶಿಖರವನ್ನು ತೋರಿಸಿ 'ಓಂ ನಂ ಶಿವಾ' ಎಂದು ಕೇಳಿದ. ನಾನು ನಕ್ಕು 'ಹರ ಹರ ಮಹದೇವ' ಎಂದು ಆ ಶಿಖರಕ್ಕೆ ಬೊಟ್ಟು ಮಾಡಿದೆ. ಮತ್ತೊಮ್ಮೆ 'ಓಂ ನಂ ಶಿವಾ' ಎಂದು ಗೋಣು ಹಾಕಿದ. ಜೈ ಶಿವ ಶಂಕರ, ಜೈ ಭೋಲೆನಾಥ, ಜೈ ಕೈಲಾಸ ಪತಿ ಮುಂತಾದ ಶಿವನಾಮಗಳನ್ನು ಹೇಳಿದಾಗಲೆಲ್ಲ ಅವನ 'ಓಂ ನಂ ಶಿವಾ' ಏರುದನಿ ಇಂದಿಗೂ ಕಿವಿಯಲ್ಲಿ ಧ್ವನಿಸುತ್ತದೆ.

ಕಿರುತೊರೆಯ ದಡದಲ್ಲಿ ಕುಳಿತು ಈರುಳ್ಳಿಯಂತಹ ಗಡ್ಡೆಗಳನ್ನು ನೀರಿನಲ್ಲಿ ತೊಳೆಯುತ್ತಿದ್ದ ಹಳ್ಳಿ ಹೆಂಗಸೊಬ್ಬಳು ನಾವು ಸಮೀಪಿಸುತ್ತಿದ್ದಂತೆ ಕತ್ತೆತ್ತಿ ನೋಡಿ ಮುಗುಳ್ನಕ್ಕು ತನಗಾಗಿ ತೊಳೆಯುತ್ತಿದ್ದ ಕಂತೆಯನ್ನು ನಮ್ಮೆಡೆಗೆ ಚಾಚಿ(ಕೊಡುಗೆಯಂತೆ) ತೆಗೆದುಕೊ ಎಂಬಂತೆ ಕೊಟ್ಟ ರೀತಿ, ಮನ ಮುಟ್ಟುವ ಸಜ್ಜನಿಕೆಯಾಗಿತ್ತು. ಹಳ್ಳಿಗರಲ್ಲಿ ಇನ್ನೂ ಉಳಿದುಕೊಂಡಿರುವ, ಕೊಟ್ಟು ತಿನ್ನುವ ಅಭ್ಯಾಸ ಇಲ್ಲೂ ಕಂಡು ಬಂದಿತು.

ಹೊಟ್ಟೆಪಾಡಿಗಾಗಿ ದಾರ್ಚೆನ್ ಶಿಬಿರದಲ್ಲಿ ಕೆಲಸಕ್ಕಿದ್ದ ಹುಡುಗಿಯರಿಬ್ಬರು ಸಂಜೆಗೆ ಕೋಣೆಯೊಳಗೆ ಬಂದು ಎದುರಿನ ಮಂಚದ ಮೇಲೆ ಕುಳಿತರು. ನಮ್ಮೊಡನೆ ಮಾತನಾಡಲು ೧೦-೧೫ ನಿಮಿಷ ಪ್ರಯತ್ನಿಸಿದರು. ಕಡೆಗೆ ನಗುತ್ತ ಕೈಕುಲುಕಿ ಕೊಟ್ಟ ಹಣ್ಣುಬೊಟ್ಟಿನ ಪ್ಯಾಕೆಟ್‌ನ್ನು ಸ್ವೀಕರಿಸಿ ಎದ್ದು ಹೋದರು. ತೆರೆದ ಮನಸ್ಸಿನ, ಬಿಚ್ಚು ಹೃದಯದ, ಸಂಭಾಷಿಸುವ ಸ್ವಭಾವದ ಯುವಾವಸ್ಥೆಯ ಮಾನವ ಸ್ವಭಾವದ ನಮೂನೆಯನ್ನು ತೋರಿಸಿದರು ಆ ಯುವತಿಯರು.

ಕೈ ಬೆರಳುಗಳಲ್ಲಿ ನೂರರ ಎಣಿಕೆಯ ವ್ಯಾಪಾರ ನಡೆಸಿದ್ದ ಮಹಿಳೆ ಚೌಕಾಸಿ ಮಾಡುತ್ತಾ 'ಕಡಿಮೆ ಬೆಲೆಗೆ ನನ್ನ ಕೊರಳು ಕೊಯ್ಯ ಬೇಡ' ಎಂದು ನಾಟಕೀಯವಾಗಿ ನಟಿಸಿ ನಮ್ಮ ಜೇಬು ಕೊಯ್ದ ಜಾಣೆ. ಕಡೆಯಲ್ಲಿ ಒಂದು ಕೆಂಪು ಮಣಿ ಸರವನ್ನು ಮುಫತ್ತಿಗೆ ಕೊಟ್ಟು, ಬಹಳ ಹಳೆಯ ಸ್ನೇಹಿತೆಯಂತೆ ಅಪ್ಪಿಕೊಂಡು, ಬೆನ್ನುತಟ್ಟಿ ನಯದಲ್ಲೇ ಟೋಪಿ ಹಾಕಿದ ಚತುರೆ, ನಿಜವಾಗಿಯೂ ಗೆಳತಿಯಾಗಿ ಹೋದಳು ನಮ್ಮೊಡನೆ ಭಾವಚಿತ್ರದಲ್ಲಿ ಮೂಡಿ ಬಂದು.

ಹಲವಾರು ನದಿಗಳು ಉಪನದಿಗಳು, ತೊರೆಗಳು ನೇಯ್ದ ಜಲಜಾಲವಿದ್ದರು ಬರಡಾಗಿ ತೋರುವ ನ್ಗಾರಿಜಿಲ್ಲೆಯ ಕೈಲಾಸ ಮಾನಸ ಪ್ರದೇಶ. ಈ ಬರಡಿನಲ್ಲಿಯೇ ತಮ್ಮ ಬದುಕನ್ನು ಕಂಡುಕೊಂಡ ಜೀವಜಾಲ. ಈ ಜೀವಜಾಲವನ್ನೇ ನಂಬಿ ತಮ್ಮ ಜೀವನರೀತಿಯನ್ನು ರೂಪಿಸಿಕೊಂಡ ಟಿಬೆಟೀ ಅಲೆಮಾರಿ ಜನಾಂಗ. ಈ ಅಲೆಮಾರಿಗಳಿಗೆ ಭೌತಿಕ ನೆಲೆ ಜೈವಿಕ ಆಸರೆಯೊಂದಿಗೆ ಸಾಂಸ್ಕೃತಿಕ-ಆಧ್ಯಾತ್ಮಿಕ ನೆಲೆಯನ್ನೂ ಕೊಟ್ಟ ಇಲ್ಲಿನ ಪ್ರಾಕೃತಿಕ ಪರಿಸರ. ಮಾನವ ಕುಲದ ಚರಿತ್ರೆಯನ್ನೇ ಮೊದಲ ಅಧ್ಯಾಯವನ್ನು ತೆರೆದು ಓದಿದಂತಾಗಿತ್ತು. ನಮ್ಮ ಮೂಲವನ್ನೇ ಹಿಂತಿರುಗಿ ನೋಡಿದಂತಾಗಿತ್ತು. ಈ ಪರಿಸರದಲ್ಲಿ, ಇಲ್ಲಿದ್ದ ಎಂಟು ದಿನಗಳಲ್ಲಿ ಪ್ರಕೃತಿಗೆ ನೇರ ಸ್ಪಂದಿಸುವಷ್ಟು ಚೈತನ್ಯ ನಮ್ಮಲ್ಲಿ ಬೆಳೆದಿತ್ತು. ಜೊತೆಗೇ ಇಲ್ಲಿಯ ಜನರ ಜೀವನ ರೀತಿ, ಸಂಸ್ಕೃತಿಯ ಕಿರುಪರಿಚಯವಾಗಿ ಅದರ

ಬಗ್ಗೆ ಕುತೂಹಲವೂ ಬೆಳೆದಿತ್ತು. ಟಿಬೆಟ್ಟಿಗೆ ಕಾಲಿಟ್ಟ ದಿನದ ಭಯ–ಆತಂಕ ಲವಲೇಶವೂ ಇಲ್ಲವಾಗಿತ್ತು. ಇನ್ನುಳಿದ ಮೂರು ದಿನಗಳಲ್ಲಿ ಟಿಬೆಟೀಯರೊಡನಾಟ ಮುಗಿಯುವುದೆಂಬ ವಿಚಾರದಿಂದಾಗಿ ಇವರೊಡನೆ ಆದಷ್ಟು ಬೆರೆತು ಸವಿ ನೆನಪಿನ ಬುತ್ತಿಯನ್ನು ತುಂಬಿಕೊಳ್ಳುವಾಸೆ ಹಿರಿದಾಗಿತ್ತು.

ಮುಕ್ತ ಮನಸ್ಸಿನಿಂದ ಟಕಲಾಕೋಟ್‌ನ ಬುರಾಂಗ್ ಹೋಟೆಲಿಗೆ ಮರಳಿದೆವು. ಅದೇ ಪೇಮಾ, ಸುಸಾನ್ ಅದೇ ಊಟದ ಹಜಾರ, ದುಂಡು ಮೇಜು ಕುರ್ಚಿಗಳು. ಅದೇ ಜೋಗುಣಿ ಚಮಚ ಕಡ್ಡಿಗಳು. ಆದರ ಅಂದಿನಂತ ಇಂದೂ ನಮ್ಮನ್ನು ತನಗಿಷ್ಟ ಬಂದ ಕಡೆ ಕೂರಿಸಲು ಪೇಮಾ ಅಸಮರ್ಥಳು. ಇಂದು ನಾವಲ್ಲಾ ಗುಲ್ಲೆಬ್ಬಿಸಿ, ಅವಳನ್ನೂ ನಗಿಸಿ, ಅಡುಗೆಯ ಕೋಣೆಗೇ ನುಗ್ಗಿದವು. ರಾತ್ರಿಯಡುಗಯ ಕಾರ್ಯವನ್ನು ನಾವೇ ವಹಿಸಿಕೊಂಡು ಅಲ್ಲಿದ್ದ ಸಿಬ್ಬಂದಿಗೆ ರಜಾ ಕೊಟ್ಟೆವು. ಅಲ್ಲಿ ಸಿಕ್ಕ ಮತ್ತು ನಮ್ಮಲ್ಲಿ ಉಳಿದಿದ್ದ ಪದಾರ್ಥಗಳಿಂದಲೇ ಖಿಚಡಿ, ಸಾಗು, ರೋಟಿ, ಜಿಲೇಬಿ ಮಾಡಿ ಅಲ್ಲಿದ್ದವರಿಗೂ ಊಟ ಬಡಿಸಿದೆವು. ಈ ಅವಕಾಶಕ್ಕಾಗಿ ಅವರಿಗೆ ಧನ್ಯವಾದಗಳನ್ನು ಮನಸಾರೆ ಅರ್ಪಿಸಿದೆವು.



**ದಾರ್ಚೆನ್‌ನ "ಶಾಪಿಂಗ್ ಕಾಂಪ್ಲೆಕ್ಸ್"**

# ಹೂಣರೊಡನಾಟದಲ್ಲಿ

**ರಾಗಿ ಮುದ್ದೆಯ ನುಂಗಿ ನಲಿದು ಬಾಳ್ವಾತಂಗೆ**
**ಕಾಗೆ ಕದ್ದುಣುವ ಭಕ್ಷ್ಯವ ಕಂಡು ಕರುಬೆ?**
**ನೀಗುವುದು ಹಸಿವನ್ ಉಣಿಸೆಂತಪ್ಪುದಾದೊಡಂ**
**ಬಾಗಿಸದಿರಾತ್ಮವನು- ಮಂಕುತಿಮ್ಮ**
**(ಮಂಕುತಿಮ್ಮನ ಕಗ್ಗ-ಡಿ.ವಿ.ಜಿ)**

ಮಂಕುತಿಮ್ಮನ ಈ ನೀತಿಯನ್ನು ಹದಿನಾರಾಣೆ ಸತ್ಯವಾಗಿಸಿದ ಜನಪದವೇ ಟಿಬೆಟ್. ಐಹಿಕ ಧನಕ್ಕಿಂತಲೂ ಆಮುಷ್ಮಿಕ ಧನಕ್ಕೇ ಬೆಲೆ ಕೊಟ್ಟಿರುವ ನಾಡಿದು. ನಿಸರ್ಗದೊಡನೆ ಹೊಂದಾಣಿಕೆಯ ಬಾಳು ಬೇಕೆಂದು ತನ್ನದೇ ದಾರಿಹಿಡಿದು ಹಿಂದುಳಿದಿರುವ ದೇಶವಿದು. ದೇಹಬಲ ತೋರಿ ಆಕ್ರಮಿಸಿದ ಪರಕೀಯ ಸರಕಾರಕ್ಕೆದುರಾಗಿ ಆತ್ಮಬಲ ತೋರಿ ಸೆಟೆದು ನಿಂತಿರುವ ಸಂಸ್ಕೃತಿಯಿದು. ಪ್ರಗತಿ ಎಂಬ ಪದಕ್ಕೆ ಮರುವ್ಯಾಖ್ಯಾನ ಮಾಡಿ ಆಧ್ಯಾತ್ಮಿಕ ಪ್ರಗತಿ ಸಾಧಿಸಿರುವ ಜನಮನವಿದು. ಧಾರ್ಮಿಕ ಗುರುವೇ ಆಧ್ಯಾತ್ಮಿಕ ಗುರುವೂ ಆಗಿರುವವನ ಕೈಲಿ ರಾಜಕೀಯ ಸಾರಥ್ಯವನ್ನು ಕೊಟ್ಟಿರುವ ಈ ಶಿಷ್ಯ ಸಮಾಜ ಇತರರಿಗೆ ಅಸಾಧಾರಣವಾಗಿ, ವಿಚಿತ್ರವಾಗಿ ತೋರುವುದು ಸ್ವಾಭಾವಿಕ. ಆದರೆ ಎರಡು ವಾರಗಳ ಪ್ರವಾಸದಲ್ಲಿ ಈ ಶಿಷ್ಯ ಸಮಾಜದ ಕೆಲವು ಮಗ್ಗುಲುಗಳನ್ನು ಮುಖಾಮುಖಿ ಕಂಡಾಗ ಈ ಸಮಾಜವೇ ಸಹಜತೆ, ಸರಳತೆ ವಾಸ್ತವತೆ, ಮಾನವತೆಗೆ ಅತ್ಯಂತ ಸಮೀಪವಾಗಿದ್ದಂತೆನಿಸಿತು.

ಒಂದು ನಾಡಿನ ಸ್ವರೂಪವನ್ನು ಅದರ ಪರಿಸರ-ಬೆಟ್ಟ ಬಯಲುಗಳು, ಗಿಡಬಳ್ಳಿ ಪಶುಪಕ್ಷಿಗಳು ಚಿತ್ರಿಸಿದರೆ, ಆ ನಾಡಿನ ಒಳಮರ್ಮವನ್ನು ಜೀವನಾಡಿಯನ್ನು ಅಲ್ಲಿನ ಜನತೆ ಮಿಡಿಯುತ್ತದೆ. ತನ್ನ ವಿಶಿಷ್ಟ ನಡೆನುಡಿಯಲ್ಲಿ, ನಿಲುವಿನಲ್ಲಿ, ವೇಷಭೂಷಣಗಳಲ್ಲಿ, ಆಟಕೂಟಗಳಲ್ಲಿ, ಹಬ್ಬ ಸಂಭ್ರಮಗಳಲ್ಲಿ, ಹಾಡುಹಸೆಗಳಲ್ಲಿ, ತನ್ನ ಚರಿತ್ರೆಯ ಸ್ಮಾರಕಗಳಲ್ಲಿ, ದೇಗುಲ ಧರ್ಮಶಾಲೆಗಳಲ್ಲಿ, ವಾಸದ ಮನೆಗಳಲ್ಲಿ ತನ್ನತನವನ್ನು ಮೆರೆಯುತ್ತದೆ, ಅಂತರ್ಯವನ್ನು ತೆರೆದಿಡುತ್ತದೆ. ಕೆಲವೊಮ್ಮೆ ತನ್ನ ಸಂಸ್ಕೃತಿಯ ಇಣುಕುನೋಟಕೊಟ್ಟರೆ, ಇನ್ನು ಕೆಲವು ಸಲ ಆ ನೆಲದ ಜಾನಪದ ಸೊಗಡು ಬೀಸಿ ಬಂದು ಪ್ರವಾಸಿಗನನ್ನು ಆವರಿಸುತ್ತದೆ. ಪ್ರಕೃತಿಯ ಕರೆಗೆ ಓಗೊಡುವ ಕರಣಗಳೊಂದಿಗೇ ಈ ಅಂತರ್ಮಿಡಿತಕ್ಕೆ ಸ್ಪಂದಿಸುವ ಮನವೂ ಇದ್ದರೆ, ಅಂತರಾಳಕ್ಕಿಳಿವ ಸಂವೇದನಾಶೀಲ ಹೃದಯವಿದ್ದರೆ ಪ್ರವಾಸದ ಪೂರ್ಣಾನಂದ ಲಭಿಸುತ್ತದೆ. ಆಗ ಮಾತ್ರ ಪ್ರವಾಸಿಗ ವಿಶ್ವಮಾನವನಾಗಿ ವಿಶ್ವಚೈತನ್ಯಕ್ಕೆ ಆವಾಸನಾಗಬಲ್ಲ.

ಟಿಬೆಟ್ಟಿನ ನಿಸರ್ಗದ ಮಡಿಲಲ್ಲಿ ನಾಗರಿಕತೆಯ ಸೋಂಕಿಲ್ಲದೆ, ಎಂಟು ದಿನಗಳನ್ನು ಇಲ್ಲಿನ ಮುಗ್ಧ ಜೀವಿಗಳೊಡನಾಟದಲ್ಲಿ, ಮೌನ ಸಂಭಾಷಣೆಯಲ್ಲಿ ಕಳೆದೆವು. ಪುಟಗಟ್ಟಲೆ ಪದಗಳನ್ನೋದುವುದಕ್ಕೂ ಮಿಗಿಲಾಗಿ, ಗಂಟೆಗಟ್ಟಲೆ ಉಪನ್ಯಾಸ ಕೇಳುವುದಕ್ಕೂ ಮಿಗಿಲಾಗಿ,

ರೀಲುಗಟ್ಟಲೆ ಚಲನಚಿತ್ರಗಳನ್ನು ನೋಡುವುದಕ್ಕೂ ಮಿಗಿಲಾಗಿ ಜ್ಞಾನಾರ್ಜನೆ ನಡೆದಿತ್ತು. ಟಿಬೆಟ್ಟಿನ ಸಮಷ್ಟಿ ಮನವು ಪ್ರವಾಸಿಗನ ವ್ಯಷ್ಟಿಮನಕ್ಕೆ ಗುಟುಕಿತ್ತು.

ಈ ಪ್ರವಾಸ ಕಾಲದಲ್ಲಿ ಸ್ವಾನುಭವಕ್ಕೆ ಬಂದ ಸಂಗತಿಯೆಂದರೆ ಎರಡು ಪ್ರಾಕೃತಿಕ ಅಂಶಗಳು ಟಿಬೆಟ್ಟಿನ ಜನಜೀವನವನ್ನು ರೂಪಿಸುವಲ್ಲಿ ಪ್ರಮುಖಪಾತ್ರ ವಹಿಸಿರುವ ಸಂಗತಿ. ಒಂದು ಇಲ್ಲಿನ ಶೀತ ಹವೆಯಾದರೆ ಮತ್ತೊಂದು , ಪರಿಸರದಲ್ಲಿನ ಶೂನ್ಯತೆ -ಖಾಲಿತನ. ಸಸ್ಯ ಹರಿತ್ತೇ ಇಲ್ಲದ , ಕ್ರೂರವೆನಿಸುವ ಪರಿಸರದಲ್ಲಿ ಪ್ರಕೃತಿ ನೀಡುವ ಅಪರೂಪದ ವಸತಿ ಯೋಗ್ಯ ಸ್ಥಳಗಳನ್ನು ಕಚ್ಚಿ ಹಿಡಿದು ಬದುಕು ನಡೆಸುವುದು ಒಂದು ಪವಾಡವೇ ಸರಿ. ನೀರೀನಾಸರೆಯೇ ಹೆಪ್ಪುಗಟ್ಟಿ ನಿಂತಾಗ, ಮೈ ಬೆಚ್ಚಗಿಡಲಿಕ್ಕಾಗಲಿ, ಅಡಿಗೆ ಮಾಡಲಿಕ್ಕಾಗಲೀರುವಲೇ ಇಲ್ಲದಾಗ, ಹೊಳೆ ಹರಿದಿದ್ದರೂ ಬೆಳೆಯೇ ಬೆಳೆಯದಂತಹ ಬಂಜರು ಭೂಮಿಯಲ್ಲಿಯೇ ಜೀವನ ನಡೆಸಬೇಕಾದಾಗ ಬದುಕುಳಿದು ಮುಂದಿನ ಪೀಳಿಗೆಯನ್ನು ಕಾಣುವುದೇ ಒಂದು ಪವಾಡವಾಗುತ್ತದೆ. ಇಂತಹುದೇ ಜೀವನ ನಡೆಸುವ ಟಿಬೆಟ್ಟಿನ ಅಲೆಮಾರಿ ಜನಾಂಗದವರಿಗೆ ನಗರ-ನಾಗರಿಕತೆಗಳು ಸಮಾಜವನ್ನಾಳುವ ಧರ್ಮ-ಕರ್ಮಗಳು ಎಲ್ಲವೂ ಬರೀ ಬಾಯಿಮಾತುಗಳಾಗುತ್ತವೆ. ಇಲ್ಲಿ ಮಾನ್ಯತೆ ಪಡೆಯುವುದೆಂದರೆ ಬದುಕಲು ಅತ್ಯಗತ್ಯವಾದ ಮಿತ್ಯವ್ಯಯತೆ ಪರಸ್ಪರ ಅನುಸರಣ ಮತ್ತು ವ್ಯಾವಹಾರಿಕತೆ. ಇಲ್ಲಿನವರಿಂದ ಪೂಜ್ಯತೆ ಪಡೆದವುಗಳೆಂದರೆ ಇಲ್ಲಿನ ಪ್ರಕೃತಿಯ ಗೋಚರ ಅಗೋಚರ ಶಕ್ತಿಗಳು. ಹಿಮಪಾತ, ಬಿರುಗಾಳಿ, ಭೂಕುಸಿತ, ಭೂಕಂಪ, ಪ್ರವಾಹ, ಅತಿಶೀತ ಹವೆ, ದಟ್ಟ ಮಂಜಿನ ದಾರಿತಪ್ಪಿಸುವ ಬೀಳಿ ಮುಸುಕು. ಎಲ್ಲವು ದೈತ್ಯಶಕ್ತಿಯ ಪ್ರತೀಕಗಳಾಗಿ, ಶಕ್ತಿಯ ಆವಾಸ ಸ್ಥಾನಗಳಾಗಿ ಪೂಜನೀಯವಾಗುತ್ತವೆ. ಇಂತಹ ಸನ್ನಿವೇಶಗಳಲ್ಲಿ ಜೀವನ ನಡೆಸುವವರು ಸ್ವಾಭಾವಿಕವಾಗಿ ದೃಢಕಾಯರು, ಕಷ್ಟ ಸಹಿಷ್ಣುಗಳು, ನಿಸರ್ಗದ ಆಗು-ಹೋಗುಗಳಿಗೆ ಸೂಕ್ಷ್ಮವಾಗಿ ಸ್ಪಂದಿಸುವವರು. ಪ್ರಕೃತಿಯನ್ನು ಗೌರವಿಸಿ ಅದಕ್ಕೆ ಹೊಂದಿಕೊಂಡು ಬಾಳುವವರು. ಸಂಕಷ್ಟಗಳ ಸಮ್ಮುಖದಲ್ಲೂ ಹಸನ್ಮುಖರಾಗಿ ಅವಕಾಶ ದೊರೆತಗಾಲೆಲ್ಲ ತಮ್ಮ ಮಾನವ ಸಹಜ ಸೌಂದರ್ಯ ಪ್ರಜ್ಞೆಯನ್ನು ಮೆರೆಸುವವರು.

ದಾರ್ಚೆನಿಂದ ಟಕಲಾಕೋಟ್‌ಗೆ ಹಿಂತಿರುಗುವಾಗ ನಮ್ಮ ಪ್ರವಾಸದ ಎಂಟು ದಿನಗಳ ಸಿಂಹಾಲೋಕನ ಮನದಲ್ಲಿ ನಡೆದಿತ್ತು. ಬಸ್ಸು ಬಳಸು ಮಾರ್ಗವಾಗಿ ಓಡಿತ್ತು. ನ್ಗಾರಿ ಜಿಲ್ಲೆಯ (ಕೈಲಾಸಮಾನಸ ಪ್ರದೇಶದ) ಹಲವು ಹಳ್ಳಿಗಳಲ್ಲಿ ಇಳಿಯಬೇಕಿದ್ದ ಅನೇಕ ಸ್ಥಳೀಕರು ದಾರ್ಚೆನಾಲ್ಲಿ ನಂತರ ಚೈದಿಯಲ್ಲಿ ಬಸ್ಸು ಹತ್ತಿದ್ದರು. ಅವರನ್ನು ಇಳಿಸುವ ನೆಪದಲ್ಲಿ ನಮಗೂ ನ್ಗಾರಿಯ ದರ್ಶನವಾಗಿತ್ತು. ಅದೇ ಮೂನ್‌ಲ್ಯಾಂಡ್ ಸ್ಕೇಪಿನ ತಗ್ಗುದಿಣ್ಣೆಗಳು; ಅಲ್ಲೊಂದು ಇಲ್ಲೊಂದು ಯಾಕ್ ಉಣ್ಣೆಯ ಕಪ್ಪು ಗುಡಾರಗಳು; ಬೆಟ್ಟದ ಮಗ್ಗುಲಿನ ಎಂಟ್ಹತ್ತು ಮನೆಗಳ ಹಳ್ಳಿಗಳು; ಬಯಲಿನಲ್ಲಿ ಒಂಟಿಯಾಗಿ ನಿಂತ ಚೋರ್ಟೆನ್‌ಗಳು ಪುಟ್ಟ ಗುಡಿಗಳು, ಇವಕ್ಕೆ ಕಟ್ಟಿದ ಮಣಿಮಂತ್ರದ ಬಣ್ಣಬಣ್ಣದ ತೋರಣಗಳು ಗಾಳಿಯಲ್ಲಿ ಹಾರಾಡುತ್ತ ಇದು ಟಿಬೆಟ್‌ನ ಪವಿತ್ರ ನೆಲ ಎಂದು ಜಗತ್ತಿಗೆ ಸಾರಿದ್ದವು. ಈ ಚೋರ್ಟೆನ್‌ಗಳು ಮತ್ತು ತೋರಣಗಳು ಭೂಮಿಯನ್ನು ಬಿಟ್ಟು ಆಕಾಶಕ್ಕೇರಲು ಹವಣಿಸಿದರೆ, ಹಳ್ಳಿ ,ಹಳ್ಳಿಯದಾರಿ, ಮನೆಮಾಡುಗಳ ಭೂಮಿಯೊಳಗೇ ಬೈತಿಟ್ಟುಕೊಳ್ಳುವಂತೆ ಪರಿಸರದಲ್ಲಿ ಒಂದಾಗಿ ಹೋಗಿದ್ದವು.

ರಭಸವಾಗಿ ಬೀಸಿಬರುವ ಚಳಿಗಾಗಿ ರಕ್ಷಣೆ ಪಡೆಯಲು ಮನೆಗಳನ್ನು ಬೆಟ್ಟದ ಮಗ್ಗುಲಿಗೆ, ಅತಿ ಎತ್ತರಕ್ಕೇರಿಸಿದೆ, ನೆಲಕ್ಕಂಟಿದಂತೆ ಕಟ್ಟುವುದು ಇಲ್ಲಿ ಅನಿವಾರ್ಯ ಮಣ್ಣು, ಒಣಹುಲ್ಲು, ಮರದ ತೊಲೆಗಳ (ಭಾರತ ನೇಪಾಳದಿಂದ ಬಂದ ಮರಮುಟ್ಟು) ವಿವಿಧ ಕಂದು ಬಣ್ಣಗಳಿಂದಾದ ಟಿಬೆಟೀ ಮನೆಯಾಗಲಿ ಗೊಂಪಾ ಆಗಲೀ ಸುತ್ತಲಿನ ಮರಭೂಮಿಯಂತಹ ಪರಿಸರದ ಒಣ ಕಂದು ಬಣ್ಣದಲ್ಲಿ ಲೀನವಾಗಿ ಹೋಗಿರುತ್ತದೆ ಅದರಲ್ಲಿ ರಂಗು ಕಾಣಬರುವುದು ಅದರ ಕಿಟಕಿಗಳಲ್ಲಿ, ಕಿಟಕಿಯ ಸುತ್ತಲು ಚಿಕ್ಕದಾಗಿ ಬಳಿದ ಕೆಂಪು ನಂತರ ಕಪ್ಪು ಣದ ಚೌಕಟ್ಟು, ಮೇಲಿನ ಮೂಲೆಗಳಲ್ಲಿ ಚಿಕ್ಕದಾಗಿ ಎಳೆದ ಕರಿ ಪಟ್ಟಿಯಲ್ಲಿ , ಸೋಗೆ ತೆಗೆದ ಕಾಡಿಗೆಯ ಕಣ್ಣುಗಳಂತೆ ಈ ಕಿಟಕಿಗಳು ನಿಜಕ್ಕೂ ಟಿಬೇಟಿ ಹೃದಯದ ಭಾವನೆಗಳನ್ನು ಹೊರ ಸೂಸುವ ಕಣ್ಣುಗಳೇ! ಈ ಮನೆಗಳೊಳ ಉಣ್ಣೆಯ ಕಪ್ಪು ಗುಡಾರದೊಳಗು ಕೂಡ ಟಿಬೇಟಿಯನ ಕಲ್ಪನಾಲೋಕವೇ ತೆರೆದುಕೊಂಡಿರುತ್ತದೆ. ಪರಿಸರದಲ್ಲಿ ಕಾಣಲಾಗದ ಗಿಡಮರಗಳು ಬಳ್ಳಿಹೂಗಳು ಪಶುಪಕ್ಷಿಗಳು, ದೇವದಾನವರು, ಯಕ್ಷಕಿನ್ನರರು, ಅರಮನೆ ಉದ್ಯಾನಗಳು, ಬಣ್ಣ ಬಣ್ಣದ ರೂಪದಲ್ಲಿ ಮೈದಾಳಿರುತ್ತದೆ. ರಂಗಿನ ಹಬ್ಬವೇ ನಡೆದಿರುತ್ತದೆ. ಗೋಡೆಗಳ ಮೇಲೆ, ಮೇಲ್ಛಾವಣಿಯಲ್ಲಿ ಚಿತ್ರಿಸಿದ ವರ್ಣಗಳಲ್ಲಿ ; ಕಂಬಗಳಲ್ಲಿ ತೊಲೆಗಳಲ್ಲಿ ಬಿಡಿಸಿದ ನಕಾಶೆಗಳಲ್ಲಿ; ತೂಗುಬಿಟ್ಟ ಥಂಕಾಗಳಲ್ಲಿ ಕಂಚಿನ, ಹಿತ್ತಾಳೆಯ, ಬೆಳ್ಳಿಯ ವಿಗ್ರಹಗಳಲ್ಲಿ; ನೆಲಕ್ಕೆ ಬೆಂಚುಗಳ ಮೇಲೆ ಹಾಸಿದ ಹಾಸುಗಳಲ್ಲಿ ಟಿಬೇಟಿಯನ ಕಲಾವಂತಿಕೆಯನ್ನು ಜೀವನದಲ್ಲಿನ ಆಸ್ಥೆಯನ್ನು ಮನಗಾಣಬಹುದು. ಟಿಬೇಟಿಯನ ದುರ್ಭರ ಪರಿಸರದ ಬದುಕಿಗೂ ಅವನೊಳಗಿನ ಕನಸಿನಲೋಕಕ್ಕೂ ಇರುವ ತುಯ್ತ ಮನೆಯೊಳಗಡಿಯಿಟ್ಟಾಕ್ಷಣ ನಮ್ಮ ಅನುಭವಕ್ಕೆ ಬರುತ್ತದೆ. ಸೆರಲುಂಗ್ ಗೊಂಪಾದೊಳಗೆ ಜೈದಿ ಶಿಬಿರದ ಮೇನಜರ್ ಮನೆಯೊಳಗೆ ದಾರ್ಜಿನ್‌ನ ಮನೆ ಅಂಗಡಿಯಾದ ಗುಡಾರದೊಳಗೆ ಹೋದಾಗ ಇದರ ನೇರ ಅನುಭವವಾಗಿತ್ತು.

ಒಂದೊಂದು ಹಳ್ಳಿ ಬಂದು ಬಸ್ ನಿಂತಾಗಲೂ 'ಇಲ್ಲಾದರೂ ಇಳಿದು ಹೋಗಿ ಒಂದು ಮನೆಯನ್ನು ನೋಡುವ ಎಂದು ಗೈಡ್ ಡೇವಿಡ್‌ಗೆ ವರಾತ. ಟಕಲಾಕೋಟ್ ಸಮೀಪಿಸಿದಂತೆ ಅದರ ಅಂಚಿಗಿದ್ದ ಬೆಟ್ಟದ ಮೇಲೆ ೧೫೦-೨೦೦ ಅಡಿ ಎತ್ತರದಲ್ಲಿ ಸಿಂಬ್ಲಿಂಗ್ ಗೊಂಪಾ ದೂರದಿಂದಲೇ ನಮ್ಮನ್ನು ಆಕರ್ಷಿಸಿತ್ತು. ಸಹಯಾತ್ರಿಯೊಬ್ಬರ ಪುಸ್ತಕದಲ್ಲಿ ಈ ಗೊಂಪಾದ ಬಗ್ಗೆ ಓದಿದ್ದ ವಿವರಗಳು ಕುತೂಹಲ ಕೆರಳಿಸಿದ್ದವು. ಕಡೆಯ ಪ್ರಯತ್ನವೆಂದು ಡೇವಿಡ್‌ಗೆ ನಮ್ಮ ಬೇಡಿಕೆಯನ್ನು ಸಲ್ಲಿಸಿದೆವು 'ಸರ್ಕಾರದ ಪರವಾನಗಿ ಇಲ್ಲದೆ ನೀವು ಕೇಳಿದಲ್ಲಿಗೇ ಕರೆದುಕೊಂಡು ಹೋಗುವ ಅನುಮತಿ ನನಗಿಲ್ಲ. ಆದರೆ ಈ ಗೊಂಪಾದಷ್ಟೇ ,ಇದಕ್ಕಿಂತಲೂ ದೊಡ್ಡದಾದ ಹೆಚ್ಚು ಪ್ರಸಿದ್ಧವಾದ ಖೋಜಾರ್ ದೇವಾಲಯಕ್ಕೆ ಹೋಗೋಣ. ಅದನ್ನು ನೋಡಿದ ಮೇಲೆ ನೀವೇ ಹೇಳಿರುವಂತೆ. ಅಲ್ಲಿ ನಿಮ್ಮೆಲ್ಲ ಪ್ರಶ್ನೆಗಳಿಗೂ ಉದ್ದ ಉದ್ದ ಉತ್ತರ ಹೇಳುವೆ. ಸರಿಯೆ?' ಎಂದು ಹೇಳಿ ನಮ್ಮನ್ನು ಸುಮ್ಮನಾಗಿಸಿ ನೇರ ಬುರಾಂಗ್ ಹೋಟೆಲಿಗೇ ತಂದಿಳಿಸಿದ.

ಖೋಜಾರ್ ದೇವಾಲಯಕ್ಕೆ ಬೆಳಿಗ್ಗೆ ೧೦ ಗಂಟೆಗೆ ಹೊರಡಬೇಕಾಗಿದ್ದುದರಿಂದ ಧಾವಂತವಿಲ್ಲದೆ ತಯಾರಾಗಿ ಸಾಸಿವೆ ಎಣ್ಣೆಯ ಉಪಹಾರ ಮುಗಿಸಿ ಹೊರಬಂದರೆ ನೆತ್ತಿ ಸುಡುವ ಬಿಸಿಲು, ಟೊಪ್ಪಿ ಧರಿಸಿ ಕಳಾಯಿಸುತ್ತಾ ಕಾದೇ ಕಾದೆವು ಬಸ್ಸಿಗಾಗಿ. ಗಳಿಗೆಗೊಮ್ಮೆ ಕೈಗಡಿಯಾರವನ್ನು

ನೋಡಿ ಮುಖ ಸಿಂಡರಿಸುವ ನಮ್ಮ ವರ್ತನೆಯನ್ನು ನೋಡಿದ ಹೋಟೆಲಿನ ಸಿಬ್ಬಂದಿಗೆ ವಿನೋದ. ನಾ ಕಂಡ ನ್ಗಾರಿ ಜಿಲ್ಲೆಯಲ್ಲಿ ಶ್ರೀಸಾಮಾನ್ಯರು ನಮ್ಮಂತೆ ದೈನಂದಿನ ಕಾರ್ಯಕಲಾಪಗಳಿಗೆ ದಿನವನ್ನು ತುಂಡುತುಂಡಾಗಿಸಿ ಗಡಿಯಾರದ ಮುಳ್ಳಿಗೆ ಮೂಗು ಕೊಟ್ಟು ಎಳೆಸಿಕೊಳ್ಳುವವರಲ್ಲ. ಕಾಲವೇ ಇವರಿಗಾಗಿ ಕಾದಿರುತ್ತದೇನೋ! ನಮ್ಮಲ್ಲಿ ಏರುತ್ತಿದ್ದ ಅಸಹನೆಯನ್ನು ಗುರುತಿಸಿದ ಗೈಡ್‌ಗಳು ಡೇವಿಡ್ ಮತ್ತು ಚಾನ್, ಹೋಟೆಲಿನ ಅಂಗಳದಲ್ಲಿ ನಿಂತಿದ್ದ ಲಾರಿಯೊಂದಕ್ಕೆ ನಮ್ಮನ್ನು ಏರಿಸಲು ಮೊದಲಿಟ್ಟರು. `ಬಸ್ ಬರುದಿಲ್ಲವೇ?' ಎಂದಾಗ `ನಿನಗೆ ಬಸ್ ಬೇಕೆಂದರೆ ಇಲ್ಲಿ ಕಾದು ಕುಳಿತಿರು. ಬಸ್ ಬಂದಾಗ ಅದರಲ್ಲಿ ಹತ್ತಿ ಕೊಳಿತುಕೋ ನಾವೆಲ್ಲಾ ಖೋಚಾರ್ ನೋಡಿಬಂದು ನಿನಗೆ ವಿವರಿಸುತ್ತೇವೆ.' ಎಂದ ಡೇವಿಡ್. ಈ ಭೂಪ ಹೇಳಿದ ಹಾಗೆ ಮಾಡಿಯಾನು ಅನಿಸಿ ಮರುಮಾತಿಲ್ಲದೇ ಲಾರಿ ಏರಿ, ಚಕ್ಕಮಕ್ಕಳೇ ಹಾಕಿ ಕುಳಿತದ್ದಾಯಿತು. ಈ ಟಿಬೇಟಿಯರೇ ಹೀಗೆ. ಇವರಿಗೆ ಜೀವನ ಎಂತಹ ಪಾಠ ಕಲಿಸಿದೆ ಎಂದರೆ ಗುರಿ ಮುಟ್ಟುವ ಕಡೆ ಸಂಪೂರ್ಣ ಗಮನ. ಸಾಧನವು ಹೇಗಾದರೂ ಇರಲಿ ಕೆಲಸವಾದರೆ ಸರಿ. ಇಲ್ಲಿ ಕಾಲಕ್ಕೆ, ದುಡ್ಡಿಗೆ, ವಸ್ತುವಿಗೆ ಅಂತಹ ಮಹತ್ವವಿಲ್ಲ. ಪ್ರಾಮುಖ್ಯತೆ ಏನಿದ್ದರೂ ಮಾನವನಿಗೆ, ಅವನ ಮಾನವೀ ಚೈತನ್ಯಕ್ಕೆ ,ಆ ಚೈತ್ಯನದ ಸ್ವಾತಂತ್ರಕ್ಕೆ ಆ ಚೇತನವನ್ನು ಕಾಲವಾಗಲೀ ಹಣವಾಗಲೀ ಐಷಾರಾಮದ ಅತೀ ಆಶೆಯಾಗಲಿ ದಾಸರನ್ನಾಗಿಸಲಾರದು. ಆದುರಿಂದಲೇ ಇವರಿಗೆ ಚೀನಾದ ಆಡಳಿತವನ್ನು ಧಿಕ್ಕರಿಸಿ ನಿಲ್ಲಲು ಸಾಧ್ಯವಾಗಿರುವುದು. ಲಾರಿ ಹತ್ತಿ ಕುಳಿತು ಇದಮಿತ್ಥಮ್ ಸ್ವೀಕರಿಸಿದ ಮೇಲೆ ಬಿಚ್ಚು ಮನಸಿನಿಂದ ಲಾರಿ ಪ್ರಯಾಣದ ಒಂದೊಂದು ಕ್ಷಣವನ್ನು ಆಸ್ವಾದಿಸಿದ್ದೆವು. ಲಾರಿಯಲ್ಲಿ ಕೂಡುವಂತಾಯಿತೇ ಎಂಬ ದುಮ್ಮಾನದಲ್ಲಿದ್ದರೆ ಸುತ್ತಲಿನ ನೋಟದಿಂದ, ಸಹಯಾತ್ರಿಗಳ ಮೋಜು ಮಸ್ತಿಯಿಂದ ವಂಚನೆಯಾಗುತ್ತಿದ್ದೇವು. ಪಾಲಿಗೆ ಬಂದದ್ದನ್ನು ಸ್ವೀಕರಿಸುವ ಸಕಾರಾತ್ಮಕ ನಿಲುವು ರಚನಾತ್ಮಕ ಮನೋಭಾವ ನಮ್ಮ ಜೀವನದ ಊರುಗೋಲಾಗಬೇಕೆಂಬುದು ಟಿಬೆಟಿನಲ್ಲಿ ಪ್ರಾಯೋಕವಾಗಿ ನಾನು ಕಲಿತ ಪಾಠ. ಯಾತ್ರಿಗಳೊಡನೆ ಕೆಲ ಟಿಬೇಟಿಯರೂ ಲಾರಿಯಲ್ಲಿ ಹತ್ತಿದರು. ಒಂದು ರೀತಿಯಲ್ಲಿ ಈ ಲಾರಿ ಸವಾರಿ ಒಳಿತಾಗಿತ್ತು. ಸ್ಥಳೀಕರು ನಮ್ಮನ್ನು ಪರಕೀಯರಂತೆ ಕಾಣದೆ ತಮ್ಮದೇ ರೀತಿಯಲ್ಲಿ ಆತ್ಮೀಯರನ್ನಾಗಿ ಮಾಡಿಕೊಂಡರು. ಅಂದಿನ ಮಟ್ಟಿಗೆ ನಾವೂ ಅವರ ದಿನನಿತ್ಯದ ಬವಣೆಯಲಿ ಸರಸದಲ್ಲಿ ಭಾಗಿಗಳಾಗಿದ್ದೆವು.

ಮೆಕ್ಕಲು ಮಣ್ಣಿನ ಜಿಗುಟೇ ಇಲ್ಲದ ಒಣಮಣ್ಣುಕಲ್ಲಿನ ಇಳಿಜಾರಿನಲ್ಲಿ ಜಾರುತ್ತಾ ಧೂಳೆಬ್ಬಿಸುತ್ತಾ ಲಾರಿ ಸಾಗಿತ್ತು. ಹಾದಿಯ ಪಕ್ಕದಲ್ಲಿ ಬಿಟ್ಟು ಬಿಟ್ಟು ನೆಟ್ಟಿದ್ದ ೮ ಅಡಿ ಎತ್ತರದ ಪೆಮಾ (ದೇವಾದರು ಬಗೆಯ) ಗಿಡಗಳು, ಇಲ್ಲವೆ, `ಚಾಂಗ್ಮಾ' (ವಿಲ್ಲೋ ಜಾತಿಯ ಗಿಡಗಳು) ಬೆಟ್ಟದ ಮಗ್ಗುಲಿಗೆ ಆತುನಿಂದ ಹಳ್ಳಿ ಮನೆಗಳು, ಅವುಗಳ ಮುಂದೆ ಒಂದೆರಡು ಪೆಮಾ ಗಿಡಗಳು ಸಾಕಷ್ಟು ಹಸಿರು ನೀರು ಇಲ್ಲದೆ, ಪ್ರಾಣಿ ಸಂಚಾರವಿಲ್ಲದೆ ಚಿತ್ರಕಾರ ಅರ್ಧದಲ್ಲೇ ಕೈಬಿಟ್ಟ ಅಪೂರ್ಣ ಚಿತ್ರದಂತಿತ್ತು. ಸುಮಾರು ೨೫ ಕಿ. ಮೀ.ನ ಈ ಪ್ರವಾಸ ನಮ್ಮನ್ನು ಟಿಕಾಲೋಟ್‌ನಿಂದ ಖೋಚಾರ್‌ಗೆ, ೨೦ನೇ ಶತಮಾನದಿಂದ ೧೫ನೇ ಶತಮಾನಕ್ಕೆ ಕೊಂಡೊಯ್ದಿತ್ತು. ಒಂದು ವಿಧದಲ್ಲಿ ಟಿಬೆಟ್ ಟೈಮ್ ಮೆಶಿನ್ ಇದ್ದಂತೆ. ಕೆಲವೇ ತಾಸುಗಳ ಪ್ರಯಾಣ ಮಾಡಿ ಮಾನವ ಸಂಸ್ಕೃತಿ ವಿಕಾಸದ ಯಾವುದೇ ಶತಮಾನಕ್ಕಾದರೂ ಜಾರಿಕೊಳ್ಳಬಹುದು. ಅಷ್ಟೇಕೆ, ಮಾನವ ವಿಕಾಸದ ಕಾಲಕ್ಕೂ ಹಿಂದಕ್ಕೆ

ಸರಿಯಬಹುದು, ಕೈಲಾಸದಂಗಳಕ್ಕಿಳಿದರೆ! ಎಲ್ಲ ಕಾಲದ ನಮೂನೆಗಳು ಇಂದಿಗೂ ಜೀವಂತವಾಗಿರುವುದು ಟಿಬೆಟ್ಟಿನ ವಿಶೇಷತೆ.

ಸುತ್ತಲೂ ಎದ್ದು ನಿಂತ ಬೆಟ್ಟಗಳ ನಡುವೆ, ಕರ್ನಾಲಿ ನದಿಯ ದಡದಲ್ಲಿದ್ದ ಖೋಜಾರ್ ದೇವಾಲಯ ಹೊರಗಿನಿಂದ ಸಾಧಾರಣ ಮನೆಯಂತೆ ಕಾಣಿಸುತ್ತಿದ್ದರೂ ಬಣ್ಣದ ಗೋಪುರದ ತುದಿಯಲ್ಲಿ ಹಾರಾಡುತ್ತಿದ್ದ ಧ್ವಜ ಮತ್ತು ಕಟ್ಟಿದ್ದ ತೋರಣಗಳು ದೇವಾಲಯಕ್ಕೆ ಉತ್ಸವದ ಬೆಡಗು ತಂದುಕೊಟ್ಟಿದ್ದವು. ಹೊರಪ್ರಾಕಾರದ ಎತ್ತರದ ಗೋಡೆಗೆ ಇಟ್ಟಿದ್ದ ದಿಡ್ಡಿಬಾಗಿಲನ್ನು ಕತ್ತಲು ಓಣಿಯನ್ನು ತಡವುತ್ತಾ ದಾಟಿ ದೇವಾಲಯದ ಒಳಪ್ರಾಕಾರಕ್ಕೆ ಬಂದಾಗಲೇ ಅದರ ವಿಶಿಷ್ಟತೆ ನಮ್ಮ ಅರಿವಿಗೆ ಬಂದದ್ದು.

ಖೋಜಾರ ದೇವಾಲಯದ ಮುಖ್ಯ ಹಜಾರ `ದುವಾಂಗ' ನಮ್ಮಲ್ಲಿಯ ಗರ್ಭಗೃಹದಂತೆ. ವಿಗ್ರಹಗಳಿಗೆ ಪ್ರದಕ್ಷಿಣೆ ಬರಲು ಹಿಂದಿನಿಂದ ಓಣಿಯಿದೆ. ಅಷ್ಟಧಾತುವಿನಿಂದಾದ ಕಲಾತ್ಮಕ ಪೀಠದ ಮೇಲೆ ಮೂರು ಅರಳಿದ ಕಮಲಗಳ ಮಧ್ಯೆ ಬೋಧಿಸತ್ವರ ಸುಂದರವಾದ ಮೂರು ಬೆಳ್ಳಿ ವಿಗ್ರಹಗಳು ನಿಂತಿವೆ. ಮಧ್ಯದಲ್ಲಿ ಜಂಬ್ಯಾಂಗ್ (ಮಂಜುಘೋಷ) ಎಂಟು ಅಡಿ ವಿಗ್ರಹವಿದ್ದು ಅದರ ಬಲಪಾರ್ಶ್ವದಲ್ಲಿ ಚೆನ್ರಿಸಿಗ್ (ಅಲೋಕಿತೇಶ್ವರ) ಏಳು ಅಡಿ ಎತ್ತರದ ವಿಗ್ರಹ ಮತ್ತು ಎಡಪಾರ್ಶ್ವದಲ್ಲಿ ಛಾಗ್ನದೋರ್ಜೆಯ (ವಜ್ರಪಾಣಿ) ಏಳು ಅಡಿಯ ವಿಗ್ರಹವಿದೆ ಈ ವಿಗ್ರಹಗಳನ್ನು ನೇಪಾಳಿ ಶಿಲ್ಪಿಗಳು ಮಾಡಿದರೆನ್ನುವುದು ಒಂದು ನಂಬಿಕೆಯಾದರೆ ಪೀಠ ಮತು ವಿಗ್ರಹಗಳನ್ನು ಶ್ರೀಲಂಕಾದಿಂದ ತರಲಾಯಿತೆನ್ನುವುದು ಮತ್ತೊಂದು ವದಂತಿ. ಪೀಠದ ಮುಂಭಾಗದಲ್ಲಿ ಕೆಳಗಡೆ ಏಳು ಚಿತ್ರಗಳು-ಐರಾವತ, ಕುಬೇರ, ರಾಣಿ (ಶಚೀದೇವಿ? ಪ್ರಾಣಚಕ್ರ, ಪವಿತ್ರಮಣಿ, ದೇವಸೇನಾನಿ ಮತ್ತು ಉಚ್ಚೈಶ್ರವಸ್-ಟಿಬೆಟೀಯರ್ ಏಳು ಪವಿತ ವಸ್ತುಗಳ ಚಿತ್ರಿತವಾಗಿವೆ. ಇದಲ್ಲದೆ ನಾಗಕನ್ನಿಕೆಯರು, ಪಕ್ಷಿಮಾನವಿಯರು, ಸಿಂಹಮುಖಿ, ಮಯೂರಗಳೂ ಚಿತ್ರಿತವಾಗಿವೆಯಂತೆ. ಇವು ಅಲಂಕಾರದ ವಸ್ತ್ರಗಳಿಂದ ಮುಚ್ಚಿಹೋಗಿದ್ದವು.

ಪೀಠದ ಮುಂದೆ ನೀರು ತುಂಬಿದ ಬಟ್ಟಲುಗಳು, ಬೆಣ್ಣೆ ತುಂಬಿದ ಚಿನ್ನ ಮತ್ತು ಬೆಳ್ಳಿಯ ದೀಪಗಳನ್ನು ಸಜ್ಜಾಗಿಟ್ಟಿರುವರು. ಭಕ್ತಾಧಿಗಳು ಕಾಣಿಕೆ ಕೊಟ್ಟು ದೀಪ ಹೊತ್ತಿಸಿ ವಿಗ್ರಹಗಳಿಗೆ ಬಲವಂದು ನಮಿಸುವುದು ಇಲ್ಲಿ ದಿನನಿತ್ಯದ ಪೂಜಾ ವಿಧಾನ. ವಿಶೇಷದ ದಿನಗಳಲ್ಲಿ ಪೂಜಾ ವಿಧಾನವೂ ಸಾಂಗೋಪಾಂಗವಾಗಿ ನಡೆಯುವುದು. ಡಮರು, ಮದ್ದಳೆ ಶಂಖ, ತಾಳ, ಗಂಟೆ, ಕೊಳಲು, ತುತ್ತೂರಿ, ಮಾನವ ಮೂಳೆಯ ಕಹಳೆ ಮುಂತಾದ ವಾದ್ಯಗಳು; ವಜ್ರಾಯುಧ ಮಾನವ ಕಪಾಲ, ನೀರು ಮತ್ತು ಬಾರ್ಲಿ ತುಂಬಿದ ಬಟ್ಟಲುಗಳು, ಅಗರುಬತ್ತಿ ಬೆಣ್ಣೆದೀಪ, ಛಾಂಗ (ಮಧ್ಯ) ತ್ಸಾಂಪಾ (ಹಿಟ್ಟು), ಮಾಂಸ, ಬೆಣ್ಣೆ ಕೇಕ್ ಮುಂತಾದ ಖಾದ್ಯಗಳು-ಎಲ್ಲಾ ಗೊಂಪಾಗಳಲ್ಲಿನ ವಿಶೇಷ ದಿನಗಳ ದೇವತಾರಾಧನೆಯ ಪೂಜಾ ಸರಕಣೆಗಳು. ಆಗಾಗ್ಗೆ ನಡೆಯುವ ದೇವತೆಗಳ ಮಹಾಪೂಜೆಯಲ್ಲಿ ಯಂತ್ರ ಅಥವಾ ಮಂಡಲಗಳನ್ನು ರಚಿಸಿ, ವಿವಿಧ ಬಣ್ಣ ಹಿಟ್ಟಿನಲ್ಲಿ ಮಾಡಿದ ಹಲವು ಉಪದೇವತೆಗಳ ಮೂರ್ತಿಗಳನ್ನು-`ತೊರ್ಮಾ'ಗಳನ್ನು ಹಲವು ದಿನಗಳವರೆಗೆ ತಾಂತ್ರಿಕ ವಿಧಿಯನುಸಾರ ಅರ್ಚಿಸುವುದು ರೂಢಿ. ಕಡೆಯ ದಿನ ಮಹಾ ಹವನ. ಮಂಡಲಾರ್ಚನೆಯ ಕಾಲದಲ್ಲಿ ತೋರಣ, ಧ್ವಜ, ಥಂಕಾಗಳಿಂದ

ಅಲಂಕೃತವಾದ ಗೊಂಪಾ ಸುತ್ತಲಿನ ಜನತೆಗೆ ಉತ್ಸವದ ಕೇಂದ್ರವಾಗುತ್ತದೆ.

೧. ಜಂಬ್ಯಾಂಗ್-ಮಂಜುಘೋಷ ಅಥವಾ ಮಂಜುಶ್ರೀ ಎಂದೂ ಕರೆಯಲಾಗುವ ಈ ದೇವತೆ ವಿವೇಚನಾ ಶಕ್ತಿ ಮತ್ತು ಬೌದ್ಧಿಕ ಬೆಳವಣಿಗೆಯ ಅಧಿದೇವತೆ. ಬಲಗೈಯಲ್ಲಿ ವಿವೇಚನಾ ಶಕ್ತಿ ದ್ಯೋತಕವಾದ ಖಡ್ಗವನ್ನು, ಎಡಗೈಯಲ್ಲಿ ಜ್ಞಾನಾರ್ಜನೆಯ ಪ್ರತೀಕವಾದ ಪುಸ್ತಕವನ್ನು ಹಿಡಿದಿರುವನು ಈ ಬೋಧಿಸತ್ವ, ಬುದ್ಧನ ಶಿಷ್ಯರಲ್ಲಿ ಒಬ್ಬನಾದ ಚಾರಿತ್ರಿಕ ವ್ಯಕ್ತಿಯ ಹೆಸರೂ ಮಂಜುಘೋಷ.

೨. ಚೆನ್ರಿಸಿಗ್- ಅವಲೋಕಿತೇಶ್ವರ ಮಹಾಕರುಣೆಯ ಸಾಕ್ಷಾತ್ಕಾರನಾದ ಈ ಬೋಧಿಸತ್ವ ಟಿಬೆಟ್ಟಿನ ಅಧಿದೇವತೆ. ಇವನಿಗೆ ಅನೇಕ ರೂಪಗಳು. ಹೆಚ್ಚಾಗಿ ಧ್ಯಾನ ಮಾಡುವ ರೂಪಗಳು ಸಾವಿರ ಕರಗಳ ಮಹಾಕರುಣಿಕ, ಪದ್ಮ ಪಾಣಿ ಮತ್ತು ಖಾಸರಪಾಣಿ. ಅವಲೋಕಿತೇಶ್ವರನು ಮರ್ತ್ಯರಿಗೆ ಕೊಟ್ಟಿದ್ದೇ ಪವಿತ್ರವಾದ `ಓಂ ಮಣಿ ಪದ್ಮೇ ಹುಂ' ಎಂಬ ಆರಕ್ಷರದ ಬೀಜಾಕ್ಷರ ಮಂತ್ರ.

೩. ಛಾಗ್ನದೋರ್ಜೆ - ವಜ್ರಪಾಣಿ (ವಜ್ರಧರ) ಬೋಧಿಸತ್ವಬಲ ಮತ್ತು ಯುಕ್ತಿಯ ಪ್ರತೀಕವಾಗಿ ಬಲದ ಕೈಯಲ್ಲಿ ವಜ್ರದಂಡವನ್ನು ಎಡದಕೈಯಲ್ಲಿ ಗಂಟೆ ಅಥವಾ ಕಪಾಲಪಾತ್ರೆಯನ್ನು ಹಿಡಿದ ದೇವತೆ ಅಮಿತಾಭನ ಶಾಕ್ತರೂಪ.

ದೇವಾಲಯದ ಮುಖ್ಯ ವಿಗ್ರಹಗಳ ಕೈಮೇಲೆ, ಕಿರೀಟದ ಮೇಲೆ ಭುಜದಿಂದ ಇಳಿಬಿದ್ದ ಬಿಳಿಯ ವಸ್ತ್ರಗಳು ಪೀಠದ ಮೇಲೂ ರಾಶಿಯಾಗಿ ಬಿದ್ದಿದ್ದವು. ಇವು ದೇವರಿಗೆ ಅರ್ಪಿತವಾಗಿದ್ದ `ಖಟಕ್'ಗಳು-ನಮ್ಮಲ್ಲಿ ಹೂಮಾಲೆ ಅರ್ಪಿತವಾದಂತೆ ಒಂದಡಿ ಉದ್ದ ಮೂರಂಗುಲ ಅಗಲದ ಹತ್ತಿ ಬಟ್ಟೆಯಿಂದ ಹಿಡಿದು ಮೂರಡಿ ಉದ್ದ ಒಂದಡಿ ಅಗಲ ರೇಶ್ಮೆ ವಸ್ತ್ರದವರೆಗೆ ಶಕ್ತ್ಯಾನುಸಾರ ಖಟಿಕ್‌ಗಳನ್ನು ದೇವರಿಗೆ ಸಮರ್ಪಿಸುವುದು ಭಕ್ತಿಗೌರವದ ಸಂಕೇತ. ಸ್ನೇಹಿತರನ್ನು ಹಿರಿಯ ಅಧಿಕಾರಿಗಳನ್ನು, ಗುರುಗಳನ್ನು ಮನೆತನದ ಹಿರಿಯರನ್ನು ಕಾಣಲು ಹೋದಾಗ ಖಟಕ್ ಕೊಟ್ಟುಬರುವುದು ಇಲ್ಲಿನ ಪದ್ಧತಿ. ಮದುವೆಯಲ್ಲಿ ಸಮಾರಂಭಗಳಲ್ಲಿ, ವರ್ಷಾರಂಭದ ಹಬ್ಬ ಉತ್ಸವಗಳಲ್ಲಿಯೂ ಖಟಕ್ ಪರಸ್ಪರರಲ್ಲಿ ವಿನಿಮಯವಾಗುತ್ತದೆ. ಖಟಕ್ ತರದೆ ಹಿರಿಯರನ್ನು ಭೇಟಿ ಮಾಡಿದರೆ ಅಸಭ್ಯ ವರ್ತನೆಯಾಗುತ್ತದ. ಗೋಂಪಾಗಳಲ್ಲಿ ದೇವಮೂರ್ತಿಗಳಿಗೆ ಖಟಕ್ ಅರ್ಪಿಸದಿದ್ದರೆ ಅಪಚಾರವಾಗುತ್ತದೆ. ಯಾರು ಯಾರಿಗೆ ಖಟಕ್‌ಗಳನ್ನು ಕೊಡುತ್ತಾರೆನ್ನುವುದರ ಮೇಲೆ ಸಮಾಜದಲ್ಲಿ ಅವರ ಸ್ಥಾನ ಮಾನ ನಿರ್ಧಾರವಾಗುತ್ತದೆಯೆಂದ ಮೇಲೆ ಈ ಪದ್ಧತಿಯ ಮಹತ್ವದ ಅರಿವಾಗುವುದು.

ಹಜಾರದ ಎರಡೂ ಕಡೆಯ ಗೋಡೆಗಳಲ್ಲಿ ಗೂಡುಗಳ. ಅವಕ್ಕೆ ಬಟ್ಟೆಯ ತೆರೆ. ಒಳಗೆ ಗ್ರಂಥಗಳನ್ನು ಜತನಗೊಳಿಸಲಾಗಿದೆ. ಮೇಲಿನ ಮಾಳಿಗೆಯಲ್ಲಿ ಜೆಚುನ್‌ದೋಲ್ಮಾ (ಶ್ವೇತ ತಾರಾ) ದೇವಿಯ ೨೧ ಅವತಾರಗಳ ಜೀರ್ಣವಾದ ಅಲ್ಲಲ್ಲಿ ಕಿತ್ತು ಬಂದಿದ್ದ ಚಿತ್ರಗಳು ಗೋಡೆಗಳ ಮೇಲೆ ಚಿತ್ರಿತವಾಗಿದೆ. ಇಲ್ಲಿನ ದೇವಿಯ ವಿಗ್ರಹ, ಮುಖ್ಯ ಹಜಾರದ ಬಾಗಿಲಿನ ಎರಡೂ ಬದಿಗಿದ್ದ ಎಂಟಡಿ ಎತ್ತರದ ಭಯಂಕರವೆನಿಸುವ ವಿಗ್ರಹಗಳೂ ಇಲ್ಲಿ ಇದ್ದುವಂತೆ! ಒಂದು ಅಮಿತಾಭ ಬುದ್ಧ `ಛಗ್ದೋರ್' ಇನ್ನೊಂದು ಅವಲೋಕಿತೇಶ್ವರ ತಮ್‌ದಿನ್'ನ ಉಗ್ರರೂಪಗಳು, ಅಲ್ಲದೆ ನಾಲ್ಕು ದಿಕ್ಪಾಲಕರ ಮೂರ್ತಿಗಳೂ ಇದ್ದುವಂತೆ ಈ ವಿಗ್ರಹಗಳು ಚೀನೀ ಆಕ್ರಮಣಕಾಲದಲ್ಲಿ ಇಲ್ಲವಾದವು. ನಾವು

ನೋಡಿದ ಖೋಜಾರ್ ದೇವಾಲಯವು ತನ್ನ ಹಿಂದಿನ ವೈಭವದ ಪಳೆಯುಳಿಕೆ ಮಾತ್ರವಾಗಿದೆಯಂತೆ! ಅದೆಷ್ಟೋ ಎಷ್ಟೊಂದು ಹೇಳಿತ್ತು.

ವಿಗ್ರಹಗಳ ಜೊತೆಯೇ ನಾಶವಾದ ಅಮೂಲ್ಯ ವಸ್ತುಗಳೇ ಪುಸ್ತಕಗಳು. ಈ ಹಜಾರದಲ್ಲಿಯೂ ಪುಸ್ತಕಗಳಿಡುವ ಗೂಡುಗಳನ್ನು ನೋಡಿದೆವು. ಮೊದಲಿದ್ದ ಗ್ರಂಥಗಳೆಲ್ಲವೂ ಚೀನೀ ಸೈನಿಕರು ಹೊತ್ತಿಸಿದ ಬೆಂಕಿಹಾಗುತಿಯಾಗಿದ್ದವು. ನಾವು ನೋಡಿದ ಗ್ರಂಥಗಳು ಅಳಿದುಳಿದವು, ಬೇರೆಡೆಯಿಂದ ತಂದವು ಹಾಗೂ ಹೊಸದಾಗಿ ಮಾಡಿಸಿದ ಗ್ರಂಥಗಳು- ಬೆರಳೆಣಿಕೆಯಷ್ಟು, ಗೊಂಪಾದ ಉಚ್ಛ್ರಾಯ ಸ್ಥಿತಿಯಲ್ಲಿ ಕಾಂಗ್ಯೂರ್‌ನ ಎಲ್ಲ ಗ್ರಂಥಗಳು, ಟೆಂಗ್ಯೂರ್ ಗ್ರಂಥಗಳೂ ಇದ್ದ ಬಹು ದೊಡ್ಡ ಗ್ರಂಥಾಲಯವಾಗಿತ್ತಂತೆ. ನಾವು ನೋಡಿದ್ದು ಗ್ರಂಥಗಳಿದ್ದ ದೊಡ್ಡ ಕೋಣೆಯಷ್ಟೇ!

ಟಿಬೆಟಿನ ಒಟ್ಟು ಶಿಷ್ಟ ಸಾಹಿತ್ಯವನ್ನು `ಕಾಂಗ್ಯೂರ್' ಮತ್ತು `ಟೆಂಗ್ಯೂರ್' ಎಂದು ವರ್ಗೀಕರಿಸಿದ ಗ್ರಂಥಗಳು ಟಿಬೆಟಿನ ಎಲ್ಲಾ ಮುಖ್ಯ ಗೊಂಪಾಗಳ ಗ್ರಂಥಾಲಯದಲ್ಲಿ ಇರುವುದು. ಗೊಂಪಾ ವಿದ್ಯಾಲಯಗಳ ಅಸ್ಥಿಭಾರವೇ ಆಗಿರುತ್ತದೆ ಈ ಗ್ರಂಥಗಳು. ಕಾಂಗ್ಯಾರ್‌ನಲ್ಲಿ ಬುದ್ಧನ ಪ್ರವಚನಗಳು ಚರ್ಚೆ ಹಾಗೂ ಬೋಧನೆಗಳು ೧೦೮ ಸಂಪುಟದಲ್ಲಿರುವುದು. ಟೆಂಗ್ಯೂರ್‌ನಲ್ಲಿ ವಿವಿಧ ಶಾಸ್ತ್ರಗಳ ೨೩೫ಕ್ಕೂ ಮಿಕ್ಕು ಸಂಪುಟಗಳಿವೆ. ಟೆಂಗ್ಯೂರ್‌ನಲ್ಲಿ ವೇದಾಂತದ ವಿವಿಧ ಶಾಖೆಗಳು, ಕಾವ್ಯಗಳು, ವ್ಯಾಕರಮ, ತರ್ಕಶಾಸ್ತ್ರ, ಖಗೋಳಶಾಸ್ತ್ರ, ಜ್ಯೋತಿಶಾಸ್ತ್ರ ದೇವತಾ ಸಾಧನೆ, ತಂತ್ರ ಮಂತ್ರಗಳ ಬಗೆಗೆ, ಸಂಸ್ಕೃತ ರಚನೆಗಳ ಚೀನಿಪಾಠಿವ್ರೇಣಿ. ಪೂರ್ವದ ತಗ್ಗಿನ ಬೆಟ್ಟಸಾಲುಗಳಲ್ಲಿ ಆಳದ ಕಂದರಗಳನ್ನು ನಿರ್ಮಿಸಿ ಹರಿಯುವ ಮೂರು ನದಿಗಳು-ಯಾಂಗ್ಸೆ, ಮೆಕಾಂಗ್ ಮತ್ತು ಸಲ್‌ವಿನ್, ಏಷ್ಯಿಯಾದ ನಾಲ್ಕು ಮುಖ್ಯ ನದಿಗಳು ಸಿಂಧೂ, ಸಟ್ಲೆಜ್, ಬ್ರಹ್ಮಪುತ್ರ ಮತ್ತು ಕರ್ನಾಲಿ ಟಿಬೆಟಿನಲ್ಲೇ ಹುಟ್ಟಿ ಹೊರನಾಡಿಗೆ ಹರಿದು ಹೋಗುತ್ತವೆ. ಏಳು ದೊಡ್ಡ ನದಿಗಳು, ಅನೇಕ ಉಪನದಿಗಳು ಇದ್ದರೂ ಟಿಬೆಟ್ ಜಗತ್ತಿನ ಅತಿ ಎತ್ತರದ ಫಲವತ್ತಾದ ಅಂಗಳವಾಗದೆ ಬಹುಭಾಗ ಮರುಭೂಮಿಯಾಗಿ ಛಾವಣಿಯಾಗಿ ಉಳಿದಿದೆ. ಈ ಬಂಜರು ಛಾವಣಿಗಾಗಿ ಇದರ ಮೇಲೆಯೇ ನಡೆದ ಯುದ್ಧಗಳು ಅನೇಕ. ಬಂದ ಪರದೇಶಿಯರು ಅನೇಕರು. ಅವರು ತಂದ ಸಂಸ್ಕೃತಿ, ಭಾಷೆ ಧರ್ಮ, ಸರ್ಕಾರಗಳು, ನಿರ್ಮಾಣವಾದ ಮಾರುಕಟ್ಟೆ, ವ್ಯಾಪಾರ ಮಾರ್ಗಗಳು-ಏನೆಲ್ಲಾ ಬದಲಾವಣೆಲ್ಲೂ ತಮ್ಮತವನ್ನು ಜಾನಪದ ಸೊಗಡನ್ನು ಕಾಪಾಡಿಕೊಂಡಿರುವ ಟಿಬೇಟಿಯರು ಅಂತರ್ಯದಲ್ಲಿ ಶಾಂತಿಪ್ರಿಯರು ಧಾರ್ಮಿಕ ಶ್ರದ್ಧಾಳುಗಳು. ಆದರೆ ಮತವಾದಿಗಳಲ್ಲ ಮತಾಂಧರಲ್ಲ.

ನ್ಗಾರಿ ಜಿಲ್ಲೆಯ ಪ್ರವಾಸ ಕಾಲದಲ್ಲಿ ಅಲ್ಲಿನ ಗೊಂಪಾ-ಅಂಗಡಿ-ಮನೆ-ಗುಡಾರ ಇವುಗಳಲ್ಲಿ ನಾವೇ ನೋಡಿದಂತೆ ಟಿಬೆಟೀ ಧರ್ಮ-ಸಂಸ್ಕೃತಿಯಲ್ಲಿ ಭಾರತೀಯ ಪ್ರಭಾವ ಎದ್ದು ಕಾಣುತ್ತದೆ. ಟಿಬೆಟ್ ಚರಿತ್ರೆಯಲ್ಲಿ ಪ್ರಮುಖ ತಿರುವುಗಳನ್ನಿತ್ತವರಲ್ಲಿ ಅನೇಕರು ಭಾರತೀಯರೇ! ಧಾರ್ಮಿಕ ಹಿನ್ನೆಲೆಯಲ್ಲಿ ಟಿಬೆಟ್ ಚರಿತ್ರೆಯನ್ನು ಐದು ಅಧ್ಯಾಯಗಳಲ್ಲಿ ವಿಂಗಡಿಸಬಹುದು. ಮೊದಲನೆಯ ಅಧ್ಯಾಯ ಬಾನ್ ಸಂಪ್ರದಾಯದ ಕಾಲ. ಟಿಬೆಟ್ ಪ್ರದೇಶಕ್ಕೆ ಸಾಮಾನ್ಯವಾದ ಪ್ರಕೃತಿ ಶಕ್ತಿಗಳನ್ನು ದೈವೀಕರಿಸಿ ಆರಾಧಿಸುತ್ತಿದ್ದ ಕಾಲ. ಭೂತ-ಪಿಶಾಚಿ-ಪ್ರೇತಾತ್ಮಗಳ ಆವಾಹನೆ, ಆರಾಧನೆ ಪೂಜೆ, ಮಂತ್ರ-ತಂತ್ರ ವಿಧಿಗಳ ಬಾನ್ ಸಂಪ್ರದಾಯದ ಕಾಲ. ಪೂಜಾರಿಯೇ ಅಲೆಮಾರಿ ಬುಡಕಟ್ಟುಗಳ

ಸರದಾರನ ಸಲಹೆಗಾರನೂ ಆಗಿ ಪ್ರಭಾವ ಬೀರುತ್ತಿದ್ದ ಕಾಲ. ಹಲವು ಬುಡಕಟ್ಟುಗಳ ಸರದಾರರನ್ನು ಒಟ್ಟು ಗೂಡಿಸಿ, ಮೊದಲ ಬಾರಿಗೆ ಹೂಣ ರಾಜ್ಯವನ್ನು ಕಟ್ಟಿದ ಯಶಸ್ಸು ಆರನೇ ಶತಮಾನದ ರಾಜ ಸ್ರೊಂಗ್‌ಚೆನ್ ಗಾಂಪೊನಿಗೆ ಸಲ್ಲುತ್ತದೆ. ಈತನ ಹೂಣ ಸೈನ್ಯ ಹೋದೆಡೆಯೆಲ್ಲ ಸಾವು ಸುಲಿಗೆ ಕೊಲೆಗಳ ಲೆಕ್ಕವಿಲ್ಲದೆ ಹೂಣ ಸೇನೆ-ಮೃತ್ಯು ಸೇನೆ ಎಂದೇ ಖ್ಯಾತವಾಗಿತ್ತು. ರಾಜ್ಯ ವಿಸ್ತರಣೆಗಾಗಿ ನೆರೆ ರಾಜ್ಯಗಳ ಮೇಲೆ ಏರಿಹೋದ ಸಂದರ್ಭದಲ್ಲಿ ಕಾಠಮಂಡು ಕಣಿವೆಯ (ಇಂದಿನ ನೇಪಾಳ) ರಾಜಕುಮಾರಿ ಭೃಕುಟಿ ಮತ್ತು ಚೀನಾದ ರಾಜಕುಮಾರಿ ವೆನ್ ಚೆಯಿಂಗ್‌ರನ್ನು ರಾಜವಧುಗಳಾಗಿ ತಂದಾಗ ಅವರೊಡನೆ ಅವನುಸರಿಸುತ್ತಿದ್ದ ಬೌದ್ಧಧರ್ಮವೂ ಹೂಣದೇಶಕ್ಕೆ-ಟಿಬೆಟ್ಟಿಗೆ ಕಾಲಿಟ್ಟಿತು. ಚರಿತ್ರೆಯ ಎರಡನೆಯ ಅಧ್ಯಾಯ ಆರಂಭವಾಯಿತು.

ರಾಜಕುಮಾರಿಯರೊಡನೆ ಬಂದ ಬುದ್ಧ ವಿಗ್ರಹಗಳು, ಬೌದ್ಧ ಬಿಕ್ಷುಗಳು, ಶಾಸ್ತ್ರ ಗ್ರಂಥಗಳು ಹೊಸಧರ್ಮದ ವಿಚಾರಗಳು, ಕುಶಲಕಲೆಗಳು ಟಿಬೆಟಿಗೆ ಬಂದು ಭಾರತದ-ಚೀನಾದ ಸಂಸ್ಕೃತಿಯ ಹೊಸ ಬೆಳಕು ಬೀಳತೊಡಗಿತು. ರಾಜ ಸ್ರೊಂಗ್‌ಚೆನ್ ಆದೇಶದಂತೆ ಮಂತ್ರಿ ಥೊನ್ಮಿ ಸಂಬೋಥ ಕ್ರಿ. ಶ. ೬೪೦ ರಲ್ಲಿ ಅಂದಿನ ಕಾಶ್ಮೀರದ ಶಾರದಾ ಲಿಪಿಯನ್ನು ಆಧರಿಸಿ ಟಿಬೆಟೀ ಭಾಷೆಗೆ ಲಿಪಿಯೊಂದನ್ನು ನಿರ್ಮಿಸಿ ಟಿಬೇಟೀ ಶಿಷ್ಟ ಸಾಹಿತ್ಯಕ್ಕೆ ಜನ್ಮ ನೀಡಿದನು. ವಿವಿಧ ಶಾಸ್ತ್ರಗಳ-ತರ್ಕ, ಖಗೋಳ, ಜ್ಯೋತಿಷ, ವೈದ್ಯ- ಗ್ರಂಥಗಳು ಟಿಬೆಟೀ ಭಾಷೆಯಲ್ಲಿ ರಚಿತವಾದವು. ಭಾರತೀಯ ಗ್ರಂಥಗಳು ಅನುವಾದಿತವಾದವು. ಮೊದಲಬಾರಿಗೆ ಟಿಬೆಟೀ ವಿದ್ವಾಂಸರು ಹಿಮಾಲಯದ ದಕ್ಷಿಣಕ್ಕೆ ನಳಂದ ವಿಕ್ರಮಶಿಲಾ ತಕ್ಷಶಿಲಾ

ಆಚಾರ್ಯನಾಗಲೀ ಭಿಕ್ಷುವಾಗಲೀ ತಂದ ಸುಧಾರಣೆಗಳು ಜನಸಾಮಾನ್ಯರನ್ನು ತಲುಪುವ ವೇಳೆಗೆ ಮಠದ ಅಧಿಕಾರಿಗಳಲ್ಲಿ ಗುರುಗಳಲ್ಲಿ ರಾಜಕೀಯ ತಲೆದೋರಿ ರಾಜಮನೆತನದ ಹಸ್ತಕ್ಷೇಪವಾಗುತ್ತಿದ್ದುದು ಮರುಕಳಿಸುತ್ತಿದ್ದ ಸಂಗತಿ. ಕೆಲವೇ ದಶಕಗಳಲ್ಲಿ ಅತಿಷನ ಪಂಥದಲ್ಲಿ ಬಿರುಕು ಬಂದುದೇ ಅಲ್ಲದೆ ಮಂಗೋಲಿಯ ಮತ್ತು ಚೀನಾದ ರಾಜಕೀಯ ಕೈವಾಡ ಹೆಚ್ಚಾಯಿತು. ಆಧ್ಯಾತ್ಮಿಕ ನಿಲುವಿಗೆ ಬದಲಾಗಿ ಮಠಗಳು ಕೋಟೆಗಳನ್ನು ಕಟ್ಟಿಕೊಂಡು ಸೈನಿಕ ಭಿಕ್ಷುಗಳಿಗೆ ಉತ್ತೇಜನ ನೀಡುವಂತಾಯಿತು. ನಾಲ್ಕನೆಯ ಅಧ್ಯಾಯ ಮುಗಿಯುತ್ತ ಬಂದಿತ್ತು.

ಇಲ್ಲಿಯವರೆಗೆ ಟಿಬೆಟ್ಟಿನಲ್ಲಿ ಧರ್ಮವನ್ನು ಸ್ಥಿರವಾಗಿ ನಲೆಗೊಳಿಸಲು ಭಾರತದಿಂದ ಯತಿಗಳು ಆಚಾರ್ಯರು ಬಂದರೆ ಅತಿಷನ ನಂತರ ಬಂದ ಧರ್ಮೋದ್ಧಾರಕ ಟಿಬೆಟೀಯನೇ ಆದ ಭಿಕ್ಷು ತ್ಸಾಂಗ್ ಖಾಪಾ ಮತ್ತೊಬ್ಬ ಮಂಜುಶ್ರೀ . ಅತಿಷನ ಪಂಥವನ್ನೇ ಆಧರಿಸಿ ಸಾಮಾನ್ಯ ಪ್ರಜೆಗಳಿಗೆ ಮಾರ್ಗದರ್ಶಿಯಾಗುವಂತಹ ಜೀವನ ಕ್ರಮವನ್ನು ಅಳವಡಿಸಿಕೊಂಡ ಗೆಲುಗ್‌ಪಾ ಪಂಥವನ್ನು ಹುಟ್ಟು ಹಾಕಿ ಚರಿತ್ರೆಯ ಐದನೇ ಅಧ್ಯಾಯವನ್ನು ಬರೆದವನು ತ್ಸಾಂಗ್ ಖಾಪಾ. ಪಾನನಿಷೇಧ, ಬ್ರಹ್ಮಚರ್ಯ, ಜ್ಞಾನಾರ್ಜನೆಯಲ್ಲೇ ಆಸಕ್ತಿ ಇವು ಪಂಥಕ್ಕೆ ಪ್ರಾಮಾಣಿಕತೆಯನ್ನು ತಂದವು. ರಾಜಕೀಯವನ್ನು ಕಟ್ಟುನಿಟ್ಟಾಗಿ ನಿಷೇಧಿಸಿದ ತ್ಸಾಂಗ್ ಖಾಪಾನ ನಿಲುವು ಬೌದ್ಧ ಪಂಥವನ್ನು ಬಹುಬೇಗ ಜನಪ್ರಿಯವಾಗಿಸಿತು. ಎರಡು ಶತಮಾನಗಳಲ್ಲಿ ಅಸಂಖ್ಯಾತ ಅನುನಾಯಿಗಳ ಸುವ್ಯವಸ್ಥಿತ ಸಂಸ್ಥೆಯಾಗಿ ಪ್ರಜೆಗಳ ಮೇಲೆ ಪ್ರಭುತ್ವವನ್ನು ಪಡೆದುದಲ್ಲದೆ ಪಂಥದ ಅಧಿಕಾರ ಇಂದಿಗೂ ಅನಾಹುತವಾಗಿಯೇ

ಉಳಿದು ಬಂದಿದೆ. ಈ ಪಂಥದ ಜನಪ್ರಿಯತೆಯೇ ಇದಕ್ಕೆ ರಾಜಕೀಯ ಅಧಿಕಾರ ವನ್ನು ನೀಡಿದೆ. ಈ ಪಂಥದ ಮಹಾಪೀಠಾಧಿಕಾರಿಯೇ ಟಿಬೆಟ್ ದೇಶದ ಅಭಿಷಿಕ್ತ ಗುರು ಚಕ್ರವರ್ತಿ ದಲೈಲಾಮಾ. ಚರಿತ್ರೆಯುದ್ದಕ್ಕೂ ಧಾರ್ಮಿಕ ವಲಯದಲ್ಲಿ ಏಳುಬೀಳುಗಳು ನಡೆದೇ ಇದ್ದರೂ ಸಾಂಸ್ಕೃತಿಕ ವಲಯದಲ್ಲಿ ನಿರಂತರ ಪ್ರಸರಣ ನಡೆದೇ ಇತ್ತು . ಪ್ರತಿಸಾರಿ ಧರ್ಮೋತ್ಥಾನವಾದಾಗಲೂ ಸಾಂಸ್ಕೃತಿಕ ಹೆದ್ದೆರೆಗಳು ಏರಿಬಂದು ಟಿಬೆಟ್ ಸಮಾಜವನ್ನು ತೋಯಿಸುತ್ತಿದ್ದವು. ಗೊಂಪಾಗಳಲ್ಲಿ ಮನೆ ಮಾರುಕಟ್ಟೆಗಳಲ್ಲಿ ನಾವು ಕಂಡ ವಸ್ತುಗಳಲ್ಲಿ ಥಂಕಾಗಳಲ್ಲಿ ದೇವಮೂರ್ತಿಗಳಲ್ಲಿ, ಚಿತ್ರಗಳಲ್ಲಿ ವಾಸ್ತುಶಿಲ್ಪಗಳಲ್ಲಿ ಭಾರತ, ಚೀನಾ, ನೇಪಾಳ, ಮಂಗೋಲಿಯಾ ಸಂಸ್ಕೃತಿಯ ಪ್ರಭಾವ ಎದ್ದು ಕಾಣುತ್ತದೆ.

ವೈದಿಕ ಸಿದ್ಧಾಂತಗಳ ತಳಹದಿಯ ಮೇಲೆ ನಿಂತಿರುವ ಟಿಬೆಟಿ ಬೌದ್ಧಧರ್ಮ ಹಾಗೂ ಭಾರತೀಯ ಸಂಸ್ಕೃತಿ ಮತ್ತು ಬಾನ್ ಸಂಪ್ರದಾಯಗಳ ಮಿಶ್ರ ಜೀವನ ರೀತಿಯೇ ಇಂದಿನ ಟಿಬೆಟ್ ಸಂಸ್ಕೃತಿಯ ಮೂಲ ವಸ್ತು. ಚೀನಾ ಮಂಗೋಲಿಯಾ ದೇಶಗಳಿಂದ ಬರುತ್ತಿದ್ದ ವ್ಯಾಪಾರಿಗಳು, ಸೈನಿಕರು, ಯಾತ್ರಿಗಳು , ವಿದ್ಯಾರ್ಥಿಗಳು, ಪ್ರವಾಸಿಗಳು ತಮ್ಮೊಡನೆ ತರುತ್ತಿದ್ದ ವೇಷ ಭೂಷಣಗಳು ,ಭಾಷೆಯ ಧ್ವನಿ, ವ್ಯಾಪಾರ ವ್ಯವಹಾರ ಮುಂತಾದವು ಟಿಬೆಟೀ ಸಂಸ್ಕೃತಿಯ ಬಾಹ್ಯಲಂಕಾರ. ಭಾರತದ ಬಾಲಿಕೆಯನ್ನು ಚೀನೀ ಮಂಗೋಲಿ ಕರಗಳು ಶೃಂಗರಿಸಿ ಟಿಬೆಟೀ ಯುವಕನಿಗೆ ಕೊಟ್ಟು ವಿವಾಹ ಮಾಡಿದಂತೆ ಅನ್ಯಾದೃಶ್ಯ ಸಂಸ್ಕೃತಿ ಇಲ್ಲಿ ಮೈದಾಳಿದೆ. ಎರಡು ಪ್ರಾಕೃತಿಕ ಅಂಶಗಳು ಅತಿ ಶೀತ ಹವಾಮಾನ ಮತ್ತು ಬಂಜರು ನೆಲ ಟಿಬೆಟೀ ಜನಜೀವನದ ಹೊರರೂಪವನ್ನು ನಿಯಂತ್ರಿಸಿದರೆ ಎರಡು ಪ್ರಮುಖ ಧಾರ್ಮಿಕ ಅಂಶಗಳು ಜನರ ಜೀವನ ದರ್ಶನವನ್ನು ಸಂಸ್ಕೃತಿಯನ್ನು ರೂಪಿಸಿದೆ. ಒಂದು , ತಂತ್ರ ವಿದ್ಯೆಯ ತಳಹದಿಯ ಬೌದ್ಧ ಧರ್ಮ ಮತ್ತು ಎರಡು, ಲಾಮಾ ಪದ್ಧತಿ . ಇವೆರಡೂ ಇಲ್ಲವಾಗಿದ್ದಲ್ಲಿ ಟಿಬೆಟ್ ಬೇರೆಲ್ಲ ದೇಶಗಳಂತೆ ಹತ್ತರಲ್ಲೊಂದಾಗಿಬಿಡುತ್ತಿತ್ತು.

ಭಾರತದಲ್ಲಿ ಹುಟ್ಟಿ ಬೆಳೆದ ಬೌದ್ಧ ಧರ್ಮ ಅನೇಕ ಶತಮಾನಗಳವರೆಗೆ ಹಿಂದೂ ಧರ್ಮದ ಪ್ರತಿಸ್ಪರ್ಧಿಯಾಗಿತ್ತು. ಈ ಅನವರತ ಸಂಪರ್ಕದಿಂದ ಅನೇಕ ವಿಚಾರಧಾರೆಗಳನ್ನು , ಸಿದ್ಧಾಂತಗಳಾದ ಪುನರ್ಜನ್ಮ, ಅವತಾರ , ಕರ್ಮವಾದ , ತಂತ್ರ ವಿದ್ಯೆಗಳನ್ನು ಒಪ್ಪಿಕೊಂಡ ಬೌದ್ಧಧರ್ಮ ಭಾರತದಲ್ಲಿ ವೈದಿಕಧರ್ಮದ ಅಂಗವಾಗಿ ಹೋದರೆ ಅದೇ ಸಿದ್ಧಾಂತಗಳನ್ನು ಅಳವಡಿಸಿಕೊಂಡು ಟಿಬೆಟ್‌ನಲ್ಲಿ ತನ್ನ ಹೊಸದೊಂದು ಅಸ್ತಿತ್ವನ್ನು ಪಡೆದು ಬೆಳೆದಿದೆ. ಟಿಬೆಟಿಗೆ ವೈಶಿಷ್ಟ್ಯವನ್ನು ತಂದುಕೊಟ್ಟಿದೆ.

ಏಳನೇ ಶತಮಾನದಾದಿಯಾಗಿ ಬೆಳೆದ ಧರ್ಮದಲ್ಲಿ ಬೌದ್ಧರ ಮೂರು ಪ್ರಮುಖ ಶಾಖೆಗಳ ಆಚಾರ ವಿಚಾರ ಸಿದ್ಧಾಂತಗಳು ಅಳವಟ್ಟಿವೆ. ಹೀನಯಾನದ ಶ್ರಾವಕ ರೀತಿ ನೀತಿ , ಮಹಾಯಾನದ ಬೋಧಿಸತ್ವ ಸಿದ್ಧಾಂತಗಳು, ವಜ್ರಯಾನದ ಗಂಭೀರ ಶಾಸ್ತ್ರೀಯ ತಾಂತ್ರಿಕ ವಿದ್ಯಾ ತತ್ವಗಳು ಟಿಬೆಟೀ ಧರ್ಮದ ವಿವಿಧ ಹಂತಗಳಾಗಿವೆ.

ಬುದ್ಧ ಗುರುವಿನ ಧರ್ಮದ ಈ ವಿಶಿಷ್ಟ ರೂಪದ ಬಳುವಳಿಯೇ ಲಾಮಾ ಪದ್ಧತಿ ಗುರು ಪರಂಪರೆ . ಲಾಮಾ ಪದದ ಅರ್ಥ ಗುರು -ಆಚಾರ್ಯ. ಸಕಲ ವಿಧದಲ್ಲೂ ಅನುಕರಣೀಯ ವ್ಯಕ್ತಿತ್ವವುಳ್ಳ ಅಧ್ಯಾಪಕ ಲಾಮಾ ಶಿಷ್ಯಂದಿರ ಲೌಕಿಕ , ಧಾರ್ಮಿಕ ಮತ್ತು ಆಧ್ಯಾತ್ಮಿಕ ನಿಲುವನ್ನು ರೂಪಿಸುವ ಗುರು. ಇಂತಹ ಗುರುತರ ಹೊಣೆ ಹೊತ್ತವನಲ್ಲಿ ಕೆಲವು ಅರ್ಹತೆಗಳಿರುವುದು ಅನಿವಾರ್ಯ. ಬೌದ್ಧ

ಧರ್ಮದ ಆಳವಾದ ಅಧ್ಯಯನ ಮತ್ತು ಜ್ಞಾನ , ಆಧ್ಯಾತ್ಮಿಕ ಜ್ಞಾನ , ತಂತ್ರವಿದ್ಯೆಯಲ್ಲಿ ಪರಿಣತಿ ಮತ್ತು ಇತರ ಶಾಸ್ತ್ರಗಳ ಪರಿಚಯವೂ ಅಗತ್ಯ . ಗೊಂಪಾದ ಅಧಿಕ ಪ್ರಭಾವ ಸಮಾಜದ ಮೇಲಿರುವುದರಿಂದ ಗೊಂಪಾದ ಲಾಮಾಗಳ ಪ್ರಭಾವವೂ ಅಧಿಕ. ಸಮಾಜದಲ್ಲಿ ಅವರ ಸ್ಥಾನಮಾನವೂ ಹಿರಿದು, ಅಂತೆಯೇ ಮನೆತನಕ್ಕೊಬ್ಬನಾದರೂ ಲಾಮಾ ಇರಬೇಕೆಂಬುದು ಎಲ್ಲರ ಹಿರಿಯಾಸೆ. ಅಲ್ಲದೆ ಓದು ಬರಹ ವಿದ್ಯೆ ಬೇಕೆಂದರೆ ಸಿಗುವುದು ಗೊಂಪಾಗಳಲ್ಲಿ ಮಾತ್ರ. ಹೀಗಾಗಿ ಪ್ರತಿ ಕುಟುಂಬದಿಂದಲೂ ಒಂದು ಎರಡು ಮಕ್ಕಳು ಹೆಣ್ಣಾಗಲಿ ಗಂಡಾಗಲೀ ೩ -೪ ವರ್ಷದ ಎಳೆಯ ವಯಸ್ಸಿನಲ್ಲೇ ತಂದೆ ತಾಯಿಯರ ಆದೇಶದಂತೆ ಗೊಂಪಾ ಸೇರುತ್ತಾರೆ. ಅಲ್ಲಿನ ಕಟ್ಟುಪಾಡಿನಂತೆ ಬ್ರಹ್ಮಚರ್ಯ ವ್ರತವನ್ನು ಕೈಗೊಂಡು ಭಿಕ್ಷುಗಳಾಗುತ್ತಾರೆ. ಪ್ರಾಥಮಿಕ ವಿಧ್ಯಾಭ್ಯಾಸ ಟಿಬೆಟ್ ರಾಜ್ಯದ ಎಲ್ಲಗೊಂಪಗಳ ಮಕ್ಕಳಿಗೂ ದೊರೆಯುತ್ತದೆ. ಶಾಲಾ ವಿದ್ಯಾಭ್ಯಾಸಕ್ಕೆ ಮತ್ತು ಉನ್ನತ ಶಿಕ್ಷಣಕ್ಕೆ ರಾಜಧಾನಿ ಅಥವಾ ದೊಡ್ಡ ನಗರಗಳ ಗೊಂಪಾಗಳಿಗೇ ಹೋಗಬೇಕು. ಅಲ್ಲಿ ಧಾರ್ಮಿಕ ಅಧ್ಯಯನದೊಂದಿಗೆ ವ್ಯಾಕರಣ, ಸಾಹಿತ್ಯ, ವೈದ್ಯಕೀಯ , ಜ್ಯೋತಿಷ್ಯ ತರ್ಕ, ತಂತ್ರವಿದ್ಯೆ ಶಿಲ್ಪ, ಲೋಹ,ಚಿತ್ರಕಲೆ, ಮುಂತಾದ ಶಾಸ್ತ್ರಗಳ ಅಧ್ಯಯನಕ್ಕೆ ಅವಕಾಶವುಂಟು. ಈ ವಿಶ್ವವಿದ್ಯಾಯಲಗಳಿಗೆ ಹೊರಗಿನ ಭಾರತ, ನೇಪಾಳ, ಭೂತಾನ್, ಜಪಾನ್, ರಷಿಯಾ ಮುಂತಾದ ದೇಶಗಳಿಂದ ವಿದ್ಯಾರ್ಥಿಗಳು ಬರುವುದು ಸಾಮಾನ್ಯ . ಅದರಲ್ಲೂ ವಿಶ್ವದ ಬೇರಾವ ಗ್ರಂಥಲಯದಲ್ಲೂ ಸಿಗದ ಅನೇಕ ಅಮೂಲ್ಯ ಶಾಸ್ತ್ರ ಗ್ರಂಥಗಳು ಸಾಹಿತ್ಯ ಗ್ರಂಥಗಳು ದೊರೆಯುವುದರಿಂದ ಇಲ್ಲಿಗೆ ಇಂದಿಗೂ ಬರುವ ವಿದ್ವಾಂಸರು ಅನೇಕರು. ಹಾಗಯೇ ಟಿಬೆಟೀ ವಿದ್ಯಾರ್ಥಿಗಳು ಈ ವಿದೇಶಗಳಿಗೆ ಹೋಗಿ ಅಭ್ಯಸಿಸುವುದೂ ಉಂಟು.

ಗೊಂಪಾಗಳ ಅರ್ಧದಷ್ಟು ಬ್ರಹ್ಮಚಾರಿಗಳು ಮಾತ್ರ ಅಧ್ಯಯನ ನಡೆಸುವ ವಿದ್ಯಾರ್ಥಿಗಳು. ಉಳಿದವರು ಕಾರ್ಮಿಕರು, ನಿರ್ವಾಹಕರು, ಮೇಲಧಿಕಾರಿಗಳು, ವರ್ತಕರು, ಗೊಂಪಾದ ಸಿಬ್ಬಂದಿ ವರ್ಗಕ್ಕೆ ಸೇರಿದವರು. ಗಮನಾರ್ಹ ಸಂಗತಿಯಂದರೆ ಗೊಂಪಾ ವಾಸಿಗಳ ಸನ್ಯಾಸಕ್ಕೂ ನಮ್ಮಲ್ಲಿಯ ಸನ್ಯಾಸಕ್ಕೂ ಇರುವ ಅಂತರ . ನಮ್ಮಲ್ಲಿಯಂತೆ ಸನ್ಯಾಸಿಗಳಾದವರು ಜೀವನದ ಅಂತಿಮ ಮಜಲನ್ನು ತಲುಪಿದಂತೆ , ಮತ್ತೆ ಸಂಸಾರಿಯಾಗಬಾರದೆಂದು ಭಾವನೆ ಟಿಬೆಟ್ಟಿನಲ್ಲಿಲ್ಲ. ಇಲ್ಲಿನ ಭಿಕ್ಷು ಸನ್ಯಾಸಿಯನ್ನು ಬ್ರಹ್ಮಚಾರಿ ಎಂದು ಅರ್ಥೈಸುವುದು ಹೆಚ್ಚು ಸಮಂಜಸವೆನಿಸುವುದು . ವಿದ್ಯಾರ್ಜನೆಗೆ ಇದು ಬಹುಪೂರಕವಾಗಿರುವುದಂತೂ ನಿಜ. ಕಲಿಕೆಯಲ್ಲಿರುವ ಭಿಕ್ಷುಗಳು ಮತ್ತು ಗೊಂಪಾದ ಪಠ್ಯೇತರ ಕಾರ್ಯಗಳಿಗೆ ನಿಂತ ಭಿಕ್ಷುಗಳೇ ಡಾಬಾಗಳು . ಹಲವು ವರ್ಷಗಳ ಶಾಸ್ತ್ರೋಕ್ತ ಅಧ್ಯಯನ ಮಾಡಿದ ಡಾಬಾಗೆ ಲಾಮಾ ಆಚಾರ್ಯ ಪದವಿ ದೊರೆಯುವುದು. ಮುಂದುವರೆದು ಬೌದ್ಧ ಧರ್ಮದ ಪರಂಪರಾಗತ ಶಾಸ್ತ್ರವಿಧಿಗಳ ಅಧ್ಯಯನ ನಡೆಸಿದರ ಗೆಶೆ ಪದವಿ ಸಿಗುವುದು . ಗೆಶೆ ಎಂದರೆ ಕಲ್ಯಾಣ ಮಿತ್ರ ಆಧ್ಯಾತ್ಮಿಕ ಸಹಚಾರಿ. ಗೆಶೆ ವಿಶ್ವವಿದ್ಯಾಲಯದ ಅತ್ಯುಚ್ಚ ಪದವಿ . ಗೆಶೆಗಳನ್ನು ವಿದ್ಯಾಲಯದ ಕುಲಪತಿಗಳನ್ನು ಮಠಾಧಿಪತಿಗಳನ್ನು ಸಾಮಾನ್ಯರು ಗೌರವಸೂಚಕವಾಗಿ ರಿನ್ ಪೊಚೆ ಎಂದು ಸಂಬೋಧಿಸುತ್ತಾರೆ.

ಲಾಮಗಳ ಈ ನಾಡಿನಲ್ಲಿ ಅನೇಕ ಪಂಥಗಳಿರುವುದು ಸಹಜವೇ. ಹೊರಗಿನವರು ಗುರುತಿಸಬಹುದಾದ ಮುಖ್ಯ ಪಂಥ ವರ್ಗಗಳು ಹಳದಿ ಟೊಪ್ಪಿಗೆ ಧರಿಸುವ ಗೆಲುಕ್ ಪಾ ಮತ್ತು ಕೆಂಪು ಟೊಪ್ಪಿಗೆಯ ನ್ಯಿಂಗ್ಮಾಪಾ.

ಕೆಂಪು ಟೋಪ್ಪಿಗೆಯ ನ್ಯಿಂಗ್ಮಾಪಾ ಲಾಮಾಗಳು ಮನಬಂದರ ಮದುವೆಯಾಗಬಹುದು, ಸಂಸಾರಿಯಾಗಬಹುದು. ಇವರಿಗೆ ಬ್ರಹ್ಮಚರ್ಯದ ಅತಿಯಾದ ಕಟ್ಟಳೆಯಿಲ್ಲ. ಆದರೆ ಗೆಲುಕ್ ಪಾ ಲಾಮಾಗಳು ಕಟ್ಟಾ ಬ್ರಹ್ಮಚಾರಿಗಳು. ಇವರು ಸಂಸಾರಿಯಾಗಬೇಂಕೆಂದರೆ ನಿಗದಿತ ದಂಡ ತೆತ್ತು ಗೊಂಪಾ ಬಿಟ್ಟು ಬರಬೇಕು. ಈ ರೀತಿ ಬ್ರಹ್ಮಚರ್ಯ ಬಿಟ್ಟ ಲಾಮಾಗಳು ಸನ್ಯಾಸಿನಿಯರು ಸಾಮಾನ್ಯ. ಮದುವೆಯಿಲ್ಲದೆಯೇ ಇವರ ಮಡಿಲಲ್ಲಿ ಮಕ್ಕಳೂ ಕಾಣಬಹುದು. ಇದಕ್ಕೆ ಕಾರಣ, ಅತಿ ಚಿಕ್ಕ ವಯಸ್ಸಿನಲ್ಲಿ ಹಿರಿಯರ ನಿರ್ಣಯದಂತೆ ಮಕ್ಕಳಿಗೆ ಸನ್ಯಾಸ ಕೊಡಿಸುವುದು.

ಹಿಂದೂ ವಿಚಾರಧಾರೆಯಾದ ಪುನರ್ಜನ್ಮ ಅವತಾರ ಸಿದ್ಧಾಂತವನ್ನು ಅಧರಿಸಿದ ಟಿಬೆಟಿ ನಂಬಿಕೆಯಂತೆ ನಿರ್ವಾಣ ಯೋಗ್ಯ ಬೋಧಿಸತ್ವರು ಲೋಕೋದ್ಧಾರಕ್ಕಾಗಿ ತಮ್ಮ ನಿರ್ವಾಣ ಪದವಿಯನ್ನು ಬದಿಗಿಟ್ಟು ಮತ್ತೆ ಮತ್ತೆ ಭೂಮಿಯಲ್ಲಿ ಅವತರಿಸುವರು. ಇವರೇ ಟುಲ್ಕುಗಳು. ಹುಟ್ಟಿನಿಂದಲೇ ವಿಶೇಷಗುಣಗಳನ್ನು ಪಡೆದವರು. ಅತಿಮಾನುಷ ಸತ್ವವುಳ್ಳ ಲಾಮಾಗಳು. ಇಂತಹ ಟುಲ್ಕುಗಳು ಟಿಬೆಟ್ಟಿನಲ್ಲಷ್ಟೇ ಅಲ್ಲದೇ ಮಂಗೋಲಿಯ, ನೇಪಾಳ ಮತ್ತು ಭಾರತದ ಬೌದ್ಧರಲ್ಲಿಯೂ ಇರುವರು . ಕೇವಲ ಟುಲ್ಕುಗಳು ಗೊಂಪಾದ ಅಧಿಪತಿಯಾಗಲು ಅರ್ಹರು.

ಜನತೆಯ ಮನ್ನಣೆ ಪಡೆದ ಗೊಂಪಾದ ಅಧಿಪತಿಗಳು ರಾಜಕಾರಣಿಗಳೂ ಕೂಡ . ಹೆಚ್ಚಿನ ಸಂಖ್ಯೆಯ ಅನುನಾಯಿಗಳಿರುವ ಗೆಲುಕ್ ಪಾ ಪಂಥದ ಮಠಾಧಿಪತಿ ಟಿಬೆಟ್ಟಿನ ಸರ್ವೋಚ್ಛ ಅಧಿಕಾರಿ ರಾಷ್ಟ್ರಪತಿ ದಲೈಲಾಮಾ ಎಂದರೆ ಜ್ಞಾನ ಮಹಾಶರಧಿ .

ಟಿಬೇಟಿಯರಿಗೆ ಗ್ಯಾಲ್ವಾ ರಿನ್ ಪೋಚೆ ರಾಜಶ್ರೇಷ್ಠ , ಕರುಣಾಮೂರ್ತಿ ಅವಲೋಕಿತೇಶ್ವರನ ಅವತಾರ , ಧರೆಗಿಳಿದು ಬಂದ ಚೆನ್ರೆಸಿಗ್ . ದಲೈಲಾಮಾರ ವಾಸಗೃಹ ರಾಜಧಾನಿ ಲ್ಹಾಸಾದಲ್ಲಿರುವ ಪೊಟಾಲಾ ಅರಮನೆ ಟಿಬೆಟೀ ವಾಸ್ತುಶಿಲ್ಪ ದ ಬಹು ಸುಂದರ ನಮೂನೆ . ಈ ಅರಮನೆಯಲ್ಲಿ ದಲೈಲಾಮಾರ ಸರಕಾರೀ ಕಛೇರಿಗಳ ಸಂಕೀರ್ಣವಷ್ಟೇ ಅಲ್ಲದೇ ನಾಮ್ಗ್ಯಾಲ್ ಗೊಂಪಾದ ಕಾರ್ಯಾಲಗಳೂ ಇವೆ.

ವೃದ್ಧ ದಲೈಲಾಮಾ, ಇತರ ಮಠಾಧಿಪತಿಗಳು ಕೂಡ ತಮ್ಮ ಜರ್ಜರಿತ ದೇಹವನ್ನು ಬಿಡುವ ಮುನ್ನ ತಮ್ಮ ಮುಂದಿನ ಜನ್ಮ ಎಲ್ಲಿ ಎಂಬುದಕ್ಕೆ ಕುರುಹುಗಳನ್ನು ಕೊಡುವರು. ಆ ಕುರುಹುಗಳನ್ನಾಧರಿಸಿ ಮೂವತ್ತೆರಡೂ ಸಲ್ಲಕ್ಷಣಗಳುಳ್ಳ ಟುಲ್ಕು ಬಾಲಕನನ್ನು ತಮ್ಮ ಮುಂದಿನ ದಲೈಲಾಮರಾಗಿ ಅರಿಸುತ್ತಾರೆ. ಈ ಬಾಲಕ ತನ್ನ ಹಿಂದಿನ ಜನ್ಮದಲ್ಲಿ ಉಪಯೋಗಿಸುತ್ತಿದ್ದ ವಸ್ತುಗಳನ್ನು (ಇತರ ವಸ್ತುಗಳೊಟ್ಟಿಗೆ ಇಟ್ಟಿರುವಾಗ )ಗುರುತಿಸಿದರೆ ಮಠಾಧಿಪತಿಯಾಗುವ ಸಂಸ್ಕಾರಗಳನ್ನು ಪಡೆಯುತ್ತಾರೆ. ಟಿಬೆಟೀಯರಿಗೆ ತಮ್ಮ ಸಾಮಾಜಿಕ , ಧಾರ್ಮಿಕ , ರಾಜಕೀಯ , ಸಾಂಸ್ಕೃತಿಕ, ಅಧ್ಯಾತ್ಮಿಕ, ವಲಯಗಳೆಲ್ಲದರ ಅಧಿಪತಿಯಾದ ದಲೈಲಾಮಾ ಇದ್ದೆಡೆಯೇ ಟಿಬೆಟ್ಟಿರಾಜ್ಯ ! ೧೯೫೯ ರ ಚೀನೀ ಆಕ್ರಮಣ ಕಾಲದಲ್ಲಿ ಭಾರತಕ್ಕೆ ಶರಣಾರ್ಥಿಯಾಗಿ ಬಂದ ಹದಿನಾಲ್ಕನೇ ದಲೈಲಾಮಾರ ಸಂಗಡವೇ ಅಪಾರ ಸಂಖ್ಯೆಯಲ್ಲಿ ಪ್ರಜೆಗಳೂ ಬಂದು ಭಾರತದ ಅನೇಕ ಕಡೆ ತಮ್ಮ ವಸತಿಗಳನ್ನು ನಿರ್ಮಿಸಿದರು. ಉತ್ತರ ಭಾರತದ ಧರ್ಮಶಾಲಾದಲ್ಲಿಂದಲೇ ಈಗಿನ ದಲೈಲಾಮಾ ಟಿಬೆಟೀ ಸರ್ಕಾರವನ್ನು ನಡೆಸುತ್ತಾರೆ. ಅವರ ಅಧಿಕಾರ ವ್ಯಾಪ್ತಿಗೆ ವಿಶ್ವದ ಎಲ್ಲ ಟಿಬೆಟಿಯರೂ ಸೇರುತ್ತಾರೆ. ಆ

ಕಾರಣದಿಂದಾಗಿಯೇ ಟಿಬೇಟೀಯರಿಗೆ ತಮ್ಮದು ಸ್ವತಂತ್ರ ರಾಜ್ಯ ಚೀನೀಯರು ಆಕ್ರಮಿಸಿಕೊಂಡಿರುವ ಅವರ ಭೌಗೋಳಿಕ ನೆಲೆಯನ್ನು ಬಿಟ್ಟುಕೊಡಬೇಕೆಂದು ಆಗ್ರಹ.

ಟಿಬೆಟ್ಟಿನ ವಿಶಿಷ್ಟ ಧಾರ್ಮಿಕ ರಾಜಕೀಯ ಕ್ರಮಾಗತ ವ್ಯವಸ್ಥೆಯಲ್ಲಿ ದಲೈಲಾಮಾರ ನಂತರದ ಪ್ರಮುಖ ವ್ಯಕ್ತಿ ಪಂಚೆನ್ ಲಾಮಾ ಎಂದರೆ ಮಹಾ ಪಂಡಿತ ಗುರು. ಐದನೇ ದಲೈಲಾಮಾ ತಮ್ಮ ಗುರುವಿಗೆ ಕೊಟ್ಟ ಬಿರುದು. ಓಪಾಮೆ ಅಮಿತಾಭ ಬೋಧಿಸತ್ವನ ಅವತಾರವೆಂದು ಪರಿಗಣಿಸಲ್ಪಟ್ಟ ಪಂಚೆನ್ ಅಮೀತಾಬನ ಗ್ರಹಣ ಶಕ್ತಿಯ , ವಿವೇಚನಾ ಶಕ್ತಿಯ ಮೂರ್ತರೂಪ . ಬೌದ್ಧ ಪುರಾಣದ ಪ್ರಕಾರ ಅಮಿತಾಭ ಮತ್ತು ಅವಲೋಕಿತೇಶ್ವರರಲ್ಲಿರುವ ಗುರು ಶಿಷ್ಯ ಸಂಬಂಧದ ಪ್ರತೀಕವೇ ಪಂಚೆನ್ ಲಾಮಾ ದಲೈಲಾಮಾರ ಸಂಬಂಧ . ದಲೈಲಾಮಾರಂತೆಯೇ ಪಂಚೆನ್‌ಲಾಮಾರ ಆಯ್ಕೆ ಮತ್ತು ಕಠಿಣತಮ ಬ್ರಹ್ಮಚರ್ಯೆಯ ವಿದ್ಯಾಭ್ಯಾಸ. ದಲೈಲಾಮಾರಂತೆ ರಾಜಕೀಯದಲ್ಲಿ ಅಧಿಕೃತ ಅಧಿಕಾರವಹಿಸದಿದ್ದರೂ ಅವರ ಗುರುಸ್ಥಾನದಲ್ಲಿ ನಿಂತ ಪಂಚೆನ್ ಲಾಮಾರ ಪ್ರಭಾವ ರಾಜಕೀಯದಲ್ಲೂ ಇರುವುದು ಸಹಜ . ರಾಜಧಾನಿ ಲ್ಹಾಸಾದಿಂದ ದೂರ ಶಿಗಾಟ್ಸೆಯ ತಾಶಿಲ್ಹುನ್ ಪೊದಲ್ಲಿ ಪಂಚೆನ್ ಲಾಮಾರ ನಿವಾಸ. ತತ್ವಶಾಸ್ತ್ರಾಧ್ಯಯನಕ್ಕೆ ಹೆಸರಾದ ತಾಶಿಲ್ಹುನ್ ಪೊ ವಿಶ್ವವಿದ್ಯಾಲಯ ಶಿಷ್ಯ ಸಂಖ್ಯೆಯಲ್ಲೂ ದೊಡ್ಡದಿದ್ದು ಟಿಬೆಟ್ಟಿನ ನಾಲ್ಕು ಮಹಾವಿದ್ಯಾನಿಲಯಗಳಲ್ಲೊಂದಾಗಿದೆ. ರಾಜಕೀಯ ನೊಡಕುಗಳಿಲ್ಲದೆ ಲ್ಹಾಸಾದಿಂದ ದೂರವಿರುವ ಪಂಚೆನ್ ಲಾಮಾ ಹೊರ ಪ್ರಪಂಚದೊಂದಿಗೆ ಹೆಚ್ಚಿನ ಸಂಪರ್ಕ ಹೊಂದಿದವರು. ಅಧ್ಯಯನಕ್ಕೂ ಧಾರ್ಮಿಕ ಕಾರ್ಯಕ್ಕೂ ಹೆಚ್ಚು ವೇಳೆ ಕೊಡಲು ಸಾಧ್ಯವಿರುವವರು. ಇವರಿಬ್ಬರ ಒಳಸಂಬಂಧದ ಸೂಕ್ಷ್ಮವನ್ನರಿಯದ ಹೊರದೇಶಗಳ ಸರಕಾರಗಳು ಒಬ್ಬರ ಮೇಲೊಬ್ಬರನ್ನು ಎತ್ತಿ ಕಟ್ಟುವ ಹುನ್ನಾರ ನಡೆಸಿದ್ದುಂಟು. ಆದರೆ ಟಿಬೆಟೀಯರಿಗೆ ಇಬ್ಬರೂ ಸಮಾನ ಪವಿತ್ರ ಅವತಾರಗಳು . ಪಂಚೆನ್ ಲಾಮಾ ಅಧ್ಯಾತ್ಮಿಕ ಗುರುವಾದರೆ ದಲೈಲಾಮಾ ಆಧ್ಯಾತ್ಮಿಕವನ್ನೊಳಗೊಂಡ ಐಹಿಕ ಗುರು.

ಮಾನವಕುಲದ ಇತಿಹಾಸದಲ್ಲಿ ಸ್ಥಗಿತಗೊಂಡ ಸಂಸ್ಕೃತಿಗಳು ಅದೆಷ್ಟೋ ಇಂದು ಹೇಳ ಹೆಸರಿಲ್ಲದಾಗಿವೆ . ಇನ್ನೆಷ್ಟೋ ಸಂಸ್ಕೃತಿಗಳು ಜಾಗತಿಕ ಸಂಸ್ಕೃತಿಯ ಪದಾಘಾತಕ್ಕೆ ಸಿಕ್ಕು ಮರಣಾಂತಿಕ ಸ್ಥಿತಿಯಲ್ಲಿವೆ. ಆದರೆ ಟಿಬೆಟ್ಟಿ ಸಂಸ್ಕೃತಿ ಇಂದಿಗೂ ಜೀವಂತವಾಗಿ ತನ್ನತನವನ್ನು , ಅನನ್ಯ ಸಂಸ್ಕೃತಿಯನ್ನು ಉಳಿಸಿಕೊಂಡಿರುವ ರಹಸ್ಯವೇನು? ಟಿಬೆಟ್ಟಿ ಪ್ರವಾಸದ ಹನ್ನೆರಡು ದಿನಗಳಲ್ಲಿ ಅನುಭವಕ್ಕೆ ಬಂದ ಸಂಗತಿಗಳು, ನಂತರ ಓದಿ ತಿಳಿದ ವಿಷಯಗಳ ಮಥಿತಾರ್ಥದಂತೆ ಟಿಬೆಟ್ಟೀ ಸಂಸ್ಕೃತಿಯ ಜೀವಂತಿಕೆಯ ಕಾರಣವಿಷ್ಟೆ .ಮಣಿಮಂತ್ರ ಧಾರ್ಮಿಕ ಮನೋಭಾವ ಆ ಸಂಸ್ಕೃತಿಯ ಶ್ವಾಸೋಚ್ಛ್ವಾಸವಾದರೆ ವ್ಯಾವಹಾರಿಕ ಮನೋಭಾವ ಅದರ ಹೃದಯ ಬಡಿತವಾಗಿರುವುದು. ಧಾರ್ಮಿಕತೆಯ ನೂಲು ಟಿಬೆಟಿ ಸಮಾಜದ ನಿಡುಹಾಸನ್ನು ಬಿಚ್ಚಿದ್ದರೆ ಅವರ ವ್ಯವಹಾರಿಕತೆಯ ಅಡ್ಡನೂಲು ಈ ಹಾಸಿನಲ್ಲಿ ನುಸುಳಿ ಸಾಂಸ್ಕೃತಿಕ ಬಲೆಯನ್ನು ನೆಯ್ದಿದೆ. ಎರಡೂ ವಿರುದ್ಧ ದಿಕ್ಕಿನ ನೂಲುಗಳು ಸಿಕ್ಕುಸಿಕ್ಕಾಗಿ ತೊಡಕಿಕೊಳ್ಳದೆ ಕ್ರಮಬದ್ಧವಾಗಿ ನೇಯ್ದುಕೊಂಡು ಒಂದಕ್ಕೊಂದು ಬಲಕೊಟ್ಟು , ವೈಶಿಷ್ಟ್ಯತೆಯನ್ನು ಕಾಯ್ದುಕೊಂಡಿದೆ. ಈ ವಿವರಣೆಗೆ ಅನೇಕ ನಿದರ್ಶನಗಳು ನಮ್ಮ ಪ್ರವಾಸ ಕಾಲದಲ್ಲಿ ಸಿಕ್ಕವು.

ಟಿಬೆಟ್ಟಿನ ವಿರಳ ಹವೆಯನ್ನು ಸಾಂದ್ರಗೊಳಿಸಲೆಂಬಂತೆ ಪರಿಸರವೇ ಓಂ ಮಣಿ ಪದ್ಮೇಹುಂ ಷಡಕ್ಷರ ಮಂತ್ರದಲ್ಲಿ ಓತಪ್ರೋತ. ದಿನದ ಬಹುಭಾಗ ಈ ಮಂತ್ರ ಜಪ ಮಾಡುವವರ ಉಸಿರು

ಗಾಳಿಗೆ ಸೇರಿದರೆ ಗಾಳಿಯಲ್ಲಿ ನಿರಂತರ ಹಾರಾಡುವ ಧ್ವಜಗಳು, ವಸ್ತ್ರತೋರಣಗಳು ತಮ್ಮ ಮೇಲಿರುವ ಮಂತ್ರವನ್ನು ಗಾಳಿಗೆ ತೆರೆದಿಡುತ್ತವೆ. ಗೋಡೆಗಳು , ಕಲ್ಲುಕಂಬಗಳು, ಬಂಡೆ ಚಪ್ಪಡಿಗಳು, ಕೊಂಬು ಮೂಳೆಗಳು ಯಾವುದೇ ಚಪ್ಪಟೆ ಭಾಗ ಸಿಕ್ಕಿದರಲ್ಲಿ ಪೂರ್ಣಮಂತ್ರ ಇಲ್ಲವೆ ಓಂ ಅಷ್ಟಾದರೂ ಕೆತ್ತಿರುವುದು. ಇವುಗಳನ್ನು ಗೊಂಪಾಗಳಲ್ಲಿ ಊರು ಬಾಗಿಲ ಮೇಲೆ, ಕಂಬಕ್ಕೆ ಒರಗಿಸಿ, ಪುಣ್ಯಸ್ಥಳಗಳಲ್ಲಿ , ಉನ್ನತ ಶಿಖರಗಳೆಡೆಯಲ್ಲಿ, ಇವುಗಳು ಕಾಣುವ ಸ್ಥಳಗಳಲ್ಲಿ ನಾಲ್ಕು ರಸ್ತೆ ಕೂಡುವಲ್ಲಿ ಇಡುವ , ನೆಡುವ ರೂಢಿಯಿಂದಾಗಿ ಗಾಳಿಯಷ್ಟೆ ಅಲ್ಲದೆ ನೆಲವೂ ಮಂತ್ರಮಯ. ಪವಿತ್ರ ಗಿರಿಗಳಿಂದಿಳಿದು ಬಂದು ಇಂತಹ ನೆಲದ ಮೇಲೆ ಸದಾ ಹರಿಯುವ ನಿರ್ಮಲ ನೀರು ವಾಯುವಿನ ಸಂಗದಲ್ಲಿ ಅಲೆಅಲೆಯಾಗಿ ಕಲಕಲ ಮಂತ್ರೋಚ್ಚಾರ ಮಾಡುವುದೇನೋ ಇಷ್ಟೇ ಸಾಲದೆಂಬಂತೆ ಚಿಕ್ಕ ಚಿಕ್ಕ ಕೊರ್ಲಾ ತಿರುಗುಗಂಬಗಳ ಸಾಲುಗಳೇ ಅಲ್ಲದೆ ಬೃಹದಾಕಾರದ ಕೊರ್ಲಾಗಳನ್ನಿಟ್ಟ ಮಂಟಪಗಳು , ಕೋಣೆಗಳು ಗೊಂಪಾಗಳಲ್ಲಿ, ದೇವಾಲಯಗಳಲ್ಲಿ ಕಾಣಬರುವುದು. ಹಿಟ್ಟಿನ ಗಿರಣಿಯಲ್ಲಿ ತಿರುಗುವ ಚಕ್ರಗಳ ಮೇಲೆ ಮಣಿಮಂತ್ರವನ್ನು ಕೆತ್ತಿರುವುದೆಂದರೆ ಧಾರ್ಮಿಕತೆಯ ಪರಾಕಾಷ್ಠೆಯೇ ಸರಿ.

ಇಲ್ಲೆಲ್ಲಾ ಎದ್ದು ಕಾಣುವ ಸಂಗತಿಯೆಂದರೆ ಬಡವ ಬಲ್ಲಿದ ಉತ್ತಮ ಅಧಮ ಮುದುಕರು ಮಕ್ಕಳು , ಹೆಂಗಸರು ಗಂಡಸರು, ಎಂಬ ತಾರತಮ್ಯವಿಲ್ಲದೆ ಯಾವುದೇ ನಿರ್ಬಂಧವಿಲ್ಲದೆ ಎಲ್ಲರಿಗೂ ಎಲ್ಲ ಕಾಲದಲ್ಲೂ ಎಲ್ಲಾ ರೀತಿಯಲ್ಲೂ ಎಲ್ಲಾ ಕಡೆಯಲ್ಲೂ ಎಲ್ಲ ಕಾರಣಕ್ಕೂ ಮಂತ್ರ ಜಪ ಮಾಡುವ ಹಕ್ಕು ತನ್ಮೂಲಕ ಮನಶಾಂತಿ ಪಡೆದ ಹಕ್ಕು ಇರುವುದು. ಸಾಮಾಜದಲ್ಲಿ ಸಮಾನತೆಯನ್ನು, ಒಗ್ಗಟ್ಟನ್ನು , ಏಕಮುಖಧ್ಯೇಯವನ್ನು ಸಾಧಿಸುವುದು ಇದರ ಮುಖ್ಯೋದ್ದೇಶವಷ್ಟೆ. ವ್ಯಾವಹಾರಿಕವಾಗಿಯೂ ಇದು ಎಷ್ಟು ಔಚಿತ್ಯಪೂರ್ಣ.

ಟಕಲಾಕೋಟ್ ಮಂಡಿಯ ಹಲವು ಅಂಗಡಿಗಳಲ್ಲಿ ಜಪಸರ ಹಿಡಿದ ಮಾಲೀಕರನ್ನು ಕಾಣಬಹುದು . ಅಂಗಡಿಗೆ ಕಾಲಿಟ್ಟವರನ್ನು ಮುಗುಳ್ನಗೆಯಲ್ಲಿ ಸ್ವಾಗತಿಸುವಾಗಲೂ ಜಪಸರ ಸರಿಯುತ್ತಲೇ ಇರುತ್ತದೆ . ದರ ಕೇಳಿದರೆ ಸರ ಮಣಿಕಟ್ಟಿಗೆ ಜಾರಿಕೊಂಡು ಕೈಯಲ್ಲಿ ಕ್ಯಾಲ್ಕುಲೇಟರ್ ಬರುತ್ತದೆ . ಇದರ ಮೂಲಕವೇ ವ್ಯಾಪಾರವೆಲ್ಲ ನಡೆದು ಹೋಗುತ್ತದೆ ಪರಭಾಷೆಯ ಅಗತ್ಯವೇ ಇಲ್ಲವೆಂಬಂತೆ . ಹಣ ಜೇಬಿಗೆ ಸಂದಂತೆ ತಲೆಬಾಗಿ ಧನ್ಯವಾದಗಳನ್ನು ಸೂಚಿಸುತ್ತಲೇ ಮತ್ತೆ ಜಪಸರ ಕೈಯಲ್ಲಿ. ಒಂದೇ ವ್ಯಕ್ತಿಯಲ್ಲಿ , ಒಂದೇ ಕಾಲದಲ್ಲಿ ವ್ಯಾಪಾರಿ -ಯೋಗಿ ಇಬ್ಬರು ಇರುತ್ತಾರೆ. ದಾರ್ಚನ್‌ನ ಟೆಂಟ್ ಅಂಗಡಿಗಳ ಮಾಲೀಕರು ತಮ್ಮ ಮಕ್ಕಳ, ಹೆಂಗಸರ (ತಮ್ಮದು ಸಹ )ಫೋಟೋ ತೆಗೆಯಲು ನಿರಾಕರಿಸಿದರು. ಅವರ ಅಂಗಡಿಯಲ್ಲೆ ಮಾರಲೆಂದು ಫಿಲ್ಮ್ ರೋಲುಗಳನ್ನಿಟ್ಟಿದ್ದರು. ಏಕೆ ಎಂದಾಗ " ನೀವು ಕೇಳುತ್ತೀರಿ ಮಾರುತ್ತೇವೆ . ನಮಗದು ಬೇಡ ಅಷ್ಟೆ ". ಮೂಢ ನಂಬಿಕೆಯಲ್ಲೂ ಬಿಟ್ಟಿರದ ವ್ಯವಹಾರಿಕತೆ ಇವರದು .

ಈ ತೆರನ ವ್ಯಾಪಾರೀ ಮನೋಭಾವ ಟಿಬೇಟಿಯರಿಗೆ ಅನೂಚಾರವಾಗಿ ಬಂದದ್ದು . ಉತ್ತರದಲ್ಲಿ ಚೀನಾ , ಮಂಗೋಲಿಯಾಗೂ ದಕ್ಷಿಣದಲ್ಲಿ ಭಾರತ ನೇಪಾಳಕ್ಕೂ ಪಶ್ಚಿಮದಲ್ಲಿ ಪಾಕಿಸ್ತಾನ ಅಫ್ಘಾನಿಸ್ತಾನಕ್ಕೂ ಸಂಪರ್ಕವಿರುವ ಟಿಬೆಟ್ ರಣರಂಗವಾದಂತೆ ವ್ಯಾಪಾರ ಕೇಂದ್ರವೂ ಕೂಡ. ಅಲ್ಲದೇ ಬಹುತೇಕ ಬಂಜರು ಭೂಮಿಯ ಟಿಬೆಟಿನ ಆಹಾರ ಮತ್ತಿತರ ಅವಶ್ಯಕತೆಗಳು ಹೊರದೇಶದಿಂದಲೇ

ಪೂರೈಸಿಕೊಳ್ಳಬೇಕು. ತಮ್ಮಲ್ಲಿನ ಉಣ್ಣೆ, ಅಮೂಲ್ಯ ಹರಳುಗಳು, ಮತ್ತು ಬೊರಾಕ್ಸ್ ಉಪ್ಪನ್ನು ಮಾರಿ ಖಾದ್ಯಪದಾರ್ಥಗಳನ್ನು ಮರ ಮಟ್ಟುಗಳನ್ನು ಕೊಳ್ಳುವುದು ಹಿಂದಿನಿಂದಲೂ ನಡೆದು ಬಂದದು.

ನೇಪಾಳ ಮತ್ತು ಭಾರತ ಗಡಿ ಪ್ರದೇಶ (ಕಾಳಿ ನದಿಯ ಭಾಗ )ದಿಂದ ಹಿಮಾಲಯ ಶ್ರೇಣಿಗಳನ್ನು ದಾಟಿದರೆ ಮೊದಲು ಸಿಗುವ ಊರೇ ಟಿಕಲಾಕೋಟ್ . ಕರ್ನಾಲಿ ನದಿಯ ತೀರದಲ್ಲಿ ಎರಡು ದಂಡೆಗಳ ಮೇಲೆ ಪ್ರತಿ ವರ್ಷ ಬೇಸಿಗೆಯಲ್ಲಿ ನಾಲ್ಕೈದು ತಿಂಗಳು ಮಂಡಿಯ ವ್ಯಾಪಾರ ಬಿರುಸಿನಲ್ಲಿ ನಡೆಯುತ್ತದೆ. ಈ ಮಾರುಕಟ್ಟೆಯಲ್ಲಿ ಚೈನಾ ಪಿಂಗಾಣಿ ಸಾಮಾನುಗಳಿಂದ ಹಿಡಿದು ೨೦ ನೇ ಶತಮಾನದ ಸೆಲ್ ಚಾಲಿತ ಡಿಜಿಟಲ್ ಸಲಕರಣೆಗಳು ಎಲೆಕ್ಟ್ರಾನಿಕ್ ವಸ್ತುಗಳು ಕೂಡಾ ದೊರೆಯುತ್ತದೆ . ಇಲ್ಲಿ ಟಿಬೆಟ್ ಯುವಾನ್‌ಗಳೇ ಅಲ್ಲದೆ ಡಾಲರ್‌ಗಳು ಕೆಲವಡೆ ಭಾರತದ ರೂಪಾಯಿಗಳು ಚಾಲ್ತಿಯಾಗುವುದು ಸಾಮಾನ್ಯ. ಆದರೆ ಮರಳಿ ಚಿಲ್ಲರೆ ಸಿಗುವುದು ಟಿಬೆಟೀ ಯುವಾನ್‌ನಲ್ಲಿ ಮಾತ್ರ.

ಖೋಜಾರ್ ಗೊಂಪಾದೊಳಗೆ ಹೋಗುವಾಗ ನಾವು ಭಾರತೀಯರು ಬಾಗಿಲಿನ ಹೊರಗೆ ಮೆಟ್ಟುಗಳನ್ನು ಬಿಟ್ಟೆವು. ಅದೇ ಸಮಯಕ್ಕೆ ಟಿಬೆಟೀಯನ್ನೊಬ್ಬ ತಾನು ಧರಿಸಿದ್ದ ಉಣ್ಣೆಯ ಪಾಪಾಸು ಲ್ಹಾಮ್‌ನೊಂದಿಗೆ ಒಳಗುಡಿಯ ಒಳಗೆ ನಡೆದಿದ್ದ. ವರ್ಷದ ಒಂಭತ್ತು ತಿಂಗಳು ಬರ್ಫದ, ಇಲ್ಲಿನ ಕೊರವ ಚಳಿಯಲ್ಲಿ ಪ್ರದಕ್ಷಣೆಗೆ ಕಟ್ಟಿರುವ ಮೆಟ್ಟು ಬಿಚ್ಚಿಟ್ಟು ಬಾರೆನ್ನುವುದು ದಡ್ಡತನ. ಬಿಚ್ಚಲೇಬೆಂಕೆಂಬ ಕಟ್ಟುಪಾಡು ಮಾಡಿದರೆ ಪ್ರಾಯಶಃ ಶ್ರೀಸಾಮಾನ್ಯ ಮೆಟ್ಟು ಬಿಚ್ಚಿದವರೆ ನನ್ನ ನಮಸ್ಕಾರವನ್ನು ಹಾಕಲಿ ಎಂದು ಗೊಂಪಾದಡೆಗೆ ಮುಖಹಾಕುತ್ತಿರಲಿಲ್ಲವೇನೊ !

ಅತಿ ಶೀತ ಹವಾಮಾನದಿಂದಾಗಿ ಕೊರೆವ ನೀರಿನಲ್ಲಿ ಸ್ನಾನ ಅಸಾಧ್ಯ. ನೀರು ಕಾಯಿಸಲು ಉರವಲಿಗೆ ಕೊರತೆ . ಹೀಗಾಗಿ ಇಲ್ಲಿನ ಟಿಬೆಟೀಯರಿಗೆ ಖಂಡಿತವಾಗಲು ನೀರು ಚಹಾ ಕುದಿಸಲು ಛಾಂಗ್ ಮಾಡಲು ಮಾತ್ರ . ಅದರಲ್ಲಿ ದೇಹವನ್ನು ತೋಯಿಸುವುದಕ್ಕಲ್ಲ. ತಿಂಗಳುಗಂಟಲೆ ಸ್ನಾನದ ಯೋಚನೆಯನ್ನೇ ಮಾಡದ ಇವರು ಶುದ್ಧರು. ವಿಶುದ್ಧರು. ವಿಶೇಷ ರೀತಿಯಲ್ಲಿ ಮಡಿವಂತರು . ಇಡೀ ಊರನ್ನೇ ಸುತ್ತಿಬಂದ ಮೆಟ್ಟಿನಲ್ಲೆ ಒಳಗುಡಿಗೂ ಬರುವ ಇಂತಹ ಮಡಿವಂತರನ್ನು ಕೊಳಕರೆನ್ನುವುದು ಯಾವ ನ್ಯಾಯ ? ದಿನಕ್ಕೆರಡು ಬಾರಿ ಸ್ನಾನ ಮಾಡುವ ನಾವು ಟಿಬೆಟೀನಲ್ಲಿ ಎರಡು ದಿನಕ್ಕೊಮ್ಮ ಮಡಿ (ಸ್ನಾನ ವಲ್ಲ )ಮಾಡಿದ್ದರೆ ಹೆಚ್ಚು . ಇಲ್ಲಿ ಕಾರ್ಯಸಾಧ್ಯತೆ ಬಹು ಮುಖ್ಯ ನಂತರ ಗಣನೆಗೆ ಬರುವುದು ದೈವ ಭಕ್ತಿ ಮಡಿವಂತಿಕೆ .

ಪ್ರವಾಸ ಕಾಲದಲ್ಲಿ ನೋಡಿದ ಅನೇಕ ಸಣ್ಣ ಸಣ್ಣ ಚೋರ್ಟ್‌ನ್ ಕಟ್ಟಡಗಳು , ಪುಟ್ಟ ಗುಡಿಗಳು ವಾಸ್ತವವಾಗಿ ಹಿರಿಯ ಲಾಮಾಗಳ ಧನವಂತರ ಗಣ್ಯವ್ಯಕ್ತಿಗಳ ಸಮಾಧಿಗಳು ಗೊಂಪಾದ ಮೇಲಧಿಕಾರಿಗಳು ಮತ್ತು ಶ್ರಿಮಂತರು ಮಾತ್ರ ಧಹನ ಕ್ರಿಯೆಗೆ ಆರ್ಹರು . ಜನನ ಮರಣಗಳೆರಡರಲ್ಲು ಹಿಂದೂಗಳಂತೆ ಅನೇಕ ಕ್ರಿಯಾ ವಿಧಿಗಳನ್ನು ಎಲ್ಲರೂ ಪರಿಪಾಲಿಸಿದರೂ ಜೀವಾತ್ಮನಿಲ್ಲದ ಬೇಲೆಯಿಲ್ಲದ ಶವದ ದಹನಕ್ಕೆ ಅಮೂಲ್ಯ ಸೌದೆ ಬೆರಣೆಗಳನ್ನು ಬಳಸುವುದು ಇಲ್ಲಿನವರಿಗೆ ಅವಿವೇಕವಾಗುತ್ತದೆ . ಸತ್ತವರಿಗೆ ಆಗಬೇಕಾದ ಕ್ರಿಯಾಕರ್ಮಗಳೆಲ್ಲ ಮುಗಿದ ನಂತರ ಸಾಮಾನ್ಯ ಜನರ ಶವವನ್ನು ತುಂಡು ತುಂಡಾಗಿ ಕತ್ತರಿಸಿ ಹದ್ದುಗಳಿಗೆ ಎಸೆದು ಬಿಡುತ್ತಾರೆ. ಇಲ್ಲವೆ ಹತ್ತಿರದಲ್ಲ ನದಿ, ತೊರೆ ಇದ್ದರೆ ಅದಕ್ಕೆ

ಹಾಕುತ್ತಾರೆ . ಹಿರಿಯ ಲಾಮಾಗಳ ಶವಕ್ಕೆ ದಹನ ಕ್ರಿಯೆ ನಡೆಸಿ ಚಿತಾಭಸ್ಮವನ್ನು ಮಣ್ಣಿನೊಂದಿಗೆ ಕಲೆಸಿ ಗೋಪುರದಂತೆ ತ್ರಿಕೋನಾಕೃತಿ ಮಾಡಿ ಅದಕ್ಕಾಗಿ ಮಾಡಿದ ಚೋರ್ಟನ್‌ನೊಳಗಿಡುತ್ತಾರೆ. ಚೋರ್ಟನ್‌ನ ಕೆಳ ಚೌಕದ ಪೀಠ ಭೂಮಿಯ ಪ್ರತೀಕ ವಾದರೆ ಅದರ ಮೇಲಿನ ಗೋಲಾಕಾರದ ಭಾಗ ಜಲ. ಅದರ ಮೇಲಿನ ತ್ರಿಕೋನ ಭಾಗ ಅಗ್ನಿ ಅದರ ಮೇಲಿನ ಅರ್ಧ ಚಂದ್ರ ವಾಯು ಮತ್ತು ಅದರೊಳಗಿನ ಗೋಳ ಅಕಾಶ. ಹೀಗೆ ಯಾವರೀತಿಯಾದರೂ ಸರಿ ಪಂಚತತ್ವಗಳಿಂದಾದನ್ನು ಅವುಗಳಿಗೆ ಒಪ್ಪಿಸಿ ಬಿಡುತ್ತಾರೆ.

ಬುದ್ಧನು ಹೇಳಿದ ಪಶು ಹತ್ಯೆ ಪಶು ಬಲಿಯ ನಿಷೇಧವು ಶಾಕಾಹಾರ ಪದ್ಧತಿಗೆ ಒತ್ತು ಕೊಟ್ಟಿತು. ಟಿಬೆಟ್ಟಿನಲ್ಲಿ ಬುದ್ಧನು ಹೇಳಿದನೆಂದು ಶಾಕಾಹಾರವೇ ಬೇಕೆಂದರೆ ನಿರಾಹಾರವೇ ಗತಿ. ಇಲ್ಲಿನ ಬರಡು ಪರಿಸರದಲ್ಲಿ ಸಾಧ್ಯವಿರುವುದು ಮಾಂಸಾಹಾರವಷ್ಟೇ . ಈ ಇಕ್ಕಟಿಗೆ ಟಿಬೆಟೀಯರು ಕಂಡುಕೊಂಡ ಪರಿಹಾರ ಅದ್ವಿತೀಯ. ಅಹಾರವಾಗಲಿರುವ ಪಶುವಿನ ಕಿವಿಯಲ್ಲಿ ಮಣಿಮಂತ್ರಗಳನ್ನು ಹೇಳಿ ಅದಕ್ಕೆ ಮರುಜನ್ಮದಲ್ಲಿ ಮಾನವ ಶರೀರ ಸಿಗಲೆಂದು ಪ್ರಾರ್ಥಿಸಿ ತಮ್ಮ ಆಹಾರಕ್ಕಾಗಿ ಸಾವನ್ನಪ್ಪುವ ಪ್ರಾಣಿಗೆ ಹೃತ್ಪೂರ್ವಕ ವಿಧ್ಯುಕ್ತ ಧನ್ಯವಾದಗಳನ್ನು ಅರ್ಪಿಸುತ್ತಾರೆ. ನಂತರವೇ ಅದರ ಮೂಗು ಬಾಯಿಗಳನ್ನು ಮುಚ್ಚುವಂತೆ ಕಟ್ಟುತ್ತಾರೆ. ರಕ್ತಪಾತವಿಲ್ಲದೆ ಉಸಿರು ಕಟ್ಟಿ ಪ್ರಾಣಿ ಅಸುನೀಗುತ್ತದೆ. ಈ ಶವವನ್ನು ಕತ್ತರಿಸಿದರೆ ಪ್ರಾಣಿ ಹತ್ಯೆಯ ದೋಷವಿಲ್ಲವೆಂಬ ತರ್ಕ ಅವರದು. ಧರ್ಮನ್ಯಾಯವಾಗಿ ತಮಗೆ ಬೇಕಾಗುವಷ್ಟು ಮಾತ್ರ ಪ್ರಾಣಿಗಳನ್ನು ಈ ರೀತಿ ಕೊಲ್ಲುವರು. ವಿದೇಶಿ ಮಾರುಕಟ್ಟೆಗೆ ಒಯ್ಯಲೆಂದಾಗಲಿ, ಮಾರುಕಟ್ಟೆಯಲ್ಲಿ ಮಾರಲೆಂದಾಗಲಿ ಕೊಬ್ಬಿಸಿ ಸಾರಸಟ್ಟಾಗಿ ಕೊಚ್ಚಿ ಹಾಕುವ ಕಟುಕತೆ ಇವರಿಗಿಲ್ಲ. ಮಾಂಸದ ಕಾರ್ಖಾನೆಯಂತೆ ಪ್ರಾಣಿಗಳ ಸಾಮೂಹಿಕ ಹತ್ಯೆ ಮಾಡುವ ಕಸಾಯಿ ಖಾನೆಗಳಿಲ್ಲ.

ನಮ್ಮಲ್ಲಿಯಂತೆ ಇಲ್ಲಿ , ನ್ಗಾರಿ ಜಿಲ್ಲೆಯಲ್ಲಿ ಹಾದಿಗೊಂದು ಬೀದಿಕೊಂದು ಪ್ರಾಥಮಿಕ ಶಾಲೆಗಳಿಲ್ಲ. ಬೆಳಗ್ಗೆ ಒಂಭತ್ತರಿಂದ ಸಂಜೆ ಐದರವರೆಗೆ ನಾಲ್ಕು ಗೋಡೆಯೊಳಗೆ ಒತ್ತಾಗಿ ಕುಳಿತು ಉಸಿರುಕಟ್ಟುವ ವಾತಾವರಣದ ಒದಿಲ್ಲ. ಶಿಸ್ತಿನ ಸಿಪಾಯಿಗಳಂತೆ ಸಮವಸ್ತ್ರ ಧರಿಸಿ ಭಾರಿ ಪುಸ್ತಕಗಳ ಮೂಟೆ ಹೊತ್ತು ಬೆನ್ನು ಬಾಗಿಸಿ ನಡೆವ ಮಕ್ಕಳು ಟಿಬೆಟಿನಲ್ಲಿಲ್ಲ. ಎಲ್ಲಾ ವಯಸ್ಸಿನ ಮಕ್ಕಳು ತಂದತಾಯಿಯರೊಂದಿಗೇ ಇದ್ದು ದಿನನಿತ್ಯದ ಕಾರ್ಯಗಳಿಗೆ ತಮಗಾದ ರೀತಿಯಲ್ಲಿ ಸಹಕರಿಸುತ್ತಾರೆ. ಅಂತೆಯೇ ಜೀವನ ಕ್ರಮವನ್ನು ಹಿರಿಯರಿಂದ ಕಲಿಯುತ್ತಾರೆ. ನಿಮ್ಮ ಮಕ್ಕಳಿಗೆ ಓದು ಬರಹ ಬೇಡವೇ ಎಂದರೆ ಅದರ ಅವಶ್ಯಕತೆ ಏನಿದೆ ?ಓದು ಬರಹ ಕಲಿತರೆ ಮಾತ್ರ ಶಾಂತಿ ತೃಪ್ತಿ ಸಿಗುವುದೇನು ?ಎಂದು ಮರು ಪ್ರಶ್ನಿಸುತ್ತಾರೆ ಹಳ್ಳಿಯ ಹಿರಯರು. ಧರ್ಮೋಪದೇಶ ಪಡೆಯಲು ಧಾರ್ಮಿಕ ವಿಧಿ ವಿಧಾನಗಳನ್ನು ತಿಳಿಯಲು ಒಂದು ಮಗುವನ್ನು ಗೊಂಪಾದಲ್ಲಿ ಬಿಡುತ್ತೇವೆ ಅಷ್ಟು ಸಾಲದೇ ಎಂಬ ಧೋರಣೆ . ಉನ್ನತ ಶಿಖರಗಳೇ ದೇವರ ಮೂರ್ತಿಗಳಾಗಿ ಆಕಾಶವೇ ಮಂದಿರವಾಗಿ ಇನ್ನೂರಿಪ್ಪತ್ತು ಚದರ ಕಿಲೋಮೀಟರ್ ಹರಡಿ ನಿಂತ ಶುಭ್ರ ಜಲವೇ ಕಲ್ಯಾಣಿಯಾಗಿ ಸೂರ್ಯೋದಯ, ಸೂರ್ಯಾಸ್ತಗಳೇ ಪ್ರವಚನವಾಗಿ ಏರಿಳಿವ ಬೆಟ್ಟ ಮೈದಾನಗಳೇ ಮನೆಯಂಗಳವಾಗಿ, ಅಲ್ಲಿ ಬೆಳೆದ ಕಂದಮೂಲಗಳು ಹುಲ್ಲು ಹುಲ್ಲೇಗಳೇ ಪ್ರಸಾದವಾದವರಿಗೆ ಪ್ರಕೃತಿಯೇ ಧರ್ಮ , ಪ್ರಕೃತಿಯೇ ಗುರು, ಪ್ರಕೃತಿಯೇ

ಶಾಲೆಯೂ ಕೂಡ . ಇಂತಹ ನಿತ್ಯತೃಪ್ತರು , ವಿಶಾಲ ವಿಚಾರಿಗಳೆದುರು ನಾವು ಓದು ಬರಹ ಕಲಿತವರೆಷ್ಟು ಕುಬ್ಜರು ಎನಿಸಿತು. ಕುಟುಂಬದವರೆಲ್ಲಾ ಬೌದ್ಧಧರ್ಮೀಯರೆಂದ ಮೇಲೆ ಧರ್ಮದ ಬಗ್ಗೆ ತಿಳಿಯಬೇಡವೇ ಎಂದರೆ ಧರ್ಮದ ನೆಲೆಯಲ್ಲಿ ಧರ್ಮ ಸಮಾಜದ ರೀತಿ ನೀತಿಯಲ್ಲಿ ಸಮಾಜ, ನಮ್ಮ ಪಾಡಿಗೆ ನಾವು ಎಂಬ ನಿರಾತಂಕದ ಉತ್ತರ . ನಮಗೆ ಜೀವನದ ಗುರಿಯೆನಿಸುವ ವಿಷಯಗಳಾವುವೂ ಇವರನ್ನು ಕಾಡಲಾರದೆನಿಸಿತು. ಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸುವ ಚಿಂತೆ , ಮುಪ್ಪಿನ ಕಾಲಕ್ಕೆಂದು ಹಣ ಕೂಡಿ ಹಾಕುವ ಚಿಂತೆ, ಐಹಿಕ ಸುಖಸಂಪತ್ತನ್ನು ಗಳಿಸುವ ಚಿಂತೆ , ಸಮಾಜದಲ್ಲಿ ತನ್ನ ಸ್ಥಾನಮಾನದ ಚಿಂತೆ , ಗಳಿಸಿದ ಸಂಪತ್ತನ್ನು ರಕ್ಷಿಸುವ ಚಿಂತೆ , ರೋಗರುಜಿನದ ಚಿಂತೆ ಯಾವುದೇ ರೀತಿಯ ಚಿಂತೆಯನ್ನು ಹಚ್ಚಿಕೊಳ್ಳದೆ ಜೀವನ್ನು ಬಂದಂತೆ ಎದುರಿಸ್ಲಿ, ಪ್ರತಿದಿನವನ್ನು ಹೊಸದಾಗಿ ಸ್ವಾಗತಿಸಿ , ಖುಶಿಖುಶಿಯಲ್ಲಿ ಕಳೆದು ಬಿಡುವಂತಹ ಚಿತ್ತಪಾವನರು. ಪ್ರತಿಕೂಲ ಪ್ರಕೃತಿಯಾಗಲೀ, ಧರ್ಮ ಕರ್ಮಗಳಾಗಲೀ, ರಾಜಕೀಯ ದಬ್ಬಾಳಿಕೆಯಾಗಲೀ ಯಾವುದೇ ರೀತಿಯ ದಮನವನ್ನು ಮಾಡಲಾರರು ಮಾಡಿಸಿಕೊಳ್ಳರು. ಅದಮ್ಯರು . ಇವರು ಗಂಭೀರವಾಗಿ ತೆಗೆದುಕೊಳ್ಳುವ ವಿಷಯವೆಂದರೆ ಆತ್ಮ ಸ್ವಾತಂತ್ರ್ಯ, ತಮಗೆ ಸರಿತೋರಿದುದನ್ನು ಮಾಡುವ ಹಕ್ಕು. ಎಂತೆಲ್ಲಾ ಸನ್ನಿವೇಶದಲ್ಲೂ ಮನಶ್ಯಾಂತಿ ಕಾಪಾಡಿಕೊಳ್ಳುವ ನೀತಿ . ಪ್ರತಿಯೊಬ್ಬರಿಗೂ ಅವರದೇ ನಿರ್ಧಾರ ತೆಗೆದುಕೊಳ್ಳುವ ಹಕ್ಕಿದೆ. ನಮ್ಮ ಅಭಿಪ್ರಾಯವನ್ನು ಮತ್ತೊಬ್ಬರ ಮೇಲೆ ಹೇರಿದಾಗ ತಾನೆ ಮನಸ್ತಾಪ ಜಗಳ ಹಾಗೆ ಮಾಡಿದ್ದರೆ ಶಾಂತಿ ತೃಪ್ತಿ ತಾನಾಗಿಯೇ ಬರುತ್ತದೆ ಎನ್ನುವ ಮನೋಭಾವದ ಅಜಾತಶತ್ರುಗಳಿವರು. ಈ ಸ್ವಸ್ಥ ಮನಸ್ಸಿನಿಂದಾಗಿ ಸ್ವಸ್ಥದೇಹ, ಧೃಡಕಾಯ, ಕಷ್ಟ ಸಹಿಷ್ಣುತೆ, ಪ್ರಸನ್ನಚಿತ್ತತೆ, ಆದರದ ಮನೋಭಾವ , ನಿತ್ಯ ತೃಪ್ತಿತೆ ಲಭಿಸಿದೆ. ಎಲ್ಲ ಅರ್ಥದಲ್ಲಿ ನಾ ಕಂಡ ಟಿಬೆಟೀ ಜಾನಪದರು ಸ್ವತಂತ್ರರು . ನಿಸರ್ಗಕ್ಕೆ ಹತ್ತಿರವೇ ಉಳಿದವರು ದೇವನಾಂಪ್ರಿಯರು.

ಟಿಬೆಟೀ ಜನತೆಯ ಕಾಲುಭಾಗ ಬ್ರಹ್ಮಚಾರಿ ಭಿಕ್ಷುಗಳಾಗಿ ಬೌದ್ಧ ಧರ್ಮ ಪರಿಪಾಲಕರಾದರೆ ಮಿಕ್ಕವರಲ್ಲಿ ಏಕಪತ್ನೀ ಸಂಸಾರ ಬಹು ಸಾಮಾನ್ಯ . ಬಹುಪತಿತ್ವ ಇಲ್ಲಿನ ಸ್ಥಿತಿ ಗತಿಗಳನ್ನನುಸರಿಸಿ ಜನಸಂಖ್ಯೆಯನ್ನು ಮಿತಗೊಳಿಸುವಲ್ಲಿ ಸಹಕಾರಿಯಾಗಿದ್ದರೆ ಕುಟುಂಬದ ವೈಯಕ್ತಿಕ ಕಾರಣಕ್ಕಾಗಿ ಬಹುಪತ್ನಿತ್ವವೂ ಉಂಟು . ಅಪರೂಪಕ್ಕೆ ಬಾಲ್ಯ ವಿವಾಹ ಕಂಡುಬಂದರೆ ವಿಧವಾ ವಿವಾಹ ಸಾಮಾನ್ಯ ಸಂಗತಿ ನಿಯೋಗ ಪದ್ಧತಿಯೂ ಉಂಟು. ಹುಡುಗಿ ತಾನು ಮೆಚ್ಚಿದ ಹುಡಗನನ್ನು ಮದುವೆಯಾಗಲು ಹಿರಿಯರೇ ಪ್ರೋತ್ಸಾಹಿಸುತ್ತಾರೆ. ವಿವಾಹ

ಬೇಡವೆನಿಸಿ ಸನ್ಯಾಸಿಯಾದರೂ ಒಪ್ಪಿಗೆಯಿರುತ್ತದೆ. ಇಂತಹ ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನ ಪುರುಷರಿಗೆ ಸಮಾನವಾದದ್ದೇ. ಗೌರವಯುತವೂ ಕೂಡ. ಇಲ್ಲಿನ ಮಹಿಳೆ ಶೋಷಿತ ವರ್ಗದವಳಲ್ಲ ಎರಡನೇ ದರ್ಜೆಯ ಪ್ರಜೆಯೂ ಅಲ್ಲ. ಸನ್ಯಾಸ ಜೀವನ ಬಿಟ್ಟು ಮದುವೆಯಾಗಿ ಸಂಸಾರಿಯಾಗಬೇಕೆಂದರೆ ಅದೂ ಸಾಧ್ಯ. ಭಿಕ್ಷು ಅಥವಾ ಭಿಕ್ಷುಣಿ (ಬಹುತೇಕ ಚಿಕ್ಕ ವಯಸ್ಸಿನಲ್ಲಿ ಗೊಂಪಾ ಸೇರಿದವರು )ವಿವಾಹವಾಗದೇ ಜೊತೆಗೂಡಿದರೂ ಸಮಾಜ ಅವರನ್ನು ಬಹಿಷ್ಕರಿಸದೇ ಉದಾಸೀನ ಮಾಡುತ್ತದೆ. ಗೊಂಪಾಗೆ ನಿಗದಿತ ದಂಡ ಕೂಡಿಸಿ ಕೈತೊಳೆದು ಕೊಳ್ಳುತ್ತದೆ. ಹೊರದೇಶದವರಿಗೆ ಇಲ್ಲಿನ ವಿವಿಧ ವಿವಾಹ ಪದ್ಧತಿ ಮತ್ತು ವಿವಾಹ ರಹಿತ ಸಂಸಾರಗಳು ನೈತಿಕ

ಸಡಿಲತೆಯಾಗಿ ಕಂಡರೆ ಅಚ್ಚರಿಯಿಲ್ಲ. ಇದು ನೈತಿಕ ಸಡಿಲತೆಯಲ್ಲ -ಇಲ್ಲಿನ ಪರಿಸ್ಥಿತಿಗಳಿಗೆ ಹೊಂದುವ , ಬದುಕಿನ ಕಷ್ಟಗಳನ್ನು ಎದುರಿಸಲು ಬೇಕಾದ ಸಂಪ್ರದಾಯಗ ಸಡಿಲಗೊಳಿಸುವಿಕೆ ಎಂಬುದನ್ನು ವಿದೇಶೀಯರು ಅರಿಯಲಾರರು. ಈ ವಿದೇಶೀಯ-ನೈತಿಕತೆ -ಸ್ವಚ್ಛತೆಯಿರುವ ದೇಶಗಳಲ್ಲಿರುವಷ್ಟು ವೇಶ್ಯಾವೃತ್ತಿ , ದರೋಡೆ, ಮಾನಸಿಕ ರೋಗ -ವಿರೂಪತೆ, ಲೈಂಗಿಕ ರೋಗಗಳು, ಏಡ್ಸ್ ಇಲ್ಲಿಲ್ಲ !ರೋಗರುಜಿನಗಳಿಲ್ಲ, ಸ್ತ್ರೀ ದಬ್ಬಾಳಿಕೆಯಿಲ್ಲ. ವರದಕ್ಷಿಣೆ ಕನ್ಯಾದಹನದ ದಳ್ಳುರಿ ಇಲ್ಲಿಲ್ಲ. ಇದಕ್ಕೆ ಕಾರಣ, ಮಾನವ ಸಹಜ ಸ್ವಭಾವಕ್ಕೆ ಅನುಗುಣವಾಗಿ, ಪ್ರಕೃತಿ ಪರಿಸರಕ್ಕೆ ಹೊಂದಿಕೊಂಡಂತೆ , ಸಭ್ಯತೆಯ ಅನವಶ್ಯಕ ಸಂಕೋಲೆಗಳಿಲ್ಲದ ಸಮಾಜ ಟಿಬೆಟೀಯರದು. ಹೆಚ್ಚು ಮುಕ್ತ ರೀತಿಯ ವ್ಯಾವಹಾರಿಕ ಜೀವನ ವಿಧಾನ ಇವರದು.

ನಮ್ಮಲ್ಲಿಯಂತೆ ಟಿಬೆಟ್ಟಿ ಸನ್ಯಾಸಿಗಳು ಭಿಕ್ಷೆ ಬೇಡುವ ಪರವಾಲಂಬಿಗಳಾಗಿ ಜೀವನ ನಡೆಸರು. ಧರ್ಮ ದೀಕ್ಷೆತೊಟ್ಟರೂ ಕಾಯಕ ಮಾಡುವವರು. ಎಲ್ಲ ಬಗೆಯ ಕಾಯಕ ಇವರದು - ಶಿವಶರಣರಂತೆ. ಗುರುಗಳು, ಪುರೋಹಿತರು, ಅರ್ಚಕರು, ಹಿರಿಯ ಕಿರಿಯ ಅಧಿಕಾರಿಗಳು, ವ್ಯಾಪಾರಿಗಳು, ಕುರಿಕಾಯುವವರು, ಗುಡಿಸುವವರು, ಸೇವಕರು, ಕೂಲಿಯಾಳುಗಳು, ಕುದುರೆಯೋಡಿಸುವವರು, ಚಮ್ಮಾರರು, ದರ್ಜಿಗಳು, ರೈತರು, ಸೈನಕರು, ಶವವನ್ನು ತುಂಡರಿಸುವವರು, ಹೀಗೆ ಯಾವುದೇ ವೃತ್ತಿಯನ್ನು ಬೇಕಾದರೂ ಮಾಡುವವರು. ಸಮಾಜದ ತೇರನ್ನು ಎಳೆಯುವಲ್ಲಿ ಸಂಸಾರಿಗಳು ಮತ್ತು ಸನ್ಯಾಸಿಗಳು ಸಮಾನ ಸ್ಕಂಧರು. ಧರ್ಮ ಬಂಧುಗಳು, ಬುದ್ಧನ ಶಿಷ್ಯರು. ಭಿಕ್ಷುಗಳೂ ಮಾಂಸಾಹಾರಿಯಾದರೆ, ಮಧ್ಯಪಾನಿಗಳಾದರೆ ತಪ್ಪೇನೆಂದು ಇವರ ತರ್ಕ .

ಮಾನಸಸರೋವರದಲ್ಲಿ ಪರಿಚಯವಾದ ಗೆಳೆಯ ಮೋಲೋನ ಅಭಿಪ್ರಾಯ ಬಹುಶಃ ಟಿಬೆಟ್ಟಿನ ಜನಸಾಮಾನ್ಯನ, ಅದರಲ್ಲೂ ಒಳಗ್ರಾಮಗಳ ಸಂಪ್ರದಾಯಸ್ಥ ಹಳ್ಳಿಗನ ಮನೋಭಾವನೆಯ ಸಮರ್ಪಕ ನಮೂನೆ. `ಚೀನಾದಲ್ಲಿ ಬಹು ಅಗ್ಗವಾಗಿ ಬೈಸಿಕಲ್ಲು ದೊರೆಯುವುದಲ್ಲವೇ?ನೀವೇಕೆ ಅದನ್ನು ಹೆಚ್ಚಾಗಿ ಬಳಸುವುದಿಲ್ಲ ?ನಡೆದೇ ಹೋದರೆ ಸಮಯ ಹಿಡಿಯುವುದಿಲ್ಲವೇ ?ಎಂದು ಪ್ರಶ್ನಿಸಿದಾಗ ಅವನು ಕೊಟ್ಟ ಉತ್ತರ ಮಾರ್ಮಿಕವಾಗಿತ್ತು . `ಬೈಸಿಕಲ್ಲನ್ನು ಕೊಂಡರೆ ಅದು ಹೋಗಬಹುದಾದ ರಸ್ತೆಯಲ್ಲಿ ಮಾತ್ರ ಉಪಯೋಗ. ಮಿಕ್ಕಂತೆ ನಾನೇ ಅದನ್ನು ಹೊರಬೇಕಲ್ಲವೆ?ಅಥವಾ ಇಂತಹ ರಸ್ತೆಯಲ್ಲಿನ ಜಾಗಗಳಿಗೆ ಹೋಗುವುದನ್ನೇ ಬಿಡಬೇಕು. ಅದರ ಟೈರು ಹೋದರೆ ಹೊಸದು ತರಲು, ರಿಪೇರಿ ಮಾಡಲು, ಬಲ್ಬು, ಟಾರ್ಚ್ , ಅದಕ್ಕೆ ಬೀಗ ಎಂದು ನೂರೆಂಟು `ಬೇಕು ' ಗಳು ಹುಟ್ಟುತ್ತವೆ. ಅದಾವುದೂ ಇಲ್ಲದೆ ಈಗ ಬಿಡುಬೀಸಾಗಿ ಎಲ್ಲೆಂದರಲ್ಲಿಗೆ ಓಡಾಡುತ್ತೇನೆ. ಹಸಿದಾಗ ಏನಿದ್ದರದು ಉಣ್ಣುತ್ತೇನೆ. ಎಲ್ಲಿ ರಾತ್ರಿಯಾದರಲ್ಲಿ ಮಲಗುತ್ತೇನೆ. ಕೆಲಸವಾದ ನಂತರ ಮನೆಗೆ ಮರುಳುತ್ತೇನೆ .ನನ್ನ ದೇಹ ನೋಡು ಹೇಗಿದೆ !ಇಷ್ಟಕ್ಕೂ ಬೈಸಿಕಲ್ಲು ಸವಾರಿ ಮಾಡಿ ಆತುರಮಾಡಿ ಹೋಗುವುದೇಕೆ. ಎಲ್ಲಿಗೆ ?ಸಮಯ ಹಿಡಿಯಬಹುದೆಂದು ಹಿಟ್ಟು ಹಸಿಯಾಗೇ ನುಂಗಿದರೆ ಹೊಟ್ಟೆ ನೋಯುವುದಲ್ಲವೇ?ಸೂರ್ಯ ಸುತ್ತಲಿನದನ್ನು ನೋಡುತ್ತ ಸಂಜೆಯವರೆಗೂ ನಡೆಯುತ್ತಾನಲ್ಲವೇ? '

ನಡಿಗೆಯಲ್ಲೇ ೫೦ -೬೦ ಕಿ.ಮೀ. ಹೋಗುವವನು ಸೋಮಾರಿಯಂತೂ ಅಲ್ಲ. ಸೈಕಲ್ಲು

ಕಾರು ಇಲ್ಲದವನೆಂದು ಅತೃಪ್ತಿಯೂ ಇಲ್ಲ. ಇದ್ದರೂ ಬೇಡವೆಂದು ಬಿಟ್ಟವನಂತೆ ನಿರಾಳದ ಹಗಲು ರಾತ್ರಿಗಳು ಇವನ ಪಾಲಿಗೆ. ಇವನೀಗ ವ್ಯಾವಹಾರಿಕ ವಾಸ್ತವಿಕ ಮನೋಭಾವದ ಬುದ್ಧನ ತತ್ವಗಳ ಒಳ ಮರ್ಮವನ್ನರಿತ ನಿಜವಾದ ಶ್ರಾವಕ ಶಿಷ್ಯ !ಪ್ರಕೃತಿಯಂಗಳದಲ್ಲಿರುವ ಇಂತಹ ಶ್ರಾವಕರಿಗೆ ನಾಗರಿಕತೆಯ, ಸಭ್ಯತೆಯ ಅನಾವಶ್ಯಕ ಬೇಡಿಗಳನ್ನು ತೊಡಿಸಿದರೆ, ಪ್ರಾಪಂಚಿಕ ಅಭಿವೃದ್ಧಿಯ ಸಂಕೋಲೆ ಜಡಿದರೆ ಒಪ್ಪಿಯಾರೇ ?

ಮೋಲೋನಂಥ ಜಾನಪದರ ಧೃಡ ವಿಶ್ವಾಸದಂತೆ ಗೊಂಪಾದ ತಂತ್ರವಿದ್ಯೆ ಬಲ್ಲ ರಿನ್ ಪೋಚೆ ಇಂತಹ ಸೈಕಲ್ಲುಗಳಿಲ್ಲದೆಯೇ ಆಕಾಶದಲ್ಲಿ ಹಾರಿಹೋಗಬಲ್ಲ. ಮರಳನ್ನು ಚಿನ್ನವಾಗಿಸಿ ಹರಳನ್ನು ವಜ್ರವಾಗಿ ಮಾಡಬಲ್ಲ. ಆದರೆ ರಿನ್ ಪೋಚೆಯ ಶಕ್ತಿ -ಸಿದ್ಧಿಗಳಿರುವುದು ಧನಕನಕ ಸುರಿಸುವುದಕ್ಕಲ್ಲ, ಜನತೆಯನ್ನು ಧರ್ಮ ಮಾರ್ಗದಲ್ಲಿ ನಡೆಸಿಕೊಂಡು ಹೋಗಲು . ಇಂತಹ ಜನಪದ ಟಿಬೆಟ್ ಸಮಾಜ ಅನುಕೂಲಸಿಂಧುವಾಗಿ ಬುದ್ಧನ ತತ್ವಗಳನ್ನು ತನಗೆ ಬೇಕಾದಂತೆ ಅಳವಡಿಸಿಕೊಂಡು ಇಂದಿಗೂ ಬುದ್ಧಾನುಯಾಯಿಯಾಗಿಯೇ ಉಳಿದಿದೆ, ಧರ್ಮವನ್ನು ಉಳಿಸಿದೆ.

ಇಪ್ಪತ್ತೊಂದನೇ ಶತಮಾನದ ಹೊಸ್ತಿಲಲ್ಲಿ ನಿಂತಿರುವ ವೈಜ್ಞಾನಿಕ ಜಗತ್ತಿನ ಅತಿ ಶೀಘ್ರಗಾಮಿ ನಾಗರಿಕತೆಯೂ ಟಿಬೆಟೀ ಧರ್ಮ -ಕರ್ಮ ಸಾಮರಸ್ಯದ ಈ ನಿಲುವನ್ನು ಅಲುಗಾಡಿಸಲಾರದೆಂದ ಮೇಲೆ ಇದು ಟಿಬೆಟೀ ಅಧ್ಯಾತ್ಮಿಕ ಸಾಧನೆಯೇ ಸರಿ. ಪರ್ಯಾವರಣಕ್ಕೆ ಹೊಂದಿಕೊಂಡ ಯೋಗ್ಯತಮ ಜೀವನಕ್ರಮವನ್ನಿವರು ಕಂಡುಕೊಂಡಿರಬೇಕು. ಶಾಂತಿ ನೆಮ್ಮದಿಯ ಜೀವನ ಇವರದಾಗಿದೆಯೇ ?ನಾನು ನೋಡಿದ ನ್ಗಾರಿ ಜಿಲ್ಲೆಯ ಹಳ್ಳಿಗರಲ್ಲಂತೂ ಈ ಶಾಂತಿ ನೆಮ್ಮದಿ ಎದ್ದು ಕಾಣುತ್ತಿತ್ತು.

ಬೆಳಗ್ಗೆ ಖೋಜಾರಕ್ಕೆ ಹೊರಟಾಗ ಬುರಾಂಗ್ ಹೊಟೇಲಿನ ಅಂಗಳದಲ್ಲಿ ನಡೆಯುತ್ತಿದ್ದ ಬಿಲಿಯರ್ಡ್ಸ್ ಆಟ ನಾಲ್ಕು ಘಂಟೆಯ ನಂತರ ನಾವು ಮರಳಿ ಬಂದಾಗಲೂ ಜಾರಿಯಲ್ಲಿತ್ತು . ಹೆಚ್ಚು ದೇಹಶ್ರಮವಿಲ್ಲದೆ,ಕಾಲದ ಪರಿಮಿತಿಯಿಲ್ಲದೆ ತಣ್ಣನೆಯ ಹವೆಯಲ್ಲಿ ಹಿತವಾದ ಬಿಸಿಲಿಗೆ ಬೆನ್ನು ಕಾಯಿಸುತ್ತಾ ಆಡಿದ್ದ ಬಿಲಿಯರ್ಡ್ಸ್ ಆಟ ಟಿಬೆಟೀಯರ ಅಚ್ಚುಮೆಚ್ಚಿನ ಆಟ. ನಾಲ್ಕು ಜನ ಕಲೆಯುವ ಕಡೆ ಒಂದು ಟೇಬಲ್ಲನ್ನಿಟ್ಟು ಅಲ್ಲಿ ಬಂದು ಹೋಗುವ ಯುವಕರು ವಯಸ್ಕರು ಸಮಯ ಸಿಕ್ಕಂತೆ ಆಟ ಆಡಿ ಹೋಗುತ್ತಾರೆ. ಬುರಾಂಗ್ ಹೊಟಲಿನಂಗಳದಲ್ಲಿ , ಟಕಲಾಕೋಟ್ ಮಂಡಿಯಲ್ಲಿ , ಗಾಂಗ್ಸೈಸ್ ಹೊಟೆಲಿನ ಹಿಂಬದಿಗೆ ಇಟ್ಟಿದ್ದ ಬಲಿಯರ್ಡ್ಸ್ ಟೇಬಲ್‌ಗಳ ಸುತ್ತ ಜನರು ಸುತ್ತುವರಿದಿದ್ದುದು ಕಂಡಿತು. `ಇದೇ ನಿಮ್ಮ ರಾಷ್ಟ್ರೀಯ ಕ್ರೀಡೆಯೇನು ?ಬಂದು ಹೋಗುವವರೆಲ್ಲಾ ಬಹಳ ತನ್ಮಯರಾಗಿ ಆಡುತ್ತಿದ್ದಾರಲ್ಲ ? ' ಎಂದು ಪಕ್ಕದ್ದಲ್ಲಿದ್ದ ಡೇವಿಡ್‌ನನ್ನು ಮಾತಿಗೆಳೆದೆ. ನೀನು ಅಣಕಿಸಿ ಹೇಳುವ ಹಾಗೆ ಯಾರೂ ವರ್ಲ್ಡ್ ಛಾಂಪಿಯನ್ ಆಗಿಲ್ಲ ಬಿಡು. ಆದರೆ ಜನಪ್ರಿಯ ಆಟವೇನೋ ಹೌದು. ನನ್ನನ್ನು ಕೇಳದರೆ ಇದು ಸೋಮಾರಿಗಳು ,ದೇಹಶ್ರಮ ಬೇಡದವರ ಆಟ, ಬೇರಾವ ಆಟಗಳನ್ನು ಆಡಲು ಬಾರದ , ಆಡಲು ಕಾಸಿಲ್ಲದ ಬಡವರ , ಹಳ್ಳಿಗರ ಆಟ. ನಮಗೆಲ್ಲ (ಯುವಕರಿಗೆ ಅದರಲ್ಲೂ ಉತ್ಸಾಹೀ ಯುವಕರಿಗೆ )ನಿಜವಾದ ಕ್ರೀಡೆಯೆಂದರೆ ಕುದುರೆ ಸವಾರಿ - ಸವಾರಿಯಲ್ಲೇ ಐದಾರು ರೀತಿಯ ಆಟಗಳು -ಪೋಲೋ, ಬಿಲ್ಲುಗಾರಿಕೆ, ಓಟದ ಪಂದ್ಯ ,ಭರ್ಜಿ ಎಸೆತ ಎಲ್ಲವೂ ಓಡುತ್ತಿರುವ ಕುದುರೆಯ ಮೇಲೆಯೇ. ನಾನು ನಿಮ್ಮನ್ನೇಲ್ಲಾ ಕರೆದು ತರಲು

ಲಿಪುಲೇಖ್‌ಗೆ ಬಂದಾಗ ನೀನು ನೋಡಿದೆಯಲ್ಲವೇ ?ಕುದುರೆಯೇರಿ ಪಾಸ್‌ಗೆ ಬಂದವ ನಾನೊಬ್ಬನೇ !' ಆವನಿಗಿಷ್ಟವಾದ ವಿಷಯವನ್ನು ಕೆಣಕಿದ್ದೆನೆನಿಸುತ್ತದೆ. ಅವನೂ ಮಾತಾಡುವ ಹುಮ್ಮಸ್ಸಿನಲ್ಲಿದ್ದ. `ಬಿಲ್ವಿದ್ಯೆ, ಮಲ್ಲಯುದ್ಧ ಕೂಡ ನಮಗೆಲ್ಲಾ ಇಷ್ಟವಾದದ್ದೇ. ಆದರೆ ನಮ್ಮ ಹೆಮ್ಮೆಯ ಮನೋರಂಜನೆಯೇನು ಗೊತ್ತೇ ? -ಡಿಬೆಟ್ - `ತ್ಸೆನ್ ಯಿ '. ಇನ್ನಾವ ದೇಶದಲ್ಲೂ ಕಂಡು ಬರದ ನಮ್ಮ ದೇಶದ ವಿಶಿಷ್ಟ ರೀತಿಯ ಚರ್ಚೆ .ಎಂದು ಅದನ್ನು ವಿವರಿಸಿದ. ಗೊಂಪಾಗಳಿಗೆ ಸೇರಿದ ವಿದ್ಯಾಲಯಗಳಲ್ಲಿನ ವಿದ್ಯಾರ್ಥಿಗಳು ಬಿಡುವು ದೊರೆತಾಗಲೆಲ್ಲ ಇಬ್ಬಿಬ್ಬರಂತೆ ಜೊತೆಗೂಡುತ್ತಾರೆ. ಪ್ರಶ್ನೋತ್ತರ ರೂಪದಲ್ಲಿ ಯಾವುದಾದರೂ ವಿಷಯವನ್ನು ಕುರಿತು ಚರ್ಚಿಸುತ್ತಾರೆ. ಆದರೆ ಈ ಚರ್ಚೆಯನ್ನು ವಿಶಿಷ್ಟ ರೀತಿಯಲ್ಲೇ ಮಾಡಬೇಕು. ಆದರದ್ದೇ ಆದ ಪದ್ಧತಿಯಿದೆ. ಒಬ್ಬ ಪ್ರಶ್ನೆಯ ಪದಗಳನ್ನು ಲಯಬದ್ಧವಾಗಿ ಏರುದನಿಯಲ್ಲಿ ಉಚ್ಚರಿಸುತ್ತಾ ಕಾಲು ಕಟ್ಟಿ ಕೈ ಚಪ್ಪಾಳೆಯಿಕ್ಕಿ ಕೇಳುತ್ತಾನೆ. ಇನ್ನೊಬ್ಬ ತಕ್ಷಣವೇ ತರ್ಕಬದ್ಧವಾಗಿ, ಲಯಬದ್ಧವಾಗಿ ಶಾಸ್ತ್ರಕ್ಕನುಸಾರವಾಗಿ ಉತ್ತರಿಸಬೇಕು. ಇಲ್ಲದಿದ್ದಲ್ಲಿ ಸೋತಂತೆ. ಈ ರೀತಿಯ ಚರ್ಚೆಗೆ ಯಾವ ಶಾಸ್ತ್ರವಾದರೂ ಆದೀತು. ತರ್ಕಕ್ಕೆ ಅಳವಟ್ಟಿರೆ ಸಾಕು. ಪ್ರಶ್ನೆಯ ಗಮ್ಮತ್ತು ಕೇಳುವವನ ಕುಣಿತದಲ್ಲಿ, ಹಾವಾಭಾವದಲ್ಲಿ , ಕಾಲುಕುಟ್ಟುವ ಜೋರಿನಲ್ಲಿ, ಚಪ್ಪಾಳೆಯ ಸದ್ದಿನಲ್ಲಿರುತ್ತದೆ. ಅವರ ಗುರು ಹೇಳಿದಂತೆ ಕಾಲು ಎಷ್ಟು ಜೋರಾಗಿ ಕುಟ್ಟಬೇಕೆಂದರೆ ನರಕದ ಬಾಗಿಲು ಮುರಿದು ಬೀಳಬೇಕಂತೆ . ಚಪ್ಪಾಳೆಯ ಸದ್ದು ಅದರ ಮೂಲಕ ಹೊರಟು ಜ್ಞಾನದ ಗುಡುಗು ಪಾತಾಳದಲ್ಲಿರುವ ಎಲ್ಲ ಭೂತ ಪ್ರೇತಗಳ ಹುಟ್ಟಡಗಿಸುವಂತಿರಬೇಕಂತೆ.

ಈ ರೀತಿ ವಿದ್ಯಾರ್ಥಿಗಳಿಗೆ ಚರ್ಚೆ ಮಾಡುವ ರೀತಿಯನ್ನು ಹೇಳಿಕೊಡುವ ವಿಷಯವೇ ತಾರಿಗ್. ಮಕ್ಕಳು ೮ ವರ್ಷದವರಾದಾಗಲೇ ಪದ್ಧತಿಯನ್ನು ಕಲಿಯಲಾರಂಭಿಸುತ್ತಾರೆ.

ಈ ರೀತಿ, ವಿದ್ಯಾರ್ಥಿಗಳಲ್ಲಿನ ಚರ್ಚೆ ಮನೋರಂಜನೆಯಷ್ಟೆ ಅಲ್ಲದೆ ಅವರು ಕಲಿತುದನ್ನು ಒರೆಗೆ ಹಚ್ಚುವ ಸಾಧನವೂ ಕೂಡ. ಅವರಲ್ಲಿ ವಿಶ್ಲೇಷಣ ಶಕ್ತಿ, ತರ್ಕಬದ್ಧ ವಿಚಾರ ಮಂಡನ ಶಕ್ತಿ, ಚುರುಕುಗೊಂಡ ಬುದ್ಧಿಯನ್ನು ಜಾಗೃತಗೊಳಿಸುವ ಸಾಧನವೂ ಆಗಿದೆ. ವರ್ಷಾವಧಿ ಉತ್ಸವಗಳ ಅಂಗವಾಗಿ ನಡೆಯುವ ಚರ್ಚಾಗೋಷ್ಠಿಗಳಲ್ಲಿ , ಸ್ಪರ್ಧೆಗಳಲ್ಲಿ ಭಾಗವಹಿಸಲು ತಯಾರಿಯೂ ಸಹ . ಇಂತಹ ವಾಗ್ವಾದಗಳು ವಿದ್ಯಾಲಯಗಳ ಗುರು ಹಿರಿಯರಲ್ಲೂ ನಡೆಯುತ್ತದೆ. ಶತಮಾನಗಳ ಹಿಂದೆ ಭಾರತದಾದ್ಯಂತ ಬೌದ್ಧ ಭಿಕ್ಷುಗಳ ಮತ್ತು ವೈದಿಕ ಬ್ರಾಹ್ಮಣ ಪಂಡಿತರ ನಡುವೆ ನಡೆಯುತ್ತಿದ್ದ ವಿಖ್ಯಾತ , ಗಂಭೀರತಮ ಚರ್ಚಾಕೂಟಗಳಲ್ಲಿ (ವಾಗ್ಯುದ್ಧವೇ ) ಪಣವಾಗಿಡುತ್ತಿದ್ದುದು ಅವರವರ ಶಿಷ್ಯವೃಂದದ ಭವಿಷ್ಯ ಮತ್ತು ಮತಾಂತರ !ಅದೇ

ಪದ್ಧತಿಯ ಪಳೆಯುಳಿಕೆಯಿರಬೇಕು ಈ ರೀತಿ ನರಕದ ಬಾಗಿಲನ್ನು ಮುರಿದು ಬೀಳಿಸುವ ವಾಗ್ಯುದ್ಧದ ಮನರಂಜನೆ . ಅವಶ್ಯ ನೋಡುವಂತಹುದು -ಕೇಳುವಂತಹುದು.

ಕೈಲಾಸ ಪರಿಕ್ರಮದಲ್ಲಿ ನಮ್ಮೊಡನೆ ಬಂದಿದ್ದ ಯಾಕ್‌ಮ್ಯಾನ್ ಅಳಿಗುಳಿಮಣೆಯಾಟದಂತಹ ಆಟವನ್ನಾಡುವುದನ್ನು ನೋಡಿದ್ದೆ.ಅವರಾರೂ ದೇಹಕ್ಕೆ ಆಯಾಸವಾಗುವಂತಹ ಆಟಗಳನ್ನಾವುದೂ ಆಡುವಂತೆ ಕಾಣಲಿಲ್ಲ. ಜಗತ್ತಿಗೇ ಛಾವಣಿಯಾದ ಟಿಬೆಟಿನಲ್ಲಿ ಕೆಳಬಯಲಿನ ಆಟ ಓಟಗಳು ಸಾಧ್ಯವೂ ಇಲ್ಲವಲ್ಲ (ವಿರಳ ಗಾಳಿಯಿಂದಾಗಿ )ಛತ್ತಿನಲ್ಲಿ ಕುಳಿತಿರುವವರು ಆಡಬಹುದಾದದ್ದು ಹರಟೆ -ಹಾಡು

ತಾನೇ. ಅಂತೆಯೇ ಬಾಯಿಗೆ ಸ್ವಲ್ಪ ಶ್ರಮ ಕೊಡುವ ಹರಟೆಮಲ್ಲರಿವರು. ಟಿಬೆಟೀಯರು ಮಾತಾಡಿದರೆ ಕೇಳಲು ಹಕ್ಕಿಯ ಚಿಲಿಪಿಯಂತೆ. ಅದರಲ್ಲಿ ಚೀನೀ ಮಂಗೋಲಿ ಭಾಷಾಧ್ವನಿ ಗುರುತಿಸಬಹುದು . ಲಿಖಿತ ಟಿಬೆಟೀ ಭಾಷೆಯೇ ಬೇರೆ ಆಡುವ ಭಾಷೆಯೇ ಬೇರೆಯೆನ್ನುವಂತೆ ಉಚ್ಚಾರಣೆಯಲ್ಲಿ ಅಂತರವಿದೆ. ಹಾಗೆಯೇ ಟಿಬೆಟ್ಟಿನ ಬೇರೆ ಬೇರೆ ಪ್ರಾಂತಗಳಲ್ಲಿನ ವ್ಯತ್ಯಾಸವೂ ಇದೆ. ಸಂಸ್ಕೃತದಲ್ಲಿದ್ದಂತೆ ಇಲ್ಲಿಯೂ ಒತ್ತಕ್ಷರಗಳ ಹಾವಳಿ ಬಹಳ. ಒಂದೇ ಮಾತ್ರಾಕಾಲದಲ್ಲಿ ೪ -೫ ವರ್ಣಗಳು ಇದ್ದಾವು. ಜೊತೆಗೆ ಬರೆದಿದ್ದನ್ನು ಓದುವಾಗ ಉಚ್ಚರಿಸದೇ ಬಿಡಬೇಕಾದ ಒತ್ತಕ್ಷರಗಳು ಇವೆ. ಇಂತಹ ಭಾಷೆ ಕಲಿಯಲು ಕಠಿಣವಾದರೂ ಕೇಳಲು ಕರ್ಕಶವಲ್ಲ. ಕೂಗಾಟ ಕಿರುಚಾಟವಿಲ್ಲದ ಮಂದ್ರಸ್ವರದ ಮಾತುಗಳು ಪರ್ವತದ ಮೇಲಿಂದಿಳಿದು ಬರುವ ತೊರೆಯ ಜುಳುಜುಳು ಸದ್ದಿನಂತೆ . ಹತ್ತುಮಾರು ದೂರ ನಿಂತವರಿಗೆ ಕೇಳಿಸಬಹುದಾದ ಸದ್ದೆಂದರೆ ನಗು. ದನಿಯೆತ್ತಿ ಮಾತನಾಡುವವರನ್ನು ಅಚ್ಚರಿಯಲ್ಲಿ ಕಣ್ಣರಳಿಸಿ ನೋಡುತ್ತಾರೆ ಇದು ಸಭ್ಯತೆಯೇ ಎಂಬಂತೆ.

ಇಂದು ಬೆಳಗಿನಿಂದಲೂ ಎಲ್ಲರಲ್ಲೂ ವಿಶೇಷ ಗಡಿಬಿಡಿ. ಭಾರತಕ್ಕೆ ವಾಪಸಾಗುವ ಸಂಭ್ರಮ ಕೈಲಾಸ ಮಾನಸದ ನೀರು ತುಂಬಿದ್ದ ಡಬ್ಬಗಳನ್ನು ಸೀಲು ಮಾಡುವ ತರಾತುರಿ . ಆಗಲೇ ಕೊಂಡಿದ್ದ ಒಡವೆ ವಸ್ತುಗಳು ಸಾಮಾನುಗಳು ನೆಂಟರಿಷ್ಟರಿಗೆ ಕೊಡಲು ಸಾಲದೆನಿಸಿ ಮತ್ತೊಮ್ಮೆ ಟಕಲಾಕೋಟ್ ಮಂಡಿಗೆ ಹೋಗಿಬರುವ ಸನ್ನಾಹ . ಮಿಕ್ಕಿರುವ ಡಾಲರ್ ಯುವಾನ್‌ಗಳನ್ನು ಖರ್ಚು ಮಾಡುವ ತವಕ. ಬಗೆ ಹೇಗೆಂದು ಯಾರಿಗೂ ಯೋಚನೆಯಿಲ್ಲ. ಎಲ್ಲರೂ ಮಧ್ಯಾಹ್ನಕ್ಕೇ ಮಂಡಿಯ ಅಂಗಡಿಗಳಿಗೆ ಮುಗಿಬಿದ್ದೆವು. ನಿರ್ಮಲಾದೇವಿ, ಚಿಕ್ಕಮಕ್ಕಳಿಗಾಗುವಂತಹುದೇನಾದರೂ ಕಂಡರೆ ತೋರಿಸಲು ಹೇಳಿದ್ದರು. ಅವರ ಕೈಗೆ ಚಿಕ್ಕದೊಂದು ಪ್ಯಾಂಟ್ ಇಟ್ಟೆ . ನೋಡಿದವರೇ ಇಬ್ಬರಿಗೂ ತಡೆಯಲಾರದ ನಗು . ಏನ್ರಿ ಈ ಸೆಟ್ಟನ್ನು ಕೊಟ್ಟರೆ ನೆಂಟರೇನು ಸುಮ್ಮನಿದ್ದಾರೇ ?ದೊಡ್ಡ ರಂಪ ತೆಗೆಯುತ್ತಾರೆ. ಬೇಡಪ್ಪಾ 'ಎಂದು ಕೆಳಗಿಟ್ಟರು . ಕಾರಣವಿಷ್ಟೆ , ಮಕ್ಕಳು ಮಲಮೂತ್ರ ಹೋಗಲು ಚಡ್ಡಿಯನ್ನು ಬಿಚ್ಚುವ ಅವಶ್ಯಕತೆ ಇರದ ಹಾಗೆ ವ್ಯವಸ್ಥೆ. ನಾವೆಂದುಕೊಂಡಂತೆ ಹೊಲಿಗೆ ಬಿಚ್ಚಿರಲಿಲ್ಲ. ಬದಲಿಗೆ ಸೀಳನ್ನು ಬಟ್ಟೆಇಟ್ಟು ಹೊಲೆದು ಕಾಜಾಮಾಡಿ ಬದದೋಬಸ್ತು ಮಾಡಿದ್ದರು. ಬುರಾಂಗ್ ಹೋಟೆಲಿನ ಮುಂದೆ ಮತ್ತು ದಾರ್ಚೆನ್‌ನಲ್ಲಿ ಕೂಡ ನೋಡಿದ್ದ ಮಕ್ಕಳೆಲ್ಲರ ಉಡುಪುಗಳೂ ಹೀಗೆ ಇದ್ದವು. ಆಗೆಲ್ಲಾ ಮಕ್ಕಳನ್ನು ಮಣ್ಣಿನಲ್ಲಿ ಆಡಲು ಬಿಡುತ್ತಾರೆ. ಬಟ್ಟೆ ಹರಿದು ಹೋಗಿರುವಲ್ಲಿ ಹೊಲಿಗೆ ಹಾಕಲು ಏನು ಧಾಡಿ ಎಂದು ಕೊಂಡಿದ್ದೆವು. ಇಲ್ಲಿ ನೋಡಿದರೆ ರಿಡಿಮೇಡ್ ಅಂಗಿಗಳಲ್ಲೂ ಅದೇ ಸೀಳು . ತಾಯಂದಿರ ಅನುಕೂಲಕ್ಕೆ !ಈ ದೇಶದಲ್ಲಿ ಒಮ್ಮೆ ಬಟ್ಟೆ ತೊಟ್ಟರೆಂದರೆ ಅದನ್ನು ಬದಲಿಸಲು ಮಹತ್ತರ ಕಾರಣವಿರಬೇಕು.

ಎಲ್ಲರೂ ಕೊಂಡದ್ದೇನು ?ಚೈನಾ ಬೀಗಗಳು, ಜರ್ಸಿಗಳು, ಬೂಟು, ಚಪ್ಪಲಿಗಳು , ಫ್ಲಾಸ್ಕ್, ಪಿಂಗಾಣಿ ಸಾಮಾನು, ಏನೇನೋ ವಸ್ತುಗಳು . ಅವುಗಳನ್ನು ಕಟ್ಟಲು ಮತ್ತೊಂದು ಮಗದೊಂದು ರಕ್ ಸ್ಯಾಕ್‌ಗಳು. ಮನುಷ್ಯನ ಆಸೆಗೆ ಕೊನೆಯೆಲ್ಲಿ !ಮಂಡಿಯಲ್ಲೇನೂ ಕೊಳ್ಳದೆ ಜುಗ್ಗಿ ಎನಿಸಿಕೊಂಡು ಬಂದೆ -ಹೋಟೆಲಿನಲ್ಲಿದ್ದ ಅಂಗಡಿಯೊಂದರಲ್ಲಿದ್ದುದ್ದನ್ನು ಕೊಳ್ಳಲು. ನನ್ನ ಹತ್ತಿರವಿದ್ದ ಕಾಸನ್ನೆಲ್ಲಾ (೫೦೦ ರೂಪಾಯಿಯಷ್ಟು )ಕೂಡಿಸಿ ನ್ಗಾರಿ ಜಿಲ್ಲೆಯನ್ನು ಪರಿಚಯಿಸುವ ಫ್ಲೋಟೋ ಆಲ್ಬಮ್

ಒಂದನ್ನು ಕೊಂಡೆ. ಬಹಳ ಯೋಚನೆ ಮಾಡಿ ಎರಡು ದಿನ ಕಾದು ನೋಡಿ ಕೊಂಡ ವಸ್ತು ಮನೆಯವರಿಗೆಲ್ಲ ಸೇರಿದಂತೆ ಕೊಡಲು ತಂದ ವಸ್ತು. ಇದನ್ನು ಕೊಳ್ಳಲು ಇನ್ನೂ ಒಂದು ಕಾರಣವಿತ್ತು. ನಾನು ತೆಗೆದ ಫೋಟೋಗಳು ಅಕಸ್ಮಾತ್ ಚೆನ್ನಾಗಿ ಬರದೇ ಹೋದರೆ ಈ ಪುಸ್ತಕವಾದರೂ ಇರಲೆಂಬ ಆಸೆ. ಷಾಪಿಂಗ್ ಮುಗಿಸಿ ಕೈ ಭರ್ತಿ ಮಾಡಿಕೊಂಡು ಹೋಟೆಲಿಗೆ ನಡೆದೇ ಹೊರಟೆವು. ಜೊತೆಯಲ್ಲೇ ನಡೆದಿದ್ದ ಡೇವಿಡ್ ನಮ್ಮಲ್ಲಿಯ ಮಾರುಕಟ್ಟೆಗಿಂತ ಇಲ್ಲಿ ಮಂಡಿ ಎಷ್ಟು ಭಿನ್ನವೆನಿಸಿತು. ಕೂಗಿ ಕರೆದು ಮೂತಿಗೆ ಮಾಲು ಹಿಡಿಯುವವರಿಲ್ಲ. ದೊಡ್ಡ ದನಿಯಲ್ಲಿ ಮೂದಲಿಸುವ ಚಿಲ್ಲರೆ ವ್ಯಾಪಾರಿಗಳಿಲ್ಲ. ಮುಖ ಸಿಂಡರಿಸಿ ನೀನೇನು ಕೊಂಡಿಯೇ ನಡಿ ಎನ್ನುವವರಿಲ್ಲ. ಎಲ್ಲವೂ, ಎಲ್ಲರೂ ಸರಳ, ನೇರ. ಮಾರುಕಟ್ಟೆಯಲ್ಲಿರಲಿ - ಮನೆಯಲ್ಲಿರಲಿ, ದಾರಿಯಲ್ಲಿರಲಿ ದೇಗುಲದಲ್ಲಿರಲಿ, ಒಂಟಿಯಿರಲಿ - ಒಟ್ಟಿಗಿರಲಿ, ಟಿಬೇಟಿಯರು ಸದಾ ಹಸನ್ಮುಖಿಗಳು. ಮೆಲ್ನಗೆಯ, ಮೆಲ್ನುಡಿಯ ಸರಳ ಮುಗ್ಧ ಮನುಜರು ಎನಿಸಿತು. ಹೀಗೆಂದು ಡೇವಿಡ್‌ನೊಂದಿಗೆ ಹೇಳಿದಾಗ ನನ್ನ ಮಾತನ್ನು ಸುಳ್ಳು ಮಾಡುವಂತೆ ಗಹಗಹಿಸಿ ನಗತೊಡಗಿದ. ನನ್ನ ಪ್ರಶ್ನಾರ್ಥಕ ಮುಖ ನೋಡಿ 'ನೀನು ನೋಡಿರುವ ಟಿಬೆಟ್ ಬಹಳ ಚಿಕ್ಕ ಭಾಗ. ಅದೂ ಕೂಡ ನಾಗರೀಕತೆಯ ಗಂಧವಿಲ್ಲದ, ಪಶ್ಚಿಮದ ಬಂಜರು ನ್ಗಾರಿ ಜಿಲ್ಲೆಯ ಟಿಬೇಟಿಯರನ್ನು. ನಮ್ಮ ದೊಡ್ಡ ನಗರಗಳನ್ನು ನೋಡಿ ಬಾ . ಅಲ್ಲಿನ ದೊಡ್ಡ ಶಾಲೆಗಳ , ಕಾಲೇಜುಗಳ ಯುವಕರನ್ನು ಪೇಟೆಯ ವ್ಯಾಪಾರಿಗಳನ್ನು , ಪ್ರವಾಸೀ ಟಿಬೆಟ್ಟೀಯರನ್ನು ನೋಡಿಬಂದ ಮೇಲೆ ನಿನ್ನ ಅಭಿಪ್ರಾಯವನ್ನು ಹೇಳುವೆಯಂತೆ "ಎಂದ . ಮೆದು ಹುಲ್ಲಿನ ಮೇಲೆ ನಡೆಯುವಾಗ ಕಾಲಿಗೆ ಮುಳ್ಳು ಚುಚ್ಚಿದಂತಾಯಿತು. ಅವನ ಮಾತನ್ನು ಕೇಳಿ. ಮೆಚ್ಚುಗೆಯ ಮಾತಿಗೆ ತಾವು ಹಳ್ಳಿಯ ಗುಗ್ಗುಗಳಲ್ಲವೆಂಬಂತಹ ಮಾತಿನ ದಾಟಿ ಅಚ್ಚರಿ ತಂದಿತ್ತು. ಅವನ ಮಾತಿನಲ್ಲೆದ್ದು ಕಾಣುತ್ತಿದ್ದ ಹಳ್ಳಿಗರ ಬಗೆಗಿನ ತಾತ್ಸಾರ (ಕೀಳರಿಮೇಯೇ ? ) ಅವರಲ್ಲಿರುವ ಸಾಂಪ್ರದಾಯಿಕತೆಗೆ ತಿರಸ್ಕಾರ ಕೆಡುಕೆನಿಸಿತು. ಟಿಬೆಟಿನ ನಗರ ವಾಸಿ ಯುವಕರ ನಡತೆ ಒಲವುಗಳು ಟಿಬೆಟೀ ಸಂಸ್ಕೃತಿಯಿಂದ ದೂರ ಸರಿದು ಹೋಗುತ್ತಿದೆ ಎನಿಸಿತು . ಟಿ. ವಿ., ಮೂವಿಗಳ ಪ್ರಭಾವ ಇಲ್ಲಿಯೂ ಆದ ಹಾಗಿತ್ತು . ಶೀಘ್ರದಲ್ಲಿಯೇ ಈ ಅನಿಸಿಕೆಗೆ ಪುಷ್ಟಿ ದೊರೆಯಿತು. ಈ ರಾತ್ರಿಯೇ !

ರಾತ್ರಿಯೂಟದ ನಂತರ ಬುರಾಂಗ್ ಹೋಟೆಲಿನ ಸಿಬ್ಬಂದಿಯೊಡನೆ ಅನೌಪಚಾರಿಕ ಕೂಟವಿತ್ತು . ನಮ್ಮ ಯಾತ್ರೆ ಸುಗಮವಾಗಿ ಪೂರ್ಣಗೊಳ್ಳಲು ಸಹಕರಿಸಿದವರಿಗೆ ಹೃತ್ಪೂರ್ವಕ ವಂದನೆಗಳೊಂದಿಗೆ ವಿದಾಯ ಹೇಳಿದ ಸಂದರ್ಭ. ಭಾರತೀಯರು ಟಿಬೆಟೀಯರು ಅಥಿತಿಗಳು ಅತಿಥೇಯರು ಉಳ್ಳವರು - ಉಳ್ಳದವರು ಎಂಬ ಬೇಧವಿಲ್ಲದೆ ಎಲ್ಲರೂ ಒಂದಾಗಿ ಹಾಡಿ ಕುಣಿದು ದಣಿದೆವು. ಎಲ್ಲರ ಮನದಲ್ಲಿದ್ದ ಸೌಹಾರ್ದ ಸ್ನೇಹ ಭಾವ ಮೊಗದಲ್ಲಿ ನಗೆಹೂವಾಗಿ ಅರಳಿತ್ತು. ಅದರಲ್ಲೆಲ್ಲೋ ಲೋಪ, ಸಂಪೂರ್ಣ ಸಂಪರ್ಕವೇಪಟ್ಟಿಲ್ಲವೆಂಬ ಅನಿಸಿಕೆ. ಅಲ್ಲಿದ್ದ ಟಿಬೆಟೀಯರನ್ನು

ಎಷ್ಟು ಕೇಳಿಕೊಂಡರೂ ತಮ್ಮ ಜಾನಪದ ಹಾಡಾಗಲಿ ನೃತ್ಯವಾಗಲಿ ಪ್ರದರ್ಶಿಸಲಿಲ್ಲ. ಹಿರಿಯರಿಂದ ಕಲಿತಿರಲಿಲ್ಲವೋ, ಕಲಿತಿದ್ದರೂ ತೋರಿಸಲು ಸಂಕೋಚವೋ, ಚೀನಿ ಸರ್ಕಾರದ ನಿಗರಾನಿಯಲ್ಲಿರುವೆವೆಂದು ಹೆದರಿದ್ದರೋ, ಅಥವಾ ಪಾಶ್ಚಾತ್ಯರಂತೆ ವರ್ತಿಸುವುದೇ ಸಭ್ಯತೆಯೆನಿಸಿತ್ತೋ, ಒಟ್ಟಿನಲ್ಲಿ ಧಿರಾಪುಕ್‌ನ ಬಿಚ್ಚು ಮನಸ್ಸಿನ ಸಂಜೆಯಾಗಿರಲಿಲ್ಲ.

ಅಭಿವೃದ್ಧಿಯ ಹೆಸರಿನಲ್ಲಿ ಟಿಬೆಟೀ ಮುಖ್ಯ ನಗರಗಳಿಗೆ ಬಂದ ಡಾಂಬರು ರಸ್ತೆಗಳ ಮೂಲಕ ಮಧ್ಯಪೂರ್ವ ಟಿಬೆಟಿನ ಅಮೂಲ್ಯ ವೃಕ್ಷಗಳು, ಪರ್ವತವನ್ನು ಬಗಿದು ತೆಗೆದ ಅದಿರುಗಳು ಚೀನಾಕ್ಕೆ ಹೋದರೆ ಚೀನಾದಿಂದ ಬಂದ ಪಾಶ್ಚಾತ್ಯ ವಸ್ತುಗಳು, ಅವಶ್ಯಕಗಳು, ಹಾಡು ಕುಣಿತಗಳು ಇಲ್ಲಿನ ನಾಗರಿಕ ಯುವಜನರ ಮನಸ್ಸಿಗೆ ಲಗ್ಗೆ ಹಾಕಿರುವಂತೆನಿಸುವುದು. ಇವುಗಳ ಹಿಂದೆಯೇ ಪಾಶ್ಚಾತ್ಯರ ರೋಗ ರುಜಿನಗಳು ಮಾನಸಿಕ ತೊಳಲಾಟಗಳು ಇವರನ್ನು ಮುತ್ತಲು ತಡವಿಲ್ಲವೆನಿಸುವುದು. ಆದರೆ ಇದುಮೇಲ್ನೋಟದ ಅನಿಸಿಕೆ ಮಾತ್ರ. ರಸ್ತೆ ಸಾರಿಗೆ, ವಾಣಿಜ್ಯ ಸೌಕರ್ಯ, ಉಡಿಗೆ ತೊಡಿಗೆಗಳು ಆಮದಾಗುವ ಖಾದ್ಯ ಪೇಯಗಳು ಹೊರ ಪ್ರಪಂಚದ ಸಂಪರ್ಕ ಮಾಧ್ಯಮಗಳು ಇವೆಲ್ಲಾ ಬದಲಾವಣೆಗಳ ಜೊತೆಗೆ ಚೀನಾದ ಜುಲುಮಿತನ, ಬಲಾತ್ಕಾರ ಯಾವುದೂ ಟಿಬೇಟಿಯರ ಧಾರ್ಮಿಕ ಧೋರಣೆಯನ್ನು ಮನೋಬಲವನ್ನು ಅಲ್ಲಾಡಿಸಲಾಗಿಲ್ಲ. ಅವರ ಧಾರ್ಮಿಕ ಶ್ರದ್ಧೆ ನಂಬಿಕೆಗಳು ಅಚಲ. ಚೀನೀ ಸೈನಿಕರ ಆಕ್ರಮಣ ಕಾಲದಲ್ಲಿ ಮುಚ್ಚಲ್ಪಟ್ಟ ಅನೇಕ ಗೊಂಪಾಗಳನ್ನು ಅದೇ ಕಮ್ಯುನಿಸ್ಟ್ ಸರ್ಕಾರ ಮತ್ತೆ ತೆರೆಯುವಂತೆ ಮಾಡಿದುದು ಟಿಬೆಟೀಯರ ಈ ಧಾರ್ಮಿಕ ಮನೋಬಲವೇ! ಆದರೆ ಔದ್ಯೋಗಿಕ ಧನಿಕ ರಾಷ್ಟ್ರಗಳ ದಬ್ಬಾಳಿಕೆಯಲ್ಲಿ ಪೌರಾತ್ಯ ಸಂಸ್ಕೃತಿಗಳು ಎಷ್ಟು ದಿನ ಉಳಿದಾವು?

ಟಿಬೇಟೀ ಸಂಸ್ಕೃತಿ- ಸಮಾಜವನ್ನು ಆಳವಾಗಿ ಅಭ್ಯಸಿಸಿರುವ ಖ್ಯಾತ ಟಿಬೆಟೀ ಸಮಾಜ ತಜ್ಞ ಕುಬಿ ಅವರ ಅಭಿಪ್ರಾಯದಂತೆ ಟಿಬೇಟಿಯರದು ಸಾವಿರ ವರ್ಷಗಳಿಂದ ಊರ್ಜಿತಗೊಳಿಸಿದ ಸಾತ್ವಿಕ ಆತ್ಮಶಕ್ತಿ. ಈ ಶಕ್ತಿಯನ್ನು ಯಾವುದೇ ದೈಹಿಕ ಬಲ ಕಸಿಯಲಾರದು ಚೀನಿಯರು ಕೊಡುವ ದೈಹಿಕ ಹಿಂಸೆಗಳಿಗೆಲ್ಲ ಟಿಬೆಟೀಯರದ್ದೊಂದೇ ಪ್ರತಿಕ್ರಿಯೆ ನಿರ್ಲಕ್ಷ್ಯ. ಕ್ರೌರ್ಯಕ್ಕೆ ಕ್ರೌರ್ಯ ಉತ್ತರವಾಗಲಾರದೆಂಬ ನಿಲುವು. ಕೆಡುಕನ್ನು ಯೋಚಿಸಿದರೆ ಅದಕ್ಕೆ ಬಲ ಕೊಟ್ಟಂತೆ ಸದಾ ಒಳಿತಿನ ಯೋಚನೆಯಲ್ಲಿದ್ದು ಮನೋಶಕ್ತಿಯನ್ನು ಬಲಗೊಳಿಸುವ ಸಾಹಸ ಟಿಬೆಟೀಯರದು. ಇಂದಿನ ಲೋಭದ, ನಿರ್ಲಜ್ಜೆಯ, ಅತಿಕ್ರಮಣದ ಮನೋಭಾವದ ಪ್ರಪಂಚದಲ್ಲಿ ಟಿಬೆಟ್ಟಿನ ಅಹಿಂಸೆಯ, ಸ್ಥೈರ್ಯದ ಕ್ರೌರ್ಯಕ್ಕೆ ಇಂಬುಗೊಡದ ಹೂಣ ಸಮಾಜ ಹೇಗೆ ಬದುಕಿದೆ ಎನ್ನುವುದೇ ಸೋಜಿಗದ ಸಂಗತಿ. ಈ ಅನನ್ಯ ಸಮಾಜ - ಸಂಸ್ಕೃತಿಯ ಉಳಿವಿಗಾಗಿ ಇದರ ನೇತಾರ ದಲೈ ಲಾಮಾರ ಸತತ ಪ್ರಯತ್ನ ನಡೆದಿದೆ.

ಟಿಬೆಟೀ ಶರಣಾರ್ಥಿಗಳಿಗೆ ವಸತಿ ಸೌಲಭ್ಯ ಒದಗಿಸುವ ಮೂಲಕ ಈ ಕಾರ್ಯಕ್ಕೆ ಭಾರತವು ಸಹಾಯ ಹಸ್ತ ನೀಡಿದೆ. ಭಾರತದ ಅನೇಕ ತಡೆ ತಮ್ಮ ವಾಸಹತುಗಳಲ್ಲಿರುವ ಟಿಬೇಟೀ ಶರಣಾರ್ಥಿಗಳು ಸಕ್ಕರೆ ಹಾಲಿನಲ್ಲಿ ಕೇಸರಿ ಬೆರೆತಂತೆ ಭಾರತ ಜನತೆಯಲ್ಲಿ ಬೆರೆತಿರುವರು.. ಅವರಿರುವ ವಸಾಹತುಗಳಲ್ಲಾಗಲೀ, ಊರುಗಳಲ್ಲಾಗಲೀ ಟಿಬೆಟೀಯರು ಯಾವುದೇ ಅಪರಾಧ ಮಾಡಿದ ಸುದ್ದಿಯಿಲ್ಲ. ಮೂವತ್ತೇಳು ನಲವತ್ತು ವರ್ಷಗಳಿಂದ ಭಾರತದಲ್ಲಿದ್ದರೂ ಯಾವುದೇ ರೀತಿಯ ಸವಲತ್ತುಗಳಿಗಾಗಿ ಭಾರತ ಸರ್ಕಾರವನ್ನು ಒತ್ತಾಯಿಸಿಲ್ಲ. ಬಂಡಾಯವೆದ್ದಿಲ್ಲ, ಕಾನೂನು ಬಾಹಿರಕೃತ್ಯಗಳನ್ನೆಸಗಿಲ್ಲ. ಆರ್ಥಿಕವಾಗಿ ಭಾರತಕ್ಕೆ ಹೊರೆಯಾಗದ

ಸ್ವಾವಲಂಬಿಗಳಾಗಿ ವಾಣಿಜ್ಯ ವಲಯದಲ್ಲಿ ತಮ್ಮ ಯೋಗದಾನ ನೀಡಿರುವರು. ಸತ್ವಶಾಲಿ ಪರಂಪರೆಯ ಭದ್ರ ಬುನಾದಿಯಿರುವ ಟಿಬೆಟೀಯರು ಪ್ರಪಂಚದ ಯಾವುದೇ ಸಮಾಜದಲ್ಲಿ ಬೆರೆತುಕೊಂಡರೂ ಕೇಸರಿಯಂತೆ ಸ್ವಂತಿಕೆಯನ್ನು ಉಳಿಸಿಕೊಳ್ಳುವ ಸಂಸ್ಕೃತರು. ವಿಚಾರಧಾರೆಗೆ ಸ್ವಾನುಭವದ ಪುಷ್ಟಿ ದೊರೆತದ್ದು ೯೭ ರ ಜುಲೈ ೧೩ ರಂದು  ಮೈಸೂರಿನ ಮಹಾರಾಜರು ಕಾಲೇಜಿನ ಶತಮಾನೋತ್ಸವ ಭವನದಲ್ಲಿ ಗುರುಪುರದ ಗ್ಯುಮೆ ತಾಂತ್ರಿಕ ವಿದ್ಯಾನಿಲಯದವರು ನಡೆಸಿಕೊಟ್ಟ ಟಿಬೇಟಿ ಸಾಂಸ್ಕೃತಿಕ ಸಮಾರಂಭವನ್ನು  ನೋಡಿದಾಗ, ಭಾರತ ಸ್ವಾತಂತ್ರ್ಯದ ಅರ್ಧಶತಮಾನೋತ್ಸವ ಅಂಗವಾಗಿ ಟಿಬೆಟೀಯರು  ನಡೆಸಿಕೊಟ್ಟ ಕಾರ್ಯಕ್ರಮವದು.

********************

ಸಾಂಸ್ಕೃತಿಕ ಕಾರ್ಯಕ್ರಮ ಆರಂಭವಾಗುತ್ತಿದ್ದಂತೆ ಅಲ್ಲಿ ಟಿಬೆಟಿನ ವಾತಾವರಣವೇರ್ಪಟ್ಟು ಮನಸ್ಸು ಅನಾಯಾಸವಾಗಿ ಒಂದು ವರ್ಷದ ಹಿಂದೆ ನೋಡಿದ್ದ ಟಿಬೆಟಿನ ಶೋಬಾರ್ ಗೊಂಪಾಗೆ ಮರಳಿತು. ಅಂದು ನೋಡಿದ್ದ ಗೊಂಪಾದ ಗೋಡೆಗೆ ಒರಗಿಸಿದಂತಹ  ಬೃಹದಾಕಾರದ ಕಹಳೆ ತಾಳಮದ್ದಳೆಗಳು ಇಲ್ಲಿ ಮೊಳಗಿದ್ದವು. ಅಂದು ಲಾರಿಯಲ್ಲಿ ಕುಳಿತ  ಹಳ್ಳಿ ಹೆಂಗಸರು ಹಾಡಿದ್ದ ಸ್ವರಧಾಟಿಯಲ್ಲಿ ಇಂದು ಎಳೆಯರು, ಯುವತಿಯರು ಹಾಡಿ ನರ್ತಿಸಿದರು. ಯುವಕರು ಹಿಮ್ಮೇಳವಾಗಿ ಕುಣಿದರು. ಶೋಬಾರ್ ದೇವಾಲಯದ ಸೂರಿನಡಿ ನೇತಾಡುತ್ತಿದ್ದಂತಹ ಮೊಗವಾಡಗಳನ್ನು ಧರಿಸಿ ನರ್ತಿಸಿದ ಲಾಮಾಗಳ ಹಿಂದೆ ಸರ್ವತಸಿಂಹಗಳು ಬಾಗಿ ಬಳುಕಿ ಹಾರಿ ಮಣಿದು ಕುಣಿದವು ಟಿಬೆಟ್ ಪ್ರವಾಸದಲ್ಲಿ  ಸ್ಥಿರಚಿತ್ರಗಳಾಗಿ ಕಂಡುದನ್ನು ಮೈಸೂರಿನಲ್ಲಿ ಪ್ರತ್ಯಕ್ಷವಾಗಿ ಆಡಿ ತೋರಿಸಿದರು ಗ್ಯುಮೆ ವಿದ್ಯಾರ್ಥಿಗಳು ಶಿಕ್ಷಕರು. ಈ ಸಂಜೆ ಮೈಸೂರಿನಾವರಣದಲ್ಲಿ ಟಿಬೆಟ್ ತನ್ನ ಸಂಸ್ಕೃತಿಯನ್ನು ಪರಿಚಯಿಸಿತು ಭಾರತ ಸ್ವಾತಂತ್ರ್ಯದ ಚಿನ್ನದ ಹಬ್ಬದ ಹರ್ಷಕ್ಕಾಗಿ. ಮಸಳಿದಂತಾಗಿದ್ದ ವರ್ಷದ ಹಿಂದಿನ ನನ್ನ ಅನುಭವಗಳು ಮತ್ತೆ ಹಚ್ಚಹಸುರಾದುವು. ಇಂದಿನ ಕಾರ್ಯಕರ್ತರ ಭಾಷಣ ನನ್ನ ಅನಿಸಿಕೆಗಳಿಗೆ ಹೊಸ ಆಯಾಮಕೊಟ್ಟಿತು.  ಸಮಾರಂಭದ ನಂತರ ಭೇಟಿಯಾದ ಕಾರ್ಯದರ್ಶಿ ತಮ್ಮ ವಿಸಿಟಿಂಗ್ ಕಾರ್ಡ್ ಕೊಟ್ಟು, ತಮ್ಮ ವಿದ್ಯಾನಿಲಯವನ್ನು, ಭಾಷೆಯ ತೊಡಕಿನಿಂದಾಗಿ ಟಿಬೆಟಿನಲ್ಲಿ ತಿಳಿಯಲಾಗದಿದ್ದ ವಿಷಯಗಳನ್ನು ಶಿಕ್ಷಕರಲ್ಲಿ ಚರ್ಚಿಸಲು ಸಲಹೆಯಿತ್ತರು.

ಗುರುಪುರದ ಗ್ಯುಮೆ ವಿದ್ಯಾಲಯದ ಭೇಟಿ ಒಂದು ವಿಧದಲ್ಲಿ ನನ್ನ ಟಿಬೆಟ್ ಪ್ರವಾಸವನ್ನು ಪೂರ್ಣಗೊಳಿಸಿತು. ಟಿಬೆಟ್‌ನ ದಾರ್ಚೆನ್, ಶೋಬಾರ್, ಟಕಲಾಕೋಟ್‌ಗಳಲ್ಲಿ  ನೋಡಿದ್ದು ಆ ದೇಶದ ಗತಕಾಲ ಮತ್ತು ವರ್ತಮಾನಗಳಾದರೆ, ಗುರುಪುರದಲ್ಲಿ ನೋಡಿದ್ದು  ಪೂರ್ಣ ಸ್ವಾತಂತ್ರ್ಯ ಸಿಕ್ಕರೆ? ಟಿಬೆಟ್‌ನ ಭವಿಷ್ಯದ ಚಿತ್ರ. ತಮ್ಮದೆನ್ನುವುದನ್ನು  ಉಳಿಸಿಕೊಂಡು ಹೊರ ಜಗತ್ತಿನೊಂದಿಗೆ ಹೊಂದಿಕೊಳ್ಳುತ್ತಿರುವ ಆಧುನಿಕ ಟಿಬೆಟೀಯರನ್ನು, ಅವರ ಸಮೃದ್ಧಿಯ ಜೀವನವನ್ನು ಇಲ್ಲಿ ಕಾಣಬಹುದು. ಸಂಗಡವೇ ಸಾಂಪ್ರದಾಯಿಕ ಉಡುಗೆ ತೊಡುಗೆಯ, ಊಟ ಉಪಚಾರದ ರೀತಿಯನ್ನು ಶಿಕ್ಷಣ ಪದ್ಧತಿಯನ್ನು ಧಾರ್ಮಿಕ  ವಸ್ತುಗಳನ್ನು ಇಲ್ಲಿ ಕಾಣಬಹುದು. ಚೀನೀ ಆಕ್ರಮಣದಿಂದಾಗಿ ಟಿಬೆಟ್‌ನಲ್ಲಿ ಪಾಳು ಬಿದ್ದಂತಾಗಿರುವ ಗೊಂಪಾಗಳನ್ನು ನೋಡಿದವಳಿಗೆ ಗುರುಪುರದ ಸುಸಜ್ಜಿತ ಗೊಂಪಾದ  ಕಾರ್ಯ ಚಟುವಟಿಕೆಗಳನ್ನು ನೋಡಿ ಅಚ್ಚರಿಯಾಗಿತ್ತು. ಈ ಗೊಂಪಾ ಟಿಬೆಟೀಯರ ರಚನಾತ್ಮಕ ಮನೋಭಾವದ ಸಂಕೇತವೆನಿಸಿತ್ತು. ಗೊಂಪಾದ ಮುಖ್ಯ ಹಜಾರದಲ್ಲಿ  ವಿದ್ಯಾರ್ಥಿಗಳ ಪರೀಕ್ಷೆ ಸಾಂಪ್ರದಾಯಿಕ ರೀತಿಯಲ್ಲಿ ನಡೆಯುತ್ತಿತ್ತು. ಗ್ರಂಥಾಲಯದ ನಿಲುಪಟ್ಟಿಗಳಲ್ಲಿ ಇರಿಸಿರುವ ಗ್ರಂಥಗಳ ಕಟ್ಟುಗಳು ಧ್ಯಾನ ಮಂದಿರದ ಗೋಡೆಗಳಲ್ಲಿ  ತೂಗು ಹಾಕಿರುವ ಥಂಕಾಗಳು, ಮೇಜಿನ ಮೇಲೆ ಮತ್ತು

ಕಪಾಟುಗಳಲ್ಲಿನ ವಿಗ್ರಹಗಳು ಎಲ್ಲವೂ ಟಿಬೆಟೀಯರ ಪರಂಪರಾಸಕ್ತಿಯ ಚಿಹ್ನೆಗಳೆನಿಸಿತು. ತಾಂತ್ರಿಕ ಕ್ರಿಯಾ ವಿಧಿಗಳನ್ನು ಹವನ ಹೋಮಗಳನ್ನು ಮಾಡಲೆಂದೇ ಪ್ರತ್ಯೇಕವಾಗಿ ಕಟ್ಟಿಸುತ್ತಿದ್ದ ಯಜ್ಞಶಾಲೆಗಳನ್ನು ತೋರಿಸುವಾಗ ಕಾರ್ಯಾಲಯಾಧಿಕಾರಿಯ ಮುಖದಲ್ಲಿದ್ದ ಹೆಮ್ಮೆ ನೋಡತಕ್ಕುದಾಗಿತ್ತು.

ಗುರುಪುರದ ದಾರಿಯ ಇಕ್ಕೆಲದಲ್ಲಿ ನಳನಳಿಸುತ್ತಿದ್ದ ಪೈರುಗಳು, ಮನೆಗಳು, ಗುರುಪುರ, ಹುಣಸೂರು ಪೇಟೆ ಬೀದಿಗಳಲ್ಲಿ ಅಡ್ಡಾಡುತ್ತಿದ್ದ ಟಿಬೆಟೀ ಸಂಸಾರಗಳು, ಯುವಕ ಯುವತಿಯರು, ಮೈಸೂರಿನ ಬಸ್ಸು ಹತ್ತಿದ್ದ ಐದಾರು ಲಾಮಾಗಳು ಇಲ್ಲಿನ ಟಿಬೆಟೀಯರು ನಿರ್ವಾಸಿತರಾಗಿಯೂ ಉತ್ತಮ ಸ್ಥಿತಿಯನ್ನು ಸಾಧಿಸಿರುವರು. ಎಲ್ಲಿದ್ದರಲ್ಲಿ ತಮ್ಮ ಸಂಸ್ಕೃತಿ ಪರಂಪರೆಯನ್ನು ಬಿಡದೆ, ಏಳಿಗೆ ಸಾಧಿಸಿದರೂ ಮುಂದಿನ ವರ್ಷ ತಮ್ಮ ನೆಲದಲ್ಲಿ ಹಬ್ಬಮಾಡುವೆವೆಂದು ಪ್ರತಿ ವರ್ಷವೂ ಪಣತೊಡುವ, ಅಲ್ಲಿಯವರೆಗೆ ಗೆಲುವಾಗಿರಲು ಯತ್ನಿಸುವ ಯಹೂದಿಗಳನ್ನು ನೆನಪಿಸಿದ್ದರು ಈ ಟಿಬೆಟೀ ಜನರು. ಸ್ವದೇಶಕ್ಕೆ ಮರಳಲು ತಹತಹಿಕೆ ಇವರಲ್ಲೂ.

ಭಾರತದ ಗಡಿಯಾಚೆ ಚೀನಾದ ಅಂಕೆಯಲ್ಲಿರುವ ಟಿಬೆಟ್ ದೇಶದ ಭಾಗವೊಂದನ್ನು ನೋಡಿ ಬಂದ ನಂತರ ಭಾರತದ ಗಡಿಯೊಳಗೆ ಅತಿದಕ್ಷಿಣದಲ್ಲಿರುವ ಟಿಬೆಟ್ ತುಣುಕನ್ನು ನೋಡಿದಾಗ ಭಾರತ ಟಿಬೆಟ್ ನಡುವಿನ ಅನ್ಯೋನ್ಯ ಸಂಬಂಧದ ಚಿತ್ರ ಹೆಚ್ಚು ಸ್ಪಷ್ಟವಾಯಿತು. ಟಿಬೆಟಿನ ಐತಿಹಾಸಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ನೆಲೆಯಗಳಲ್ಲಿ ಎದ್ದು ಕಾಣುವ ಭಾರತೀಯ ಪ್ರಭಾವ ಅಧ್ಯಯನ ಯೋಗ್ಯವೆನಿಸಿತು. ಈ ಬಗ್ಗೆ ಹೆಚ್ಚಿನ ಮಾಹಿತಿ ಪಡೆದಂತೆ ಇಂದಿನ ಪರಿಸ್ಥಿತಿಯಲ್ಲಿ ಈ ಸಂಬಂಧದ ಬಗೆಗೆ ಕೆಲವು ಸಂದೇಹಗಳು ಬಂದವು. ಭಾರತದಲ್ಲಾಗಿರುವಂತೆ ಟಿಬೆಟಿನಲ್ಲಿರುವ ಲಾಮಾ ಪದ್ಧತಿ ಹಾಗೂ ಹಲವಾರು ಬೌದ್ಧ ಪಂಥಗಳು ಸಮಾಜದಲ್ಲಿ ಒಡಕು ತಂದಿಲ್ಲವೇ? ಇಷ್ಟು ಅಧಿಕ ಸಂಖ್ಯೆಯ ಲಾಮಾಗಳನ್ನು ಟಿಬೆಟ್ ಜನತೆ ಗೌರವಿಸುತ್ತದೆಯೇ? ಇಂದಿನ ವೈಜ್ಞಾನಿಕ ಮತ್ತು ಅತಿಲೌಕಿಕ ಮನೋಭಾವದ, ಇ-ಮೈಲ್, ಇಂಟರ್‌ನೆಟ್, ಸೈಬರ್‌ನೆಟ್ ಯುಗದಲ್ಲಿ ಟಿಬೆಟ್‌ನ ಹದಿನಾಲ್ಕನೇ ಶತಮಾನದ ತಾಂತ್ರಿಕ ಕ್ರಿಯಾವಿಧಿಗಳ ಆಧ್ಯಾತ್ಮಿಕ ನಿಲುವಿನ ಬೌದ್ಧಧರ್ಮ ಉಳಿಯಬಲ್ಲದೇ?, ಚೀನಾದ ಕಮ್ಯುನಿಸ್ಟ್ ಆಡಳಿತದಲ್ಲಿ ಟಿಬೆಟಿನ ವಿಶಿಷ್ಟ ಧರ್ಮ, ಸಾಹಿತ್ಯ ಭಂಡಾರ, ಶಿಕ್ಷಣ ಪದ್ಧತಿ, ವೈದ್ಯ ಪದ್ಧತಿ, ವಾಸ್ತುಶಿಲ್ಪ ಚಿತ್ರಕಲೆ ಒಟ್ಟಾರೆ ಟಿಬೆಟೀ ಸಂಸ್ಕೃತಿಯನ್ನು ಉಳಿಸಿಕೊಳ್ಳಲು ಸಾಧ್ಯವೇ? ಜನರು ಟಿಬೆಟಿನಿಂದ ನಿರ್ವಾಸಿತರಾಗಿ ಹೊರಹೋಗುತ್ತಿರುವಾಗ, ಚೀನೀ ಜೈಲುಗಳಲ್ಲಿ ಕಣ್ಮರೆಯಾಗುತ್ತಿರುವಾಗ ಟಿಬೆಟಿನಲ್ಲಿ ಉಳಿಯುವುದಾದರೂ ಏನು? ಭಾರತದ ಅನೇಕ ರಾಜ್ಯಗಳಲ್ಲಿ ಟಿಬೆಟಿಯರ ವಸಾಹತುಗಳು, ಮಠಗಳು, ವಿಶ್ವವಿದ್ಯಾಲಯಗಳು ಸ್ಥಾಯೀ ರೂಪದಲ್ಲಿ ನಿರ್ಮಾಣವಾಗುತ್ತಿರುವಾಗ ನಿರ್ವಾಸಿತರು ಟಿಬೆಟ್‌ಗೆ ಹಿಂತಿರುಗುವ ಸಾಧ್ಯತೆ ಇದೆಯೇ? ಟಿಬೆಟ್ ಭಾರತದಿಂದ ಏನನ್ನು ಅಪೇಕ್ಷಿಸುತ್ತದೆ? ಈ ಪರಿಸ್ಥಿತಿಯಲ್ಲಿ ಭಾರತದ ಹಕ್ಕು ಬಾಧ್ಯತೆಗಳೇನು?

ಗುರುಪುರದ ಹಿರಿಯರಲ್ಲಿ ಕೈಪಿಡಿಗಳಲ್ಲಿ ಸಿಕ್ಕ ವಿವರಣೆಯ ಸಾರಾಂಶವಿದು. ಎರಡು ಅಂಶಗಳು ಟಿಬೆಟೀಯರ ಆಂತರಿಕ ನಿಲುವೇನೆಂದು ತಿಳಿಯಪಡಿಸುತ್ತದೆ. ಮೊದಲನೆಯದಾಗಿ ಪ್ರತಿಯೊಬ್ಬ ಟಿಬೆಟೀಯನೂ ಹುಟ್ಟಿನಿಂದಲೇ ಬುದ್ಧಾನುಯಾಯಿ. ಸ್ವಯಿಚ್ಛೆಯಿಂದ ಧರ್ಮವನ್ನು ಪಾಲಿಸುವನು. ಅವನ ಜೀವನ ದೃಷ್ಟಿಕೋನವೇ ಬೌದ್ಧಧರ್ಮಾಧಾರಿತವಾದುದು. ಟಿಬೆಟಿನಲ್ಲಿ ಎಷ್ಟೇ ಧಾರ್ಮಿಕ ಪಂಥಗಳಿದ್ದರೂ ಮೂಲತಃ ಒಬ್ಬನೇ ಗುರುವೆಂಬ ಅರಿವಿನಿಂದಾಗಿ ಅನುಯಾಯಿಗಳಲ್ಲಿ ಮೇಲುಕೀಳೆಂಬ ಭಾವನೆ ಬರಲು ಸಾಧ್ಯವಿಲ್ಲ. ಪಂಥಗಳಲ್ಲಿ ಪರಸ್ಪರ ಕೊಳುಕೊಡುಗೆ ಇಂದಿಗೂ ನಡೆದೇ ಇದೆ.

ಎರಡನೆಯದಾಗಿ, ಟಿಬೆಟೀಯನು ದೈಹಿಕ ಬಲಕ್ಕಿಂತಲೂ ಆತ್ಮ ಬಲಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡುತ್ತಾನೆ. ದೈಹಿಕ ದಂಡನೆಯಾಗಲಿ ಜೈಲುವಾಸವಾಗಲೀ ಅವನ ನಿಲುವನ್ನು ಬದಲಿಸಲಾರದು. ತನ್ನ ಧಾರ್ಮಿಕ ನಿಲುವಿಗೆ ಆಧ್ಯಾತ್ಮಿಕ ಸಾತ್ವಿಕ ಬಲವಿರುವುದನ್ನು ಅರಿತಿರುವ ಟಿಬೆಟೀಯನು ಜಗತ್ತಿನಲ್ಲೆಲ್ಲೇ ನಿರ್ವಾಸಿತನಾಗಿ ಹೋದರೂ ಈ ನಿಲುವನ್ನು ಬದಲಿಸಲಾರನು. ಪೂರ್ಣ ಸ್ವಾತಂತ್ರ್ಯ ಸಿಗುವವರೆಗೆ ತನ್ನದೆನ್ನುವುದನ್ನು ಜತನ ಮಾಡುವ ನಿರ್ಧಾರ ಇವನದು. ಜತನ ಮಾಡುವಲ್ಲಿ ಸಹಾಯ ಮಾಡುತ್ತಿರುವ ದೇಶಗಳಿಗೆ ಚಿರಋಣಿಯೀತ. ನಿರ್ವಾಸಿತ ಟಿಬೆಟೀಯರ ಪಾರಂಪರಿಕ ಜೀವನಕ್ರಮದಲ್ಲಿ ಬದಲಾವಣೆ ಕಂಡು ಬಂದಿರುವುದು ಸಹಜ. ಆಧುನಿಕ ತಂತ್ರ ಜ್ಞಾನದ ಸೌಲಭ್ಯಗಳು ದಿನ ಬಳಕೆಗೆ ಬಂದಿವೆ. ಅವರ ಶಿಕ್ಷಣ, ವೈದ್ಯ, ವಾಣಿಜ್ಯ ಮುಂತಾದ ಕ್ಷೇತ್ರಗಳಲ್ಲಿ ಆಧುನಿಕ ಸಲಕರಣೆಗಳು ಕಾಣಬರುವುದಾದರೂ ಅವನ ಅಂತರ್ಯದ ಧೋರಣೆಗಳು ಮೌಲ್ಯಗಳು ಧಾರ್ಮಿಕ ತಳಹದಿಯನ್ನು ಬಿಟ್ಟು ಕದಲಾಲಾರವು. ಜಗತ್ತಿನಲ್ಲಿ ತನ್ನ ಅಹಿಂಸಾತ್ಮಕ ಬೌದ್ಧ ಮನೋಧರ್ಮದೊಂದಿಗೆ ವೈಜ್ಞಾನಿಕ ಅಭಿವೃದ್ಧಿಯ ಸಂಯೋಗವಾದರೆ ವಿಶ್ವಶಾಂತಿ ನೆಲೆಸುವುದರಲ್ಲಿ ವಿಳಂಬವಿಲ್ಲ. ಎನ್ನುವುದು ಟಿಬೆಟೀಯನ ಅಚಲ ವಿಶ್ವಾಸ. ( ಕಡಲೆ ಬಂದಾಗ ಹಲ್ಲೂ ಇರಬೇಕಲ್ಲ)

ಯೋಗಾಯೋಗದ ಸಂಗತಿಯೆಂದರೆ ೧೩- ೧೪ ನೇ ಶತಮಾನದಲ್ಲಿ ಮಹಮ್ಮದೀ ದಾಳಿಗೆ ಸಿಕ್ಕು ತತ್ತರಿಸಿದ ಭಾರತ ಅಂದು ತನ್ನ ಸಂಸ್ಕೃತಿಯ ಭಾಗವಾಗಿದ್ದ ಬೌದ್ಧ ಸಂಸ್ಕೃತಿ ಜೀವನಕ್ರಮವನ್ನು ಬೌದ್ಧ ಮತ್ತು ಬೌದ್ಧೇತ್ತರ ಸಾಹಿತ್ಯ, ಶಾಸ್ತ್ರ ಗ್ರಂಥಗಳನ್ನು ಟಿಬೆಟಿನಿಂದ ಮರಳಿ ಪಡೆದರೆ ಇಂದು ಟಿಬೆಟೀಯರ ಸಂಸ್ಕೃತಿ. ಸರ್ಕಾರ, ವಿಶ್ವವಿದ್ಯಾನಿಲಯಗಳು ಶಿಕ್ಷಣ, ವೈದ್ಯ ಪದ್ಧತಿ, ಸಮಗ್ರ ಟಿಬೆಟ್ಟನ್ನೇ ತನ್ನಲ್ಲಿ ನ್ಯಾಸವಾಗಿರಿಸಿಕೊಂಡಿದೆ. ಟಿಬೆಟೀಯರಿಗೆ ಭಾರತೀಯರೆಂದರೆ ವಿಶೇಷ ಗೌರವಾದರ. ತಮ್ಮ ದೇಶಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಪ್ರವಾಸ ಮಾಡುವ ಮೂಲಕ ಹಿಂದಿನ ಸ್ನೇಹ ಸಂಬಂಧವನ್ನು ಮುಂದುವರಿಸಬೇಕೆಂಬ ಬಿನ್ನಹ ಇವರದು. ಭಾರತೀಯ ಪ್ರವಾಸಿಗರು ಕೊಡುವ ವೀಸಾ ಹಣ ಚೀನಾದ ಕಿಸೆ ಸೇರುವುದಾದರೂ ತಮಗೆ ನೈತಿಕ ಬೆಂಬಲ ಸಿಗುವುದೆಂಬ ವಿಶ್ವಾಸ. ತಮ್ಮ ನಿಲುವನ್ನು ವಿಚಾರಧಾರೆಯನ್ನು ಅರ್ಥಮಾಡಿಕೊಳ್ಳಬಲ್ಲವರು, ಜಗತ್ತಿನ ಮುಂದೆ ನಮ್ಮ ಪರವಾಗಿ ನಿಲ್ಲಬಲ್ಲವರು ನಮ್ಮವರೆನ್ನುವವರು ನೀವು ಭಾರತೀಯರು ಎನ್ನುವಲ್ಲಿ ಭಾರತದ ಆಧ್ಯಾತ್ಮಿಕ ದಾರ್ಶನಿಕ ಸಿದ್ಧಾಂತಗಳಲ್ಲಿ ಅಹಿಂಸಾತ್ಮಕವಾಗಿ ಜಾಗತಿಕ ಶಾಂತಿ ಸಾಧಿಸುವ ಶಕ್ತಿಯಿರುವುದರ ಬಗ್ಗೆ ಅವರ ವಿಶ್ವಾಸ ವ್ಯಕ್ತವಾಗಿತ್ತು.

ನಾಲ್ಕು ಕಾರಣಗಳಿಂದಾಗಿ ಭಾರತವು ಟಿಬೆಟೀಯರ ಸ್ವಾತಂತ್ರ್ಯ ಹೋರಾಟಕ್ಕೆ ನೆರವಾಗುವುದು ಉಚಿತವೆನಿಸುವುದು, ಒಂದು, ನಮ್ಮ ಋಷಿಗಳು ದಾರ್ಶನಿಕರು ಸೂಕ್ತವೆಂದು ಪರಿಗಣಿಸಿದುದನ್ನು ಟಿಬೆಟೀಯರು ಅನುಸರಿಸುತ್ತಿರುವುದರಿಂದ ಅವರು ನಮ್ಮ ಪರಂಪರೆಗೆ ಸೇರಿದವರು. ಆಧ್ಯಾತ್ಮಿಕ ಬಂಧುಗಳು ನಮ್ಮವರೇ ಆದವರು. ಎರಡು, ಭಾರತೀಯ ಸಂಸ್ಕೃತಿಯ ಪರಂಪರೆಯ ಭಾಗವೇ ಆಗಿದ್ದ ಅನೇಕ ಶಾಸ್ತ್ರಗಳು ಗ್ರಂಥಗಳು, ಪದ್ಧತಿಗಳು ರೀತಿ ನೀತಿಗಳು ಮಹಮ್ಮದೀಯರ ಆಕ್ರಮಣ ಕಾಲದಲ್ಲಿ ನಶಿಸಿ ಹೋದವು. ಆದರೆ ಇವುಗಳನ್ನು ಟಿಬೆಟಿಯರು ಉಳಿಸಿ, ಬೆಳೆಸಿ, ಸತ್ವಶಾಲಿಯಾಗಿಸಿ ಆ ಮೂಲಕ ಸಾಧಿಸಿರುವ ಆಧ್ಯಾತ್ಮಿಕ ದಾರ್ಶನಿಕ ಸಾಧನೆ ಅತ್ಯುನ್ನತವಾದುದು. ಮುಂದಿನ ಪೀಳಿಗೆಗಾಗಿ ನಮ್ಮದೇ ಆಗಿದ್ದುದನ್ನು ಮರಳಿ ಪಡೆಯುವುದು ಅದಕ್ಕಾಗಿ ಟಿಬೆಟೀಯರಕ ಹೋರಾಟವನ್ನು ಬೆಂಬಲಿಸುವುದು ನಮ್ಮ ಕರ್ತವ್ಯ. ಮೂರು, ಭಾರತೀಯ ಸಂಸ್ಕೃತಿಯ ದರ್ಶನದ `ವಸುಧೈವ ಕುಟುಂಬಕಂ' ಎಂಬ ಸೈದ್ಧಾಂತಿಕ ನಿಲುವಿನಿಂದಾಗಿ ಉದ್ಭವಿಸುವ ಕೆಲವು ನೈತಿಕ ಕರ್ತವ್ಯಗಳಲ್ಲಿ ಟಿಬೆಟ್ ಸ್ವಾತಂತ್ರ್ಯ ಹೋರಾಟಕ್ಕೆ ನೆರವಾಗುವುದು ಒಂದು. ನಾಲ್ಕು ಭಾರತ ಮತ್ತು ಚೀನಾ ಗಡಿಗಳ ನಡುವೆ ಟಿಬೆಟ್‌ನ ಸ್ವಾತಂತ್ರ್ಯ ಭೂಭಾಗವಿರುವುದು

ಸ್ವಹಿತ ದೃಷ್ಟಿಯಿಂದ ಅತ್ಯಗತ್ಯ.

ಕುಬಿಯವರ ಅಭಿಪ್ರಾಯದಂತೆ ಮುಂದುವರಿದ ರಾಷ್ಟ್ರಗಳ ವೈಜ್ಞಾನಿಕ ಸಾಧನೆಗಳು (ಇವುಗಳಲ್ಲಿ ಅನೇಕವು ವಿನಾಶಕಾರಿಯಾಗಿರುವುದು ಶೋಚನೀಯ) ಜಾಗತಿಕ ಸ್ವತ್ತಾದಂತೆ ಪೌರ್ವಾತ್ಯರ ಅದರಲ್ಲೂ ಟಿಬೇಟಿಯರ ಅನನ್ಯ ಆಧ್ಯಾತ್ಮಿಕ ದಾರ್ಶನಿಕ ಸಾಧನೆಯೂ ಜಾಗತಿಕ ಸ್ವತ್ತು. ಅ್ಗ ಉಳಿವಿಗೆ ಟಿಬೆಟಿನಲ್ಲಿ ಪಾಂತಿಯ ಸ್ವಾತಂತ್ರ್ಯದ ಮುಕ್ತ ವಾತಾವರಣ ಅತ್ಯಾವಶ್ಯಕ.

ಆಶ್ಚರ್ಯದ ಸಂಗತಿಯೆಂದರೆ, ಧರ್ಮದ ಕಾರಣವೊಂದು ಕೇವಲ ಅರುವತ್ತು ಎಪ್ಪತ್ತು ವರ್ಷಗಳ ಹಿಂದೆ ರಾಜಕೀಯದಲ್ಲಿ ಹುಟ್ಟಿ ರಾಜಕೀಯ ಮಟ್ಟದಲ್ಲೇ ಉಳಿದು ವಿಧ್ವಂಸಕ ಅಣ್ವಸ್ತ್ರಗಳ ಉಸಾಬರಿಗೆ ಭಾರತವನ್ನೆಳೆದ ಪಾಕಿಸ್ತಾನದ ಜನ ಮೂಲತಃ ಆರ್ಯ ಜನಾಂಗದವರೇ, ಭಾರತೀಯರೇ ಹಾಗೆಯೇ ಧರ್ಮದ ಕಾರಣವೊಂದು ೯೦೦- ೧೦೦೦ ವರ್ಷಗಳ ಹಿಂದೆ ರಾಜಕೀಯದಲ್ಲಿ ಹುಟ್ಟಿಸಂಸ್ಕೃತಿಯ ಮಟ್ಟಕ್ಕೆ ಬೆಳೆದು, ಆಧ್ಯಾತ್ಮಿಕ ಎತ್ತರಕ್ಕೆ ಏರಿನಿಂತು ವಿಶ್ವ ಕುಟುಂಬದ ನಿಲುವಿಗೆ ಭಾರತವನ್ನು ಮತ್ತೆ ಪ್ರೇರೇಪಿಸುತ್ತಿರುವ ಟಿಬೇಟಿಯರು ಮೂಲತಃ ಆರ್ಯರಲ್ಲ ಮಂಗೋಲೀ ಬುಡಕಟ್ಟಿಗೆ ಸೇರಿದವರು, ಹಿಂದೊಂದು ಕಾಲದಲ್ಲಿ ಕ್ರೂರ ಹೋಣರೆಂದು ಪ್ರಸಿದ್ಧರಾದವರು.

ಪ್ರತಿಕೂಲ ಪರಿಸರದಲ್ಲಿ ಬದುಕುಳಿದ ಟಿಬೇಟೀ ಜನಾಂಗ, ಈ ಜನಾಂಗವು ಕಂಡ ಇತಿಹಾಸ, ಈ ಇತಿಹಾಸದಲ್ಲಿ ತನ್ನನ್ನು ಹೆಣೆದುಕೊಂಡ ಬೌದ್ಧ ಧರ್ಮ, ಈ ಧರ್ಮ ಟಿಬೇಟಿ ಜನಾಂಗದ ಬರಡು ಬಾಳಿನಲ್ಲಿ ಅರಳಿಸಿದ ನವ ಸಂಸ್ಕೃತಿ, ಈ ಸಂಸ್ಕೃತಿಯಲ್ಲಿ ಸಂಸ್ಕಾರ ಪಡೆದ ಟಿಬೆಟೀ ಸಮಷ್ಟಿಮನ ಕಂಡುಕೊಂಡ ಜೀವನ ದರ್ಶನ, ಭವ್ಯರೇ ಮಾನವ ಪ್ರಗತಿ.

ಪರಿಸರ, ಇತಿಹಾಸ, ಧರ್ಮ, ಸಂಸ್ಕೃತಿ, ಜೀವನ ದರ್ಶನ ಒಂದರೊಳಗೊಂದಾದ ಪಂಚಧಾರೆಗಳ ವಿಶಿಷ್ಟ ಟಿಬೆಟ್ ದೇಶದ ಜನರು ದೇವಾನಾಂಪ್ರಿಯರು , ಅಜಾತಶತ್ರುಗಳು, ವಿಶುದ್ಧರು, ಚಿತ್ತಪಾವನರು, ಅದಮ್ಯರು, ಅಲ್ಪತೃಪ್ತರು, ನಿಜ ಶ್ರಾವಕರು ತಮ್ಮ ಆತ್ಮವನ್ನು ಬಾಗಿಸದ ಮಾನೋನ್ನತಿಯ ಮಂಕುತಿಮ್ಮರೇ ಸೈ !

# ಮಾನಸ ಪಥದಲ್ಲಿ

ಪಥಿಕಮಾತ್ರನು ನಾನು
ಒಲ್ಮೆಯಾ ಪಥದಲ್ಲಿ ಸಾಗುವುದೆ ಬೇಕೆನಗೆ
ಏರಿಳಿತಗಳು ಇದ್ದುದ್ದೇ ದಾರಿಗುಂಟ
ಆಸರೆಗೆ ಇಹುದಲ್ಲ ಸುತ್ತಲಿನ ನೋಟ
ಬೈಗು ಬೆಳಗೂ ಬಿಚ್ಚಿ ಕಟ್ಟುವೆ ಡೇರೆ
ಸಾಗುವೆನು ನಿಧಾನದಲ್ಲಿ ಕೊನೆಯವರೆಗೆ
ನೋಡುತ್ತ ಅಚ್ಚರಿಯೊಳದರ ಉದ್ದಕ್ಕೂ
ಅನುಭವಿಸಿ ಸಾಗುವಾ ಹಿರಿಯ ಗುರಿಯೆನಗೆ
ಎನಿತೊ ಮಧು ಹೀರಲೆನಿತೊ ಮಧುಶಾಲೆ
ಚೊಕ್ಕವಾಗಿರೆ ಪಾತ್ರೆ ಅದುವೆ ಸಾಕೆನೆಗೆ
ಪಥಿಕ ಮಾತ್ರನು ನಾನು
ಪಥವೊಲಿದು ಸಾಗುವುದೆ ಸಾಕೆನಗೆ.

ಒಲಿದು ಕೈಗೊಂಡ ಪಯಣದ ಕೊನೆ ಮುಟ್ಟಿ, ಹೋದ ದಾರಿಯಲ್ಲೇ ಮರುಪಯಣ ಹೊರಟೆವು. ಅದೇ ದೇಹ ಅದೇ ಕರಣಗಳು, ಮತ್ತದೇ ಶಿಬಿರಗಳು, ಅದೆ ಊಟ ಉಪಚಾರಗಳು, ನಡಿಗೆ ನೋಟಗಳು ಗೆಳೆತನದ ಕೂಟಗಳು ಅವೇ, ಅದರಲ್ಲವೂ ಹೊಸತು. ಒಲಿದ ಪಥದ ಕೊನೆಯಲ್ಲಾದ ತಿರುವು ಎಲ್ಲಕ್ಕೂ ಹೊಸ ಅರ್ಥ, ಹೊಸ ಆಳ, ಹೊಸ ಬಿಗುವು ತಂದಿತ್ತು. ಮಾನಸ ಪಥದ ಕೊನೆಯಿಲ್ಲದ ದೀರ್ಘ ಪಯಣಕ್ಕೆ ನಾಂದಿ ಹಾಡಿತ್ತು.

ಹಿಂದಿನ ರಾತ್ರಿಯ ಮೈತ್ರಿಕೂಟದ ಕಾರಣವೋ ನಿಜವಾದ ಆತ್ಮೀಯತೆಯೋ, ಒಟ್ಟಿನಲ್ಲಿ ನಾವು ಭಾರತಕ್ಕೆ ಮರಳಿ ಹೊರಟಾಗ ಟಕಲಾಕೋಟ್‌ನ ಬುರಾಂಗ್ ಹೋಟೆಲಿನವರೆಲ್ಲ ತಲೆ ಬಾಗಿಲವರೆಗೆ ಬಂದು ಬೀಳ್ಕೊಟ್ಟರು. `ನಮ್ಮ ನೆಲದ ಕಲ್ಲು ನೀರು ಹೊತ್ತು ಹೊರಟಿರುವ ನಿಮ್ಮೊಂದಿಗೆ ನಮ್ಮ ನಾಡ ನೆನಪುಗಳ ಬುತ್ತಿಯೂ ಇದೆ. ಈ ಬುತ್ತಿ ನಿಮ್ಮ ಮುಂದಿನ ಎಲ್ಲ ಪಯಣಕ್ಕೆ ಶಾಂತಿ - ಶಕ್ತಿಯನ್ನೀಯಲಿ' ಎಂದಿರಬೇಕು, ಅದರ ಮನ. ಟಿಬೆಟ್ಟಿನ ಪ್ರವಾಸದ ಎರಡು ವಾರಗಳಲ್ಲಿ ಕೊಟ್ಟದ್ದು ಐದಾದರೆ ಪಡೆದದ್ದು ಐನೂರು ಎಂಬಂತಾಗಿತ್ತು. ಪ್ರಕೃತಿ ಪ್ರತ್ಯಕ್ಷವಾಗಿ, ಟಿಬೆಟ್ ಸಂಸ್ಕೃತಿ ಪರೋಕ್ಷವಾಗಿ ನಮ್ಮನ್ನು ಆವರಿಸಿತ್ತು. ಟಿಬೆಟ್ಟಿಗೆ ಕಾಲಿಡುವಾಗಿನ ಅನಿಸಿಕೆಗೂ ಇಂದು ಭಾರತಕ್ಕೆ ಮರಳುವಾಗಿನ ಅನಿಸಿಕೆಗೂ ಅಜಗಜಾಂತರ. ಭಾರತದ ವಿದೇಶಾಂಗ ವ್ಯವಹಾರ ಮಂತ್ರಾಲಯದ ಅಧಿಕಾರಿಗಳ ಮುನ್ನೆಚ್ಚರಿಕೆ, ಯಾತ್ರೆಗೆ ಹೋಗಿ ಬಂದ ತಂಡದವರ ಹೇಳಿಕೆ ವರದಿಗಳು, ಗಡಿ ಪೊಲೀಸಿನವರ ತಾಕೀತು, ನಿರ್ವಹಣಾಧಿಕಾರಿಯ ಕಟ್ಟುಪಾಡು , ಎಲ್ಲವನ್ನು ಸುಳ್ಳಾಗಿಸಿ ನಮ್ಮನ್ನು ಆಕರ್ಷಿಸಿದ್ದು, ಟಿಬೆಟೀಯರ ಆತ್ಮೀಯ ವ್ಯವಹಾರ . ಡೇವಿಡ್, ಜಾನ್, ಡ್ರೈವರ್, ಪೇಮಾ, ಸೂಸೀ, ತುಮ್ರುಪ್, ಮೋಲೋ ನಮ್ಮೊಡನೆ ವ್ಯವಹರಿಸಿದ ಟಿಬೆಟಿ ಯುವಕರೇ, ಅದೇ ಹುಚ್ಚು ಧೈರ್ಯ, ಹುಮ್ಮಸ್ಸು,

ಆಟ ಕೀಟಲೆ, ನಗೆ ಚಾಟಿಕೆ ಮತ್ತು ಜೀವನವನ್ನು ಅನುಭವಿಸುವ ಉತ್ಸಾಹ. ಬಹು ಬೇಗ ಹೃದಯಕ್ಕೆ ಹತ್ತಿರವಾದವರು ಈ ಮೊದಲು

ಸಂದರ್ಶಿಸಿದ ಅನೇಕ ದೇಶಗಳ ಪ್ರವಾಸಾನುಭವಗಳಿಗಿಂತ ಟಿಬೆಟ್ ಪ್ರವಾಸ ತೀರ ಭಿನ್ನವಾಗಿತ್ತು. ಹಿಂದೆಲ್ಲಾ ಅಗತ್ಯಗಳನ್ನು ಭಾವನೆಗಳನ್ನು ತಿಳಿಸಲು ಭಾಷೆಯ ಮಾಧ್ಯಮದ ಸಹಾಯ, ಜೊತೆಯಲ್ಲಿ ಕೈ ಹಿಡಿದವರ ಸಹಾಯವಿತ್ತು. ಇಲ್ಲಾದರೋ ನೇರವಾಗಿ ಹೃದಯ ಹೃದಯದ ಮೌನ ಸಂವಾದ. ಭಾಷಾಮಾಧ್ಯಮದ ಅಂತರವಿಲ್ಲದ ನಿಕಟತೆ, ವಿಶ್ವಪ್ರಜೆಯಾಗಿ ಸಂಗ್ರಹಿಸಿದ ಪ್ರವಾಸಾನುಭವ.

ಮನೆಬಿಟ್ಟು ಆಗಲೇ ಒಂದು ತಿಂಗಳು ಕಳೆದಿತ್ತು. ಉದ್ದೇಶಿತ ಕಾರ್ಯ ಕೈಗೊತ್ತಾದರೂ ಅಭ್ಯಾಸವಿಲ್ಲದ ಆಹಾರ, ದೇಹಶ್ರಮ, ಶೀತಲಹವೆ, ಬದಲಾದ ದಿನಚರಿ, ಮಿಗಿಲಾಗಿ ಮಿದುಳಿನಲ್ಲಿ ನಿರಂತರವಾಗಿ ದಾಖಲಾಗುತ್ತಿದ್ದ ದೃಶ್ಯ ಅನುಭವಗಳ ಉಳಿಪೆಟ್ಟು ಎಲ್ಲವೂ ಸೇರಿ ಏನೋ ವಿಮನಸ್ಕತೆ ಜಡತೆ ಒಂದು ದಿನವೆಲ್ಲ ಕಾಡಿತ್ತು. ಆದರೆ ಇಂದು ಬೆಳಗಿನ ಹೊಂಬಿಸಿಲ ಕಾವು ಏರಿದಂತೆ, ಹಿಮಾಲಯದ ಹಿಮಶಿಖರಗಳು ಸಮೀಪಿಸಿದಂತೆ ಅಡರಿದ್ದ ಜಡತೆ ಬಿಟ್ಟೋಡಿ ಮನಸು ಹಗುರವಾಯಿತು. ಟಕಲಾಕೋಟ್ ಊರನ್ನು ಬಿಟ್ಟ ಬಸ್ಸು ಭಾರತ ಪ್ರದೇಶದ ಕಡೆಗೆ ಓಡಿದಂತೆ ನಮ್ಮೆಲ್ಲರ ಮನಸ್ಸು ಹಕ್ಕಿಯಂತೆ ಲಿಪುಲೇಖ್ ಮೇಲೆ ಹಾರಿತ್ತು. ನೋಡ ನೋಡುತ್ತಲೇ ಹದಿನೇಳು ಕಿ. ಮೀ. ಬಸ್ ಪ್ರಯಾಣ ಮುಗಿದು ಬೆಟ್ಟದ ತಪ್ಪಲಿನಲ್ಲಿ ನಮಗಾಗಿ ಕಾದಿದ್ದ ಕುದುರೆಗಳ ಬಳಿಸಾರಿದೆವು. ಐದು ಕಿ.ಮೀ. . ಏರು ದಾರಿಯನ್ನು ಕುದುರೆಯ ಮೇಲೆ ಕುಳಿತು ಕ್ರಮಿಸಿದೆವು. ಹೋಗುವಾಗಿದ್ದ ಭಯ ಆತಂಕಗಳ ಬದಲಿಗೆ ಇಂದು ಮೋಜು, ಮಸ್ತಿ, ವಿಶ್ವಾಸವಿತ್ತು. ಬಿದ್ದರೂ ನಗುತ್ತಾ ಎದ್ದು ಕೊಡವಿಕೊಂಡು ಮತ್ತೆ ಕುದುರೆ ಹತ್ತಿ ಮುಂದೆ ಸಾಗಿದೆವು. ಕುದುರೆ ಸವಾರಿ ಕಲಿಯದಿದ್ದರೂ ಭಯವನ್ನು ನಿಯಂತ್ರಿಸಲು ಇಲ್ಲಿಗೆ ಬಂದು ಕಲಿತೆವು.

ಲಿಪುಲೇಖ್ ಪಾಸ್ ತಲುಪಲು ಇನ್ನೂ ಒಂದು ಕಿ. ಮೀ. ದೂರದ ನಡಿಗೆಯ ಏರು ದಾರಿ ಉಳಿದಿತ್ತು. ನೀರ್ಗಲ್ಲ ಹಾಸಿನ ಮೇಲೆ ಕೆಲದೂರ ನಡೆದು, ಕೆಲದೂರ ಜಾರುತ್ತಾ ಮತ್ತೆ ಏರುತ್ತಾ ಕೆಲದೂರ ತೆವಳುತ್ತ ಮೇಲಕ್ಕೇರಿದೆವು.

ನಮ್ಮ ಸಾಮಾನುಗಳನ್ನು ಹೊತ್ತು ನಡೆದಿದ್ದ ಟಿಬೆಟೀಯರ `ಚಲೋ ಚಲೋ!' ಮತ್ತು ಸಾಮಾನು ಹೊತ್ತವರೇ ಹತ್ತುತ್ತಿರಬೇಕಾದರೆ ನಮ್ಮ ದೇಹ ನಾವು ಹೊರಲಾರೆವೇ ಎಂಬ ಹುಮ್ಮಸ್ಸು, ನಮ್ಮನ್ನು ಕೆಳಗಿನಿಂದ ನೂಕಿತ್ತು. ಮೇಲೆ ನಮಗಾಗಿ ಐಟಿಬಿಪಿಯವರು ಮತ್ತು ಭೋಟಿಯಾ ಜನರು ನಮಗಾಗಿ ಕಾದಿರುವರೆಂಬ ಅರಿವು ನಮ್ಮನ್ನು ಮೇಲಕ್ಕೆಳೆದಿತ್ತು. ಅವರನ್ನು ದೂರದಲ್ಲಿ ಕಂಡಕ್ಷಣವೇ ಕೈ ಬೀಸಿ, `ಭಾರತ ಮಾತಾ ಕೀ ಜೈ! ವಂದೇ ಮಾತರಂ!' ಜಯಕಾರ ಮಾಡಿದವರೆಷ್ಟು ಜನ! ಸನಿಹಕ್ಕೆ ಬಂದಾಗ ಹಿಡಿದೆತ್ತಿಕೊಂಡ ಸೈನಿಕರೆಷ್ಟು ಜನ! ಪ್ರತಿವರ್ಷ ಕೈಲಾಸದಿಂದ ತವರಿಗೆ ಮಗನಿಗಿಂತಲೂ ಮುಂದಾಗಿ ಓಡೋಡಿ ಬರುವ ಗಿರಿಜೆಗೂ ಇದೇ ಸ್ವಾಗತ ಸಿಕ್ಕು, ತಾಯಿಗಾಗಿ ಹಾರೈಸುವ, ತಾಯ್ನೆಲವನ್ನು ಹರಸುವ ಮನವೇನೋ ಬಹು ಭಾವಪೂರ್ಣ ಕ್ಷಣಗಳವು. ನಮ್ಮ ಈ ಸಂತೋಷದ ಹೊನಲಲ್ಲಿ ಜೊತೆಗೆ ಬಂದಿದ್ದ ಟಿಬೇಟಿಯರೂ ತೇಲಾಡಿ, ಕೈಕುಲುಕಿ, ಭುಜ ಹಿಡಿದು ಮತ್ತೊಮ್ಮೆ ಬನ್ನಿರೆಂದು ಆಹ್ವಾನಿಸಿ ಬೀಳ್ಕೊಟ್ಟರು. ಹದಿನೈದು ದಿನಗಳ ಹಿಂದೆ ಇದೇ ಸ್ಥಳದಲ್ಲಿ ನಿಂತಾಗ ಭಯದಿಂದ

ಎದೆಯಲ್ಲಿ ಬಾರಿಸಿದ್ದ ನಗಾರಿ ಇಂದು ಅಲ್ಲಯ್ಯನ ಮದ್ದಳೆಯಾಗಿ ಸಂತಸದ ಅಲೆಗಳನ್ನೆಬ್ಬಿಸಿತ್ತು. ಈ ಮದ್ದಳೆಯ ತುಡಿತವನ್ನು ಒಮ್ಮೆ ಕೇಳಿದವರು ಯಾವುದೇ ಪರಿಸರಕ್ಕೆ ಅಲ್ಲಿನ ಜನಕ್ಕೆ ಮೊದಲಿನಂತೆ ಪ್ರತಿಕ್ರಿಯಿಸದೆ ಅಲ್ಲಯ್ಯನ ತಾಳಕ್ಕೆ ತಕ್ಕಂತೆ ಸ್ಪಂದಿಸುವವರಾಗಿದ್ದೆವು. ನಮಗೆ ನಾವು ಹೊಸಬರಾಗಿದ್ದೆವು.

ಲಿಪುಲೇಖ್ ಪಾಸ್‌ನ ಭಾರತದ ಭಾಗಕ್ಕೆ ಕಾಲಿಟ್ಟ ಕೂಡಲೇ ಓಂ ಮಣಿಪದ್ಮೇಹುಂ ಷಡಕ್ಷರ ಮಂತ್ರದ ಪರಿಸರದಿಂದ ಓಂ ನಮಃ ಶಿವಾಯ ಮಂತ್ರದ ವಾತಾವರಣಕ್ಕೆ ಜರುಗಿದ್ದೆವು. ಲಿಪುಲೇಖ್ ಏರಿನಂತ ಹತ್ತೇ ನಿಮಿಷದಲ್ಲಿ ಐವತ್ತು ಸಲಕ್ಕೂ ಮೀರಿ ಓಂ ನಮಃ ಶಿವಾಯ ಹೇಳಿ ಅಲ್ಲಿ ಕಾದಿದ್ದವರನ್ನು ಅಭಿನಂದಿಸಿದೆವು. ಐ. ಟಿ. ಬಿ. ಪಿ. ಯವರು, ಭೋಟಿಯಾಗಳು, ಏಳನೇ ತಂಡದ ಯಾತ್ರಿಗಳು ಎಲ್ಲರೂ ಓಂ ನಮಃ ಶಿವಾಯ ಹೇಳಿ ತಬ್ಬಿಕೊಂಡರು. `ನಿಮ್ಮ ಯಾತ್ರೆ ಸುಖವಾಗಿತ್ತಲ್ಲವೇ?' `ಮನಸ್ಸಿಗಾನಂದ ಕೊಟ್ಟಿದೆಯೆಂದು ನಿಮ್ಮ ಮುಖವೇ ಹೇಳುತ್ತಿದೆ.' `ಎಲ್ಲರೂ ಕ್ಷೇಮ ತಾನೇ, ಕೈಲಾಸಪತಿಯ ದರ್ಶನ ಮಾಡಿದ ಪುಣ್ಯವಂತರು ನೀವು. ನಮಗೂ ಆಗಲೆಂದು ಹರಸಿ.' `ಯಾತ್ರೆ ಮಾಡುವ ಬಗೆಗೆ ನಿಮ್ಮ ಸಲಹೆಗಳೇನು?' `ನಮ್ಮ ಪಾರ್ವತಿಯ ಪೀಹರ್ (ಪತಿಗೃಹ ಕೈಲಾಸ ಪರ್ವತ) ಹೇಗಿದೆ?' `ನಿನ್ನ ಸಾಮೂನು ಗಂಟೇಕೆ ಇಷ್ಟು ಭಾರ? ತೀರ್ಥಜಲದ ಜೊತೆ ಪುಣ್ಯವನ್ನು ತುಂಬಿರಬೇಕು ನೀನು.' `ನಮ್ಮ ನೆಲಕ್ಕೆ (ಕುಮಾವ್ ಜಿಲ್ಲೆ) ಇಷ್ಟು ಸಮೀಪ ( ಕೇವಲ ೮೦-೧೦೦ ಕಿ. ಮೀ. ವಿರುವ ಕೈಲಾಸ ಮಾನಸ ಕ್ಷೇತ್ರಕ್ಕೆ ಹೆಚ್ಚು ಅನುಕೂಲ ಮಾಡಿಕೊಡುವಂತೆ ದಿಲ್ಲಿಯ ಸರ್ಕಾರಕ್ಕೆ ಹೇಳಿ.' - ಈ ಎಲ್ಲ ಮಾತಿಗೂ ಮುಗುಳ್ನಗೆಯೊಂದಿಗೆ ನಮ್ಮ ಉತ್ತರ `ಎಲ್ಲ ದೈವೇಚ್ಛೆಯಂತಾಗುವುದು.'

ಕೈಲಾಸ ಮಾನಸ ಪರಿಕ್ರಮಣ ಮಾಡಿದ ನಂತರ ನನ್ನ ಸಹನೆ ಶಕ್ತಿಯ ಬಗ್ಗೆ ವಿಶ್ವಾಸ ಮೂಡಿತು. ಇದರ ಪರಿಣಾಮ ಲಿಪುಲೇಖ್‌ನಿಂದ ಧಾರ್ಚುಲಾವರೆಗಿನ ಎಲ್ಲ ಚಾರಣವನ್ನು ಕುದುರೆಯ ಸಹಾಯವಿಲ್ಲದೆಯೇ ಕಾಲ್ನಡಿಗೆಯಲ್ಲೇ ಮಾಡಬೇಕೆಂಬ ನಿರ್ಧಾರ. ನನ್ನ ಸಹಾಯಕ್ಕಿರಲೆಂದು ಗೊತ್ತುಮಾಡಿದ ಪೋರ್ಟರ್ ತುಲಾರಾಮ್‌ಸಿಂಗ್‌ನೊಂದಿಗೆ ಮರು ಪಯಣ ಆರಂಭಿಸಿದಂತಾಯಿತು.

ಅಂದು ಟಿಬೇಟಿಗೆ ಹೋಗುವಾಗ ಚಳಿಗಾಳಿಯ ಮಂಜಿನ ತೆರೆಮರೆಯಲ್ಲಿ ಟಿಬೆಟ್ಟಿಗೆ ಮೊಗಮಾಡಿ ನಿಂತಾಗ ಕಂಡಿದ್ದ ಲಿಪುಲೇಖ್ ಏರಿಗೂ ಭಾರತಕ್ಕೆ ಮರಳುವಾಗ ಬಾಲ ಸೂರ್ಯನ ಬೆಳಕಿನಲ್ಲಿ ಹೊಳೆದ ಲಿಪುಲೇಖ್ ಇಳುಕಲಿಗೂ ಬಹಳ ವ್ಯಾತ್ಯಾಸವಿತ್ತು. ರುದ್ರ ರಮಣೀಯವು ಸೌಮ್ಯ ಭಾವವನ್ನು ತೋರಿ ಕ್ಷೇಮಭ್ಹಾವವನ್ನು ಕೊಟ್ಟಿತ್ತು, ಕೆಳಗೆ ಇಳಿದಂತೆ ಕುರುಚಲು ಗಿಡಗಳಲ್ಲಿ ಹುಲ್ಲಿನಲ್ಲಿ ಹೂ ಹೆಚ್ಚಿದಂತಿತ್ತು. ಹುಲ್ಲು ಹಸಿರೊಡೆಯುತ್ತಿತ್ತು. ಆಕಾಶ ಶಾಖವನ್ನೂಡುತ್ತಿತ್ತು. ಸುತ್ತಲಿನ ಬೆಟ್ಟಗಳು ನಮ್ಮನ್ನು ತಮ್ಮ ಮಡಿಲಿಗೆಳೆದುಕೊಂಡಂತಿತ್ತು. ನಮ್ಮಲ್ಲಿನ ಹರ್ಷಚಿತ್ತತೆ ಪರಿಸರದಲ್ಲಿ ಪ್ರತಿಧ್ವನಿಸಿತ್ತು.

ನಮ್ಮನ್ನು ಕರೆತರಲು ಲಿಪುಲೇಖ್ ಪಾಸ್‌ವರೆಗೂ ಬಂದಿದ್ದ ೧೨-೧೫ ಜನ ಐ. ಟಿ. ಬಿ ಪಿ. ದಳದವರು ಆತ್ಮೀಯತೆಯಿಂದ ಕೇಳುತ್ತಿದ್ದ ಕುಶಲ ಪ್ರಶ್ನೆಗಳು `ಪ್ರವಾಸ ಸುಗಮವಾಗಿತ್ತಲ್ಲವೇ? ಕಷ್ಟಮ್ಸ್‌ನಲ್ಲಿ ಯಾವ ರೀತಿಯ ತೊಂದರೆಯಿರಲಿಲ್ಲವಷ್ಟೆ? ಯಾಕ್ ಸವಾರಿಯಲ್ಲಿ ಯಾರಿಗೇನೂ ಅನಾಹುತವಾಗಲಿಲ್ಲವಷ್ಟೇ!' ಹೀಗೆ ಹಲವಾರು. ರಕ್ಷಣಾಪಡೆಯವರಾದ್ದರಿಂದ ತಾವು ಗಡಿದಾಟಿ

ಹೋಗಿ ನೋಡಲಾಗದ ಕೈಲಾಸ ಮಾನಸದ ಬಗ್ಗೆ ಕುತೂಹಲದ ಪ್ರಶ್ನೆಗಳು ಬಂದವು. ಆ ಪ್ರದೇಶದ ಹವಾಮಾನ, ಊಟ ವಸತಿಗಳ ಸೌಕರ್ಯ, ವ್ಯವಸಾಯದ ರೀತಿ, ಕೈಲಾಸ ಶಿಖರ ಹಾಗೂ ಮಾನಸ ಸರೋವರದ ಸೌಂದರ್ಯ ಪವಿತ್ರತೆ, ಅಲ್ಲಿನ ಪುರಾಣ ಕಥೆಗಳು ದೇವ ಮಂದಿರಗಳು ಎಲ್ಲ ವಿಷಯಗಳನ್ನು ಕುರಿತ ಪ್ರಶ್ನೆಗಳು, ನಂತರ ತಮ್ಮ ಪರಿಸರಕ್ಕೆ ಹೋಲಿಸಿ ತಮ್ಮಲ್ಲಿನ ಸವಲತ್ತು ದಿನಚರಿಗೆ ಹೋಲಿಸಿ ನಡೆಸಿದ ಚರ್ಚೆ ಜೀವನದ ಬಗೆಗಿನ ಅವರ ಕಾಳಜಿಯನ್ನು ಪ್ರತಿಬಿಂಬಿಸಿತ್ತು.

ಮುಂದೆ ನಡೆದಿದ್ದ ದಳದವರಿಂದ ಸಂಕೇತ ಬಂದು ನಮ್ಮೊಡನಿದ್ದ `ಅಧಿಕಾರಿ, ನಿಮಗೊಂದು ಸಿಹಿ ಸುದ್ದಿ. ನಾಬಿದಾಂಗ್‌ನಲ್ಲಿ ಹವಾಮಾನ ಚೆನ್ನಾಗಿದೆ ಸಿಹಿ ಸುದ್ದಿ . ನಾಬಿದಾಂಗ್‌ನಲ್ಲಿ ಹವಾಮಾನ ಚೆನ್ನಾಗಿದ್ದು ಓಂ ಪರ್ವತ ನಿಚ್ಚಳವಾಗಿದೆ. ಇನ್ನೆರಡು ತಾಸು ಬಿಸಿಲಿರುವ ಸಾಧ್ಯತೆಯುಂಟು. ನೀವುಗಳು ಬೇಗ ಹೆಜ್ಜೆ ಹಾಕಿದರೆ ನಾಬಿದಾಂಗ್‌ನಲ್ಲಿ ಓಂ ಪರ್ವತ ನೋಡುತ್ತ ಕೊಡಲು ಹೆಚ್ಚು ಸಮಯ ಸಿಗುವುದು.' ಎಂದರು. ಈ ಸಿಹಿಸುದ್ದಿಯಿಂದ ನಮ್ಮ ಕಾಲಿಗೆ ರೆಕ್ಕೆಮೂಡಿದಂತಾಗಿ ಭಾರತದ ಸಮಯಾನುಸಾರ ಬೆಳಗಿನ ಹತ್ತುವರೆ ಗಂಟೆಗೆಲ್ಲಾ ನಾಬಿದಾಂಗ್ ಕಿರು ಮೈದಾನದಲ್ಲಿದ್ದೆವು. ಮೂರು ವಾರಗಳ ಹಿಂದೆ ಇದೇ ಮೈದಾನದಲ್ಲಿ ಆರು ಗಂಟೆಗಳ ಕಾಲ ಕಾಗು ಕುಳಿತರೂ ಮೊಗ ತೋರದೆ ಮಂಜಿನ ಹಿಂದಿದ್ದ ಓಂ ಪರ್ವತವು ಇಂದು ಬೆಳಗಿನಿಂದ ಸೂರ್ಯನ ಶಾಖದಲ್ಲಿ ಜಳಕ ಮಾಡಿತ್ತು. ದೇವತಾತ್ಮಕ ಹಿಮವಂತನ ಅಂಕಿತವನ್ನು ಹೊತ್ತು ನಿಂತಿತ್ತು. ನಿಸರ್ಗವೇ ಬರೆದ ಈ ಸಂಕೇತವನ್ನೇ ಪ್ರಣವನಾದದ ಸಂಕೇತವಾಗಿರಿಸಿಕೊಂಡಿತೇ ಸನಾತನ ಭಾರತೀಯ ಜನಮನ? ನಿಸರ್ಗದ ನಿಗೂಢತೆಗಳಲ್ಲೊಂದು ಈ ಪರ್ವತ. ಎಂದೂ ಕ್ಷರವಾಗದ `ಓಂ.' ಅಕ್ಷರ ಎಲ್ಲ ಮಂತ್ರಗಳ ಆದಿಯಲ್ಲಿ ಸ್ಥಿರಗೊಂಡ ಅಕ್ಷರ ! ಎಲ್ಲ ಮಂತ್ರಗಳ ಆದಿಯಲ್ಲಿ ಸ್ಥಿರಗೊಂಡ ಅಕ್ಷರ! ಪ್ರವಾಸದ ಅಂತಿಮ ಚರಣದಲ್ಲಿ ಗೋಚರಿಸಿ ಪ್ರವಾಸಕ್ಕೆ ಆಧ್ಯಾತ್ಮಿಕ ಹಿನ್ನುಡಿ ಬರೆದ ಅಕ್ಷರ. `ಇಂದು ಓಂ ದರ್ಶನವಾದ ಮೇಲೆ ನಿಮ್ಮ ಯಾತ್ರೆ ಸಂಪೂರ್ಣವಾಯಿತಲ್ಲವೇ?' ಎಂದವರಿಗೆ ಉತ್ತರಿಸಲಾಗದೆ ಪೂರ್ಣ ಮಂತ್ರವನ್ನು ಧ್ಯಾನಿಸುತ್ತಿದ್ದ ಮನ ತಲೆಯಾಡಿಸಿತ್ತಷ್ಟೆ. ಮಧ್ಯಾಹ್ನದ ಊಟ ಮಾಡುವಾಗಲೂ ಕೈಯಿಟ್ಟ ತುತ್ತನ್ನು ಬಾಯಿ ನುಂಗಿತ್ತಾದರೂ ದೇಹದ ಕಣಕಣವೂ ಅದನ್ನು ಓಂಕಾರವಾಗಿಯೇ ಸ್ವೀಕರಿಸಿತ್ತು. ಇಂದಿನ ಆಹಾರ ಸೂಕ್ಷ್ಮ ಶರೀರಕ್ಕೂ ಶಕ್ತಿ ಕೊಟ್ಟ ಅನನ್ಯ ಭೋಜನ. ಮಧ್ಯಾಹ್ನ ಒಂದು ಗಂಟೆಗೆ ಓಂ ಪರ್ವತವನ್ನು , ಶಿಬಿರದ ಕರ್ಮಚಾರಿಗಳನ್ನು ಬೀಳ್ಕೊಂಡು ನಾಬಿದಾಂಗ್ ಹಳ್ಳಿಯನ್ನು ಬಿಟ್ಟ ಯಾತ್ರಿತಂಡ ಸಂಜೆ ಐದಕ್ಕೆಲ್ಲಾ ಕಾಲಾಪಾನಿ ಸೇರಿತ್ತು. ಬೆಳಗ್ಗೆ ಆರು ಗಂಟೆಗೆ ಟಿಬೆಟ್‌ನ ಟಕಲಾಕೋಟ್ ಬಿಟ್ಟವರು ಸಂಜೆ ಐದು ಗಂಟೆಗೆ ಭಾರತದ ಕಾಲಾಪಾನಿ ಶಿಬಿರದಲ್ಲಿ ಅಂದಿನ ೫೦ ಕಿ, ಮೀ. ನ ಚಾರಣದ ಮುಕ್ತಾಯ ಕಂಡೆವು. ಲಿಪುಲೇಖ್ ಪಾಸ್‌ನಿಂದಲೂ ನಮ್ಮೊಂದಿಗೇ ಬಂದ ಐ. ಟಿ. ಬಿ. ಪಿ. ಯವರು ಕಾಲಾಪಾನಿಗೆ ಬಂದ ಕೂಡಲೇ ಮಾಡಿದ ಮೊದಲ ಕಾರ್ಯವೆಂದರೆ ಕಸ್ಟಮ್ಸ್ ಕಛೇರಿಯಲ್ಲಿದ್ದ ನಮ್ಮ ಕಛೇರಿಯಲ್ಲಿದ್ದ ನಮ್ಮ ಸಾಮಾನುಗಳನ್ನು ಮತ್ತು ಇಟ್ಟಿದ್ದ ನಗದು ಹಣವನ್ನು ನಮಗೆ ಒಪ್ಪಿಸಿದುದು.

ಅರ್ಧಗೋಳಾಕಾರದ ಟೆಂಟಿನೊಳಗೆ ಸಾಲಾಗಿ ಹಾಸಿದ್ದ ಹಾಸಿಗೆಗಳನ್ನು ಕಂಡವರೇ ಎಲ್ಲರೂ ಅಡ್ಡಾದೆವು. ಎದುರಿಗಿದ್ದ ಕಿಟಕಿಯಾಚೆಗೆ ನೋಡಿದಾಗಲೆಲ್ಲಾ ಶಿಬಿರದ ಪಕ್ಕಕ್ಕೆ ಇದ್ದ ವ್ಯಾಸ ಪರ್ವತ



*Yeshe Tsogyal*

ಯೆಶೆ ತ್ಸೊಗ್ಯಾಲ್



Tara *(Green)*

ಹಸಿರು ತಾರಾ



ಅಷ್ಟ ರೂಪಗಳಲ್ಲಿ ಪದ್ಮಸಂಭವ



Avalokiteshvara

ಅವಲೋಕಿತೇಶ್ವರ



ಪ್ರಾರ್ಥನಾ ಚಕ್ರದಲ್ಲಿ ಶಾಂತಿ ಅರಸುವ ವೃದ್ಧ

ದೇವಾಲಯದ ಪ್ರಾಕಾರದಲ್ಲಿ ಪ್ರಾರ್ಥನಾ ಚಕ್ರಗಳು



ಖೋಜಾರನಾಥ ದೇವಾಲಯದ ಮೂರ್ತಿಗಳು

ಕುಪ್ಪಳಿಸಿ ಮತ್ತಷ್ಟು ಸನಿಹಕ್ಕೆ ಬಂದಂತೆ. ಇಳಿ ಹೊತ್ತಿನ ಹಳದಿ ಬೆಳಕಿನಲ್ಲಿ ಪರ್ವತ ವಿಚಿತ್ರವಾಗಿ ತೋರಿತ್ತು. ಇಷ್ಟು ದಿನ ಬಯಲಲ್ಲಿ ಇದ್ದು ಬಂದು ಪರ್ವತದ ಬುಡದಲ್ಲೇ ಮಲಗಿದಾಗ ಪರ್ವತ ನಮ್ಮ ಮೇಲೆ ಆತುಕೊಂಡಂತಾದದು ಸಹಜವೇ. ರಾತ್ರಿಯಾಗಿ, ಕತ್ತಲೆಯ ಮುಸುಕು ಪರಿಸರವೆಲ್ಲವನ್ನು ಮುಚ್ಚಿದಾಗಲೇ ತುಸು ನೆಮ್ಮದಿ ಕಂಡಿತ್ತು. ಜೀವ. ಟಿಬೆಟ್ಟಿಗೆ ಹೋಗುವಾಗ ಇದೇ ಶಿಬಿರದಿಂದ ಅರ್ಧ ಕಿ. ಮೀ. ದೂರದಲ್ಲಿದ್ದ ಕಾಲಿಮಾತಾ ದೇವಿ ಮಂದಿರದ ಎದುರು ಐ. ಟಿ . ಬಿ. ಪಿ. ಯುವಕರು ನಡೆಸಿದ್ದ ಭಜನೆ ನರ್ತನವನ್ನು ನೋಡಿದ್ದೆವು. ಅವರೊಂದಿಗೆ ನಾವು ದನಿಗೂಡಿಸಿದ್ದೆವು. ಅದರಿಂದು, ಯುವಕರೇ ಬಂದು ಕರೆದಾಗಲೂ ಮೇಲೇಳಲಾಗದಂತಹ ದಣಿವು ಇಂದು ನಿಮಗೆ ರಿಯಾಯಿತಿ ತೋರುವೆವು. ಆದರೆ ನಾಳೆ ಗುಂಜಿಯಲ್ಲಿ ನೀವೆಲ್ಲರೂ ನಮ್ಮೊಡನೆ ಖಂಡಿತ ಭಾಗವಹಿಸಬೇಕು. ನಿರಾಶೆ ಮಾಡದಿರಿ. ಯುವಕರ ಅಕ್ಕರೆಯ ಆಹ್ವಾನ, ಪ್ರೀತಿಯ ಒತ್ತಾಯ.

ಇಂದಿನ ನಡಿಗೆ ಗುಂಜಿ ಶಿಬಿರದವರೆಗೆ ಮಾತ್ರವೆಂದು ನಿಶ್ಚಿತವಾಗಿದ್ದು, ಎಲ್ಲರೂ ಪಿಕ್‌ನಿಕ್ ಮೂಡಿನಲ್ಲಿದ್ದೆವು. ಕಾಲಾಪಾನಿಯಲ್ಲಿ ಬೆಳಗಿನ ಉಪಹಾರ ಮುಗಿಸಿ ನದಿಯ ದಡಕ್ಕೆ ಬೆಟ್ಟದ ಮಗ್ಗುಲಿನಲ್ಲಿ ಸಾಗಿದ್ದ ಹಾದಿ ಹಿಡಿದು ಸಾವಧಾನದಲ್ಲಿ ಗುಂಜಿಯ ಕಡೆಗೆ ಹೊರಟೆವು.

ಮಿಕ್ಕೆಲ್ಲಾ ಯಾತ್ರಿಗಳ ನಡಿಗೆಯ ವೇಗದಲ್ಲಿ ಇಲ್ಲದಿದ್ದರೂ ಸರಿಯಾಗಿ ನನ್ನನ್ನು ಗುಂಜಿಗೆ ತಲುಪಿಸುವ ವಿಶ್ವಾಸ ಹೊಂದಿದ್ದ ತುಲಾರಾಮಸಿಂಗ್ ಬಹಳ ಹುಮ್ಮಸ್ಸಿನಲ್ಲಿದ್ದುದು ಮಾತಿನ ವರಸೆಯಲ್ಲಿ ವ್ಯಕ್ತವಾಗಿತ್ತು. ತನ್ನದೇ ರೀತಿಯಲ್ಲಿ ವಿಷಯಗಳ ಆಯ್ಕೆಯ ಮೂಲಕ ತನ್ನ ಪ್ರಪಂಚದ ಪರಿಚಯವನ್ನು ಮಾಡಿಕೊಡುತ್ತ ನಡೆದಿದ್ದ. ನಡಿಗೆಯ ಆಯಾಸ ಕಾಣದಿರಲೆಂದು ಆರಂಭವಾದ ಸಂಭಾಷಣೆ ಅರ್ಧ ಗಂಟೆಯೊಳಗೆ ಏಕ ಮುಖವಾಗಿ ತುಲಾರಾಮನ ಭಾಷಣವಾಗಿ ಸಾಗಿತ್ತು. ಆಗಾಗ ನಾನು ಕೇಳುತ್ತಿದ್ದ ಪ್ರಶ್ನೆಗಳಿಂದ ಉತ್ತೇಜಿತನಾಗಿ ತನ್ನ ಜ್ಞಾನ ಭಂಡಾರವನ್ನೇ ಅವನು ತೆರೆದಿದ್ದ.

ಇವನ ಪ್ರೀತಿಯ ಹವ್ಯಾಸ ಜಡಿಬೂಟಿ ವೈದ್ಯ. ಗಿಡಮೂಲಿಕೆಗಳ ಔಷಧ ತಯಾರಿಕೆ. ಈ ಹವ್ಯಾಸದಿಂದಾಗಿ ವನ ಸಂರಕ್ಷಣಾ ವಿಭಾಗದಲ್ಲಿ ರೇಂಜರ್ ಆಗಿ ನೌಕರಿಯನ್ನು ಪಡೆದಿದ್ದ. ನಾಲ್ಕು ವರ್ಷ ಬೆಟ್ಟಗಳಲ್ಲಿ ಅಡ್ಡಾಡಿ ಮೂಲಿಕೆಗಳ ಮಾಹಿತಿಯೊದಗಿಸಿದ್ದ. ಆದರೆ ತಿಂಗಳ ಸಂಬಳ ನಿಯತವಾಗಿ ಸಿಗದ ಕಾರಣ ಮತ್ತು ಹೆಂಡತಿ ಮಕ್ಕಳಿಂದ ಬಹು ದಿನಗಳವರೆಗೆ ದೂರವಿರಬೇಕಿದ್ದ ಕಾರಣ ಈ ಕೆಲಸಕ್ಕೆ ರಾಜೀನಾಮೆಯಿತ್ತು ಮೊದಲಿನಂತೆ ವ್ಯವಸಾಯಕ್ಕೆ ಜೋತು ಬಿದ್ದಿದ್ದ. ಬೇಸಿಗೆಯಲ್ಲಿ ಹೆಚ್ಚುವರಿ ಹಣ ಸಂಪಾದಿಸಲು ಪೋರ್ಟರ್ ಕೆಲಸ ಮಾಡುವ ಇವನು ಸಂಪ್ರದಾಯದಂತೆ ರೋಗಿಗಳಿಗೆ ಪುಕ್ಕಟೆಯಾಗಿ ನಾಟೀ ಔಷಧಿ ಕೊಡುತ್ತಿದ್ದ. ತಿಂಗಳಿಗೆರಡು ಬಾರಿ ಹವೆ ಚೆನ್ನಾಗಿರುವಾಗ ಮೂಲಿಕೆಗಳ ಸಂಗ್ರಹಕ್ಕಾಗಿ ಅಲೆದಾಟ. ನಡೆಸುತ್ತಿದ್ದ ಅಲೆದಾಟದ ಸಮಯದಲ್ಲಿ ಸಾಧು ಸಿದ್ಧರ ಸಂಪರ್ಕದಿಂದ ಹೆಚ್ಚಿನ ಮಾಹಿತಿ ಸಂಗ್ರಹಿಸುತ್ತಿದ್ದ. ಔಷಧದ ಪರಿಚಯದ ಜೊತೆಗೆ ವೈದ್ಯಕೀಯ ಜ್ಞಾನವನ್ನು ಗುಟ್ಟಾಗಿಡುವೆನೆನ್ನುವುದು ಇವನ ಶಪಥ. ಇಂತಹವರು ಅದೆಷ್ಟು ಮಂದಿ ಅಜ್ಞಾತರಾಗಿಯೇ ಜನಸೇವೆ ಮಾಡುತ್ತಿರುವರೋ! ಪರ್ವತೀಯ ಪ್ರದೇಶಗಳಲ್ಲಿ ವೈದ್ಯಕೀಯ ಸವಲತ್ತಿನ ಕೊರತೆ ಮತ್ತು ರಸ್ತೆ ಸೌಲಭ್ಯದ ಕೊರತೆಯಿಂದಾಗಿ ಸಕಾಲದಲ್ಲಿ ಆಸ್ಪತ್ರೆಗೆ ಕರೆದೊಯ್ಯಲಾಗದಂತಹ ಪರಿಸ್ಥಿತಿಯಿಂದಾಗಿ ಇಂದಿಗೂ ಹಳ್ಳಿ ಜನರು ನಾಟೀ ವೈದ್ಯರ ಮೊರೆ ಹೋಗುವುದೇ ಹೆಚ್ಚು. ಆಗಸ್ಟ್, ಸೆಪ್ಟೆಂಬರ್ ತಿಂಗಳಲ್ಲಿ ಬಂದಿದ್ದರೆ ನಿನಗಿನ್ನೂ

ಅನೇಕ ತರಹದ ಹಣ್ಣು ಹೂಗಳನ್ನು ತೋರಿಸಬಹುದಿತ್ತು. ಈಗ ದಾರಿಯಲ್ಲಿ ಸಿಗುವುದನ್ನೇ ಕಿತ್ತು ಕೊಡುತ್ತೇನೆ.' ಎಂದು ಐದಾರು ವಿಧದ ಹಣ್ಣುಗಳನ್ನು ( ಮೊದಲ ಬಾರಿಗೆ ನೋಡಿದ್ದು) ನೀಡಿದ. ಆರು ದಿನಗಳ ಸಹಯಾತ್ರೆಯಲ್ಲಿ ಕಡಿದಾದ ಏರು ಮಾರ್ಗಗಳಲ್ಲಿ ತುಲಾರಾಮ್‌ಸಿಂಗ್‌ನ ಕಡ್ಡಿ ಎಲೆ ಬೇರುಗಳ ಪಥ್ಯ, ದಣಿವನ್ನು ನಿವಾರಿಸಲು, ಬಾಯಾರಿಕೆಯನ್ನು ಶಮನ ಮಾಡಲು ನಮಗೂ ದೊರಕಿತ್ತು. ಜಾನಪದ ಗಾಯಕ, ವಾದ್ಯ ಪ್ರವೀಣ, ನೃತ್ಯ ಪಟು, ಆಶುಕವಿ, ನಾಟೀ ವೈದ್ಯ, ಪಶುವೈದ್ಯ , ಬಹುಭಾಷಾ ಕೋವಿದ, ವ್ಯವಸಾಯ ತಜ್ಞರೂ ಕ್ರೀಡಾಪಟು, ಶಾಲಾ ವಿದ್ಯಾರ್ಥಿ ಪ್ರತಿಯೊಬ್ಬರು ಮೇಲ್ನೋಟಕ್ಕೆ ಏನೂ ಅರಿಯದ, ಎಲ್ಲಕ್ಕೂ ಆಗಲಿ ಎಂದು ತಲೆಯಾಡಿಸುವ ಪೋರ್ಟರ್ ಬಡ ಹಳ್ಳಿಗನಂತೆಯೇ, ಮಾಸಿದ ಬಣ್ಣದ ಉಡುಪು, ಹಳೇ ಬೂಟು ಅಥವಾ ಚಪ್ಪಲಿ, ಅಲ್ಲಲ್ಲಿ ತೂತು ಕಂಡ ಸ್ವೆಟರ್, ಒಣಹುಲ್ಲಿನಂತಾದ ಕೂದಲು, ಭಾರ ಹೊತ್ತು ಬೆಟ್ಟ ಏರುವ ಕಾರ್ಯದಿಂದಾಗಿ ಬಾಗಿದ ಬೆನ್ನು ಬಂಕರಗಾಲು, ಒರಟು ಕೈ, ಇವರನ್ನು ಕೇವಲ ಪೋರ್ಟರ್‌ಗಳಾಗಿ ಯಾ ಪೋನೀವಾಲಾಗಳಾಗಿ ಕಂಡು ವರ್ತಿಸಿದರೆ ಅವರೂ ಮಾತಿಲ್ಲದೇ ಕೆಲಸ ಮುಗಿಸಿ ಹಣ ಜೇಬಿಗಿಳಿಸಿ ನಡೆಯುತ್ತಾರೆ. ಬದಲಿಗೆ, ಅವರು ನಮ್ಮಂತೆಯೇ ಸಂಸಾರಿಗಳು, ಜೀವನೋಪಾಯಕ್ಕೆ ಈ ವೃತ್ತಿಯನ್ನು ಮಾಡುವರೆಂದು ತಿಳಿದು ಸರಿಸಮಾನರಂತೆ ಕಂಡು ಮಾತಿಗೆಳೆದರೆ ಮನಬಿಚ್ಚಿ ಮಾತನಾಡುತ್ತಾರೆ. ದಿನನಿತ್ಯದ ಬವಣೆಯೊಂದಿಗೇ ತಮ್ಮ ಜನರ, ಊರಿನ, ಭಾಷೆಯ ಅಂದ ಚಂದಗಳನ್ನು ವಿವರಿಸುತ್ತಾರೆ ತೋರಿಸುತ್ತಾರೆ. ತಮ್ಮ ನಾಡಿನ ಸಂಸ್ಕೃತಿಯ ಹಲವು ಮುಖಗಳನ್ನು ಪರಿಚಯಿಸುತ್ತಾರೆ. ನಮ್ಮಲ್ಲಿ ಅವರೊಳಗಿನ ವ್ಯಕ್ತಿತ್ವವನ್ನು ತಟ್ಟುವ ಮನವಿರಬೇಕಷ್ಟೆ.

ಕಾಲಾಪಾನಿ ಶಿಬಿರವನ್ನು ಬಿಟ್ಟು ಮೂರು ನಾಲ್ಕು ಕಿ. ಮೀ. ದೂರ ಬಂದಾಗ ನಮಗಾಗಿ ಬಿಸಿ ಬಿಸಿ ಚಹ, ಕಾಫೀ ತಯಾರಿಸಿ ಐ. ಟಿ. ಬಿ. ಪಿ. ಸೋದರರು ಚಾಯ್ ಪಾನಿಯ ಆದರಾತೀಥ್ಯ ಮಾಡಿದರು. ಗುಂಜಿ ತಲುಪುವಲ್ಲಿ ಮತ್ತೊಮ್ಮೆ ಇದೇ ಅತಿಥ್ಯ. ಇವರಲ್ಲಿ ಬಿಡುವಿನಲ್ಲಿದ್ದ ಕೆಲ ಯುವಕರು ಗುಂಜಿಯಲ್ಲಿ ನಡೆಯಲಿದ್ದ ಕ್ಯಾಂಪ್‌ಫೈರ್‌ನಲ್ಲಿ ಭಾಗವಹಿಸಲು ನಮ್ಮೊಡನೆ ಗುಂಜಿಗೆ ಹೊರಟರು. ನಡು ಮಧ್ಯಾಹ್ನ ಹನ್ನೆರಡಕ್ಕೆಲ್ಲಾ ಗುಂಜಿ ತಲುಪಿ ಮಾಡಿದ ಮೊದಲ ಕಾರ್ಯ, ಸ್ನಾನ ಮಾಡಿ ಬಟ್ಟೆಗಳನ್ನೊಗೆದುದು. ಇದಕ್ಕೆ ಸೂರ್ಯದೇವನ ಸಹಕಾರವೂ ಲಭಿಸಿ ಮುಂದಿನ ನಾಲ್ಕು ದಿನಗಳಿಗೆ ಸ್ವಚ್ಛ ಬಟ್ಟೆಗಳು ತಯಾರಾದವು.

ಸಂಜೆ ನೇಸರು ಕಂತಲು ಅರ್ಧ ತಾಸಿದ್ದಾಗ ಗುಂಜಿ ಹಳ್ಳಿಯ ಯುವಕನೊಬ್ಬ ಪ್ರೇಕ್ಷಣೀಯ ಸ್ಥಳಗಳನ್ನು ತೋರಿಸುವುದಾಗಿ ಹೇಳಿ ತನ್ನನ್ನು ಗೈಡ್ ಆಗಿ ಗೊತ್ತು ಮಾಡಿಕೊಳ್ಳಲು ಒತ್ತಾಯಿಸಿದ , ಊಟಿ ಕೊಡೈಕೆನಾಲ್, ಮನಾಲಿಯಂತೆ ಅಂಗೈ ಅಗಲದ ಈ ಹಳ್ಳಿಯಲ್ಲಿ ನೋಡಲು ಪ್ರೇಕ್ಷಣೀಯ ಸ್ಥಳಗಳೇನಿರಬಹುದೆನಿಸಿತು. ತೋರಿಸು ನೋಡುವಾ ಎಂದಾಗ ಎದುರಿನ ಬೆಟ್ಟದ ಅಂಚನ್ನು ತೋರಿಸಿ ಸ್ಲೀಪಿಂಗ್ ಬ್ಯೂಟಿ ಎಂದ. ಮೇಲ್ಮುಖವಾಗಿ ಮಲಗಿದ್ದ ತಲೆಯ ಭಾಗವನ್ನು ಹೋಲುವ ಭಾಗವಾಗಿತ್ತದು. ಅದರ ಪಕ್ಕಕ್ಕೇ ಸೋತೇ ರಾಜಾ ( ಮಲಗಿರುವ ರಾಜಾ) ಎಂದ. ಬೆಟ್ಟದ ಬಗಲಿನಲ್ಲಿದ್ದ ಒಂಟಿ ಮರವನ್ನು ತೋರಿಸಿ ಕಲ್ಪವೃಕ್ಷ. ಇದರ ಕೆಳಗೆ ನಿಂತು ಪ್ರಾರ್ಥಿಸಿದರೆ ಬಯಸಿದ್ದು ಸಿಗುವುದು. ಎಂದ. ಹಳ್ಳಿಗೆ ಬಂದರೆ ರತ್ನಗಂಬಳಿ ಮಾಡುವ ನೇಯ್ಗೆ ಮನೆ ತೋರಿಸುವೆನೆಂದ. ಕೊಳ್ಳಲು

ಸಿಗುವುದು' ಎಂದ. ಹಳ್ಳಿಯ ಪಕ್ಕದ ಮೈದಾನದಲ್ಲಿ ಗುಂಜಿ ಮಾರ್ಕೆಟ್ ನೋಡಬಹುದೆಂದ, ಊಟದ ನಂತರ ನಾವಾಗಲೇ ಗುಂಜಿ ಮಾರ್ಕೆಟನ್ನು ಅಲ್ಲಿದ್ದ ಎರಡೇ ಎರಡು ಟೆಂಟ್ ಶಾಪ್‌ಗಳನ್ನು ಹೊಕ್ಕು ಬಂದಿದ್ದೆವು. `ಉದರ ನಿಮಿತ್ತಂ ಬಹುಕೃತ ವೇಷಂ'ಹೇಗಾದರೂ ಎಂತಾದರೂ ಎರಡು ಕಾಸು ಮಾಡುವಾಸೆ ಯುವಕನಿಗೆ, ಕಂಬಳಿ ಮಾರಾಟವಾಗಿದ್ದರೆ ಇವನಿಗೇನಾದರೂ ಕಮಿಷನ್ ಸಿಗುವುದಿತ್ತೇನೋ! ಪೂರ್ಣ ಕತ್ತಲಾಗಲು ಕೆಲವೇ ನಿಮಿಷಗಳಿದ್ದಾಗ ಕೆಲವರು ಸಾಹಸಿಗರು ಅವನೊಡನೆ ಬೆಟ್ಟ ಸುತ್ತಿ ಬರಲು ನಡೆದಿದ್ದರು.

ಅರ್ಧಗಂಟೆಯಲ್ಲೇ ಸೂರ್ಯ ಮುಳುಗಿ ಕತ್ತಲಾವರಿಸಿತು. ಸಾಲದುದಕ್ಕೆ ಮಳೆ ಹುಯ್ಯಲಾರಂಭಿಸಿತು. ನಾವು ಸೋಮಾರಿಗಳೆನಿಸಿಕೊಂಡವರು ಬೆಚ್ಚಗೆ ಕಂಬಳಿಹೊದ್ದು ಗಾಮಡಿ ರಾಮಾಯಣ ( ಹಳ್ಳಿಗನೊಬ್ಬ ತನ್ನದೇ ರೀತಿಯಲ್ಲಿ ತನ್ನದೇ ತರ್ಕದಂತೆ ಕಥೆಯನ್ನು ಮಾರ್ಪಡಿಸಿ ಹೇಳುವ ರಾಮಾಯಣ) ಕೇಳಿದೆವು. ಸಾಹಸಿಗರು ರಾತ್ರಿ ಎಂಟು ಗಂಟೆಯವರೆಗೆ ಮಳೆಯಲ್ಲಿ ನೆನೆಯುತ್ತಾ ಕತ್ತಲಲ್ಲಿ ತಡವರಿಸುತ್ತ ಕಾಣದ ಹಳ್ಳಿಯ ಕೊಚ್ಚೆಯನ್ನು ತುಳಿಯುತ್ತಾ ಅಡ್ಡಾಡಿ ಬಂದರು. ನಮ್ಮನ್ನು ನೋಡಿ ನೀವು ಸೋಮಾರಿಗಳಲ್ಲ ಬುದ್ಧಿವಂತರು. ಎಂದು ನಕ್ಕರು. ಚಳಿಯಲ್ಲಿ ನಡುಗುತ್ತಾ ಬಂದವರ ಸ್ಥಿತಿನೋಡಿ ಮರುಕಪಟ್ಟರೂ ಇವರಿಂದಾಗಿ ಕ್ಯಾಂಪ್‌ಫೈರ್ ಶುರು ಮಾಡಲು ಐ. ಟಿ. ಬಿ. ಪಿ. ಯವರೂ ಕಾಯುವಂತಾಯಿತೆಂದು ಬೇಸರವೂ ಆಗಿತ್ತು. ಮಿಲಿಟರಿ ಕ್ಯಾಂಪ್‌ನಿಂದ ತಾಳ ಡೋಲುಗಳ ತುಡಿತ, ಯುವಕರ ಹಾಡಿನ ಕರೆ ಕೇಳಿ ಬರುತ್ತಿತ್ತು. ನೆನೆದು ಬಂದವರು ಬಟ್ಟೆ ಬದಲಿಸಿ ಎಲ್ಲರೂ ಊಟಮಾಡಿ ಮಿಲಿಟರಿ ಕ್ಯಾಂಪ್‌ಗೆ ಹೊರಟಾಗ ಒಂಭತ್ತು ಹೊಡೆದಿತ್ತು. ಮಳೆಯ ಕಾರಣ ಅಂಗಳದಲ್ಲಿ ಕೂರಲಾಗದೆ ಎಲ್ಲರೂ ಜಗಲಿಯೊಳಗೇ ಒತ್ತೊಟ್ಟಿಗೆ ಕುಳಿತು ರಾತ್ರಿಯ ಕಲಾಪವನ್ನು ಆರಂಭಿಸಿದೆವು.

ತಮ್ಮ ಮನೆ, ಸಂಸಾರ, ಊರು ಬಿಟ್ಟು ಬಂದು ಗಡಿನಾಡಿನ ರಕ್ಷಣೆಗಾಗಿ ಕಠಿಣ ಪರಿಸರದಲ್ಲಿ, ನಿರ್ಜನ ಬೆಟ್ಟಗಾಡಿನಲ್ಲಿ ತಿಂಗಳುಗಟ್ಟಲೆ ಕಷ್ಟತಮ ದಿನಗಳನ್ನು ಕಳೆಯುವ ಯೋಧನಿಗೆ ಈ ರೀತಿಯ ಅಪರೂಪದ ಸಂಜೆ ರಾತ್ರಿಗಳು ಹಬ್ಬದಂತೆ. ಬಿಡುವಿನ ವೇಳೆ ದೊರೆತಾಗಲೆಲ್ಲಾ ತಮ್ಮಲ್ಲಿರುವ ಕಲೆಗಾರಿಕೆಯನ್ನು ಹಾಡು ಕುಣಿತ, ಚುಟುಕು ಪದ್ಯ, ವಾದ್ಯ ವಾದನ, ಕಥೆ ಹೇಳುವುದು ಇತ್ಯಾದಿ ಅಭ್ಯಾಸ ಮಾಡುತ್ತಿರುತ್ತಾರೆ. ಅದನ್ನು ಪ್ರದರ್ಶಿಸಲು ಅವಕಾಶ ಕಲ್ಪಿಸಿಕೊಳ್ಳುತ್ತಾರೆ. ಹಳ್ಳಿ ಊರುಗಳ ಬದುಕಿನ ಬಣ್ಣವನ್ನು ಆ ರಾತ್ರಿಗೆ ಕೊಡುತ್ತಾರೆ. ಹೊರಗಿನವರು ಬಂದಾಗ `ನಮ್ಮ ರಾಜ್ಯಕ್ಕೆ ಬಂದಿರುವ ಅತಿಥಿಗಳು ನೀವು. ' ಎಂದು ಆದರದಿಂದ ಸತ್ಕರಿಸಿ ಮನರಂಜಿಸುತ್ತಾರೆ. ನಾಗರಿಕರ ಬದುಕನ್ನು ಸುಭದ್ರಮಾಡಲು ಪ್ರಾಣವನ್ನು ಪಣವಾಗಿಡುವ ಈ ಗಡಿನಾಡಯೋಧರ ತ್ಯಾಗದ ಅರಿವಾದದು ಈ ಶಿಬಿರಗಳಲ್ಲಿ ಅವರೊಡನೆ ಕಳೆದ ಕ್ಷಣಗಳಲ್ಲಿ, ಜೊತೆಯಾಗಿ ಹೆಜ್ಜೆ ಹಾಕಿ ಗಡಿಯನ್ನು ತಲುಪಿದಾಗ, ಅವರು ನಮ್ಮಂತೆ ಎಲ್ಲೆಂದರಲ್ಲಿಗೆ ಯಾವಾಗ ಬೇಕೆಂದರಾಗ ಹೋಗಲಾರರೆಂಬುದನ್ನು ಅರಿತಾಗ, ಇವರದ್ದು ನಾಗರಿಕರು ಅನುಗಾಲವೂ ಹೊರಬೇಕಾದ ನೈತಿಕ ಋಣ.

ರಾತ್ರಿ ಹನ್ನೊಂದು ಗಂಟೆವರೆಗೆ ಒಬ್ಬೊಬ್ಬರೆ ಹಂಗಾಮೀ ವೇದಿಕೆಗೆ ಬಂದು ಆಡಿಹಾಡಿ ಕುಣಿದು ಹೋದಮೇಲೆ ಎಲ್ಲರೂ ಭಾಗವಹಿಸಲು ಅನುವಾಗುವಂತ ಅಂತಾಕ್ಷರೀ ಆರಂಭವಾದದ್ದು ರಾತ್ರಿ ಹನ್ನೆರಡವರೆಗೆ ನಡೆಯಿತು. ಬೆಳಗಿನ ಪ್ರಯಾಣಕ್ಕೆ ಅಡ್ಡಿಯಾದೀತೆಂದು ಒಲ್ಲದ ಮನಸ್ಸಿನಿಂದಲೇ

ರಾತ್ರಿಕೊಟಿಕ್ಕೆ ಮುಕ್ತಾಯ ಹಾಡಿದೆವು. ಸೈನಿಕ ಮಿತ್ರರಿಗೆ ವಿದಾಯ ಹೇಳಿದೆವು. ಇಲ್ಲಿಂದ ಮುಂದಕ್ಕೆ ನಮ್ಮೊಡನೆ ಐ. ಟಿ. ಬಿ. ಪಿ. ಯವರಲ್ಲದೆ ಕೆ. ಎಂ. ವಿ. ಎನ್ ರವರು ಬರುವವರಿದ್ದರು. ಈ ರಾತ್ರಿ ಮಾನಸ ತಡಿಯಲ್ಲಿ ಕಳೆದ ಮೊದಲ ರಾತ್ರಿಯಷ್ಟೇ ಚಿರನೂತನ.

ಇಂದು ಬೆಳಿಗ್ಗೆ ಗುಂಜಿಬಿಟ್ಟು ಹೊರಟಾಗ ಎಂದಿನಂತೆಯೇ ಇದ್ದರೂ ಛಿಯಾಲೇಖ್ ಪಾಸ್ ಹತ್ತುತ್ತಿದ್ದಂತೆ ಮನಸ್ಸು ರಚ್ಚೆ ಹಿಡಿದ ಮಗುವಿನಂತೆ ರೋಸಿತ್ತು. ತುಲಾರಾಮನ ಮಾತುಕತೆಯೂ ಅರ್ಥವಾಗದ ಬಡಬಡಿಕೆಯಾಗಿತ್ತು. ಕಾಲುಗಳು ಯಾಂತ್ರಿಕವಾಗಿ ಹೆಜ್ಜೆಯಿಟ್ಟಿದ್ದರೂ ಮನಸ್ಸು ಮತ್ತೆ ಮತ್ತೆ ಮೊನ್ನೆ ನೋಡಿದ ಓಂ ಪರ್ವತದ ಮೂಲಕ ಕೈಲಾಸಕ್ಕೆ ಓಡಿತ್ತು.

ಅಂದು ಮಂಜಿನಿಂದಾಗಿ ಬಿಳಿ ಕೋಣೆಯೊಳಗೆ ಹಸಿರು ಹಾಸಿನ ಮೇಲೆ ನಡೆದಂತಿದ್ದ ಛಿಯಾಲೇಖ್ ಪಾಸ್ ಇಂದು ಕಾಳಿದಾಸನ ಕಿನ್ನರಲೋಕವಾಗಿತ್ತು. ದೂರದೂರದವರೆಗೆ ಏರಿ ಇಳಿದಿದ್ದ ಪರ್ವತ ಸಾಲುಗಳು ಅವುಗಳ ನಿರಿಗೆಗಳು, ಒಡಲಲ್ಲಿ ಆಟಿಕೆಗಳಂತೆ ಹುದುಗಿದ್ದ ಮನೆಗಳು, ಬೆಳ್ಳಿ ದಾರದಂತೆ ಕಾಣುತ್ತಿದ್ದ ದಾರಿಗಳು. ಇವೆಲ್ಲವೂ ಕ್ಷಣಹೊತ್ತು ರಂಜಿಸಿದರೂ ಮನಸ್ಸನ್ನು ಸೆರೆಹಿಡಿಯಲಾಗಿದ್ದವು. ಛಿಯಾಲೇಖ್ ಪಾಸ್‌ನ ಟೀ ಗುಡಿಸಲಿನ ಮುಂದೆ ಜಗುಲಿಯಲ್ಲಿ ದಣಿವಾರಿಸಿಕೊಳ್ಳಲು ೫. ೧೦ ನಿಮಿಷ ಕುಳಿತೆ . ಅಲ್ಲೇ ಟೀ ಹೀರುತ್ತಾ ಕುಳಿತಿದ್ದ ಐ. ಟಿ. ಬಿ. ಪಿ. ವೈದ್ಯರೊಂದಿಗೆ ಮಾತನಾಡುತ್ತಾ ಮತ್ತೆ ಕೈಲಾಸ ಮಾನಸದ ವರ್ಣನೆಗಿಳಿದಿದ್ದೆ. ಕೈಲಾಸದ ಮಾತಿನ ಶಾಖಕ್ಕೆ ಮನದಲ್ಲಿ ಮುಸುಕಿದ್ದ ಬೇಸರದ ಮಂಜು ಕರಗಿ ಹೋಯಿತು.

ಹುರುಪಿನಲ್ಲಿ ಇಳಿಯಲು ಮೊದಲಿಟ್ಟವಳು ಎಷ್ಟು ಹೊತ್ತು ಇಳಿದಿದ್ದೇನೋ ತಿಳಿಯದು. ಪಕ್ಕದಿಂದ ಕೈಯೊಂದು ನನ್ನನ್ನು ಬದಿಗೆಳೆದಾಗಲೇ ಕೇಳಿಸಿದ್ದು ಬೆಹನ್‌ಜಿ ಎಲ್ಲಿದ್ದೀರಿ? ಎಷ್ಟು ಸಲ ಕೂಗಿದ್ದು? ಕೇಳಿಸಲಿಲ್ಲವೇ ? ಕುದುರೆಗೆ ದಾರಿಬಿಡದೆ ಹಾಗೆ ಮಧ್ಯೆ ನಡೆಬಾರದು.' ತುಲಾರಾಮನ ಬಿರುನುಡಿಗಳು. ಆಗಲೇ ನಾನೆಂತಹ ಮಾನಸಿಕ ಸ್ಥಿತಿಯಲ್ಲಿದ್ದೇನೆಂದು ಅರಿವಾದದ್ದು. ಆಕೋ ಮತ್ತೆ ನಗುತ್ತಿದ್ದೀರಿ? ಏನು ಕಂಡಿರಿ?' ಅವನ ಕಳಕಳಿಯ ಪ್ರಶ್ನೆ. ಕೈಲಾಸ ಮಾನಸದ ಚಿತ್ರಗಳು ಮನಪಟಲದ ಮೇಲೆ ಮತ್ತೆ ಮತ್ತೆ ಮೂಡಿ ಅದರೊಂದಿಗೇ ಅಲ್ಲಿನ ಅನುಭವಗಳು ನೆನಪಾದಾಗ, ತಂತಾನೇ ನಗು ಬರುತ್ತಿತ್ತು ಹಿಂದೆಯೇ ನಿಟ್ಟುಸಿರೂ ಸಹ. ಅಂತಹ ನಿರ್ಮಲ ಪರಿಸರದಿಂದ, ನಿರ್ಮಲ ಪರಿಸರದಿಂದ, ನಿರ್ಮಲ ಹೃದಯಗಳ ಒಡನಾಟದಿಂದ ದೂರ ಸರಿದು ಮೊದಲಿನ ಜಂಜಾಟದ ಬಾಳಿಗೆ ಬರಬೇಕಾದ ದುಗುಡದ ನಿಟ್ಟುಸಿರು ನಗುವಿನ ಹಿಂದೆಯೇ ಬರುತ್ತಿತ್ತು. ಮಾನಸ ಕೈಲಾಸದ ಪ್ರಕೃತಿಯನ್ನು ನಿರ್ಮಿಸಿದ ಕಾಣದ ಕೈಯ ಕೈವಾಡವನ್ನು ಕಂಡ ಮನಸ್ಸು ಸಾವಿರ ಚಿತ್ರಗಳಾಗಿ ಒಡೆದಿತ್ತು. ಕರಣಗಳೆಲ್ಲ ಚದುರಿಹೋಗಿದ್ದವು. ಇವೆಲ್ಲವನ್ನೂ ಒಟ್ಟುಗೂಡಿಸಿಕೊಡಲು ಯಾರ ಮೊರೆ ಹೋಗಲಿ?

ಹಿಡಿದು ತಾ ಓ ಮುಗಿಲೆ ಎಲ್ಲಿಹುದೊ ಹುಡುಕಿ
ಎನ್ನ ಮನವದನು ಮರೆತು ಬಂದಿಹೆ ನಾನು
ಕೈಲಾಸ ಶ್ರೇಣಿಯ ಓಣಿಗಳಲಿ ಮಲ್ಲೇಶನಂಗಳದಿ.
ಪುಂಡಮನ ಬಯಸಿ ನಿಲಬಹುದಾದ ತಾಣಗಳ
ಕುರುಹಗಳನಿನಿತು ಕೊಡುವೆನು ನಿನಗೆ

ರಮಿಸಿ ತಾರಯ್ಯ ಇತ್ತಕಡೆಗದನು ಓಡಿದು
ಬೌದ್ಧ ದೇಗುಲದ ಬಾಗಿಲ ಬಳಿಯಿರಬಹುದು
ಒದ್ದೆ ಬಿಸಿಲಲಿ ಮೂಡಿಹ ಬಿಲ್ಲನೇರುವ ಸನ್ನಾಹದಿ
ಭಿಕ್ಷುವಿನ ಮಂತ್ರದಲ್ಲಿ ಅವರ ಕಿವಿ ಸಿಲ್ಕಿಹುದೇ?
ಇಲ್ಲವಾದರೆ ಮಾನಸ ತಡಿಯಲಿ ಅಡ್ಡಾಡುತಿಹುದೇ?
ನೀರಿನಲಿ ತೇಲುವ ಮೋಡಗಳ ಹಿಂಬಾಲಿಸಿ
ಬಿಂಕದಲಿ ಈಜಿರುವ ಅಂಚೆಗಳ ಬೆನ್ನೇರಿ.
ಓ ಮೇಘ, ಅಲ್ಲಿಲ್ಲದಿರೆ ಮುಂದೆ ಸಾಗುನೀ
ಕೈಲಾಸದಡಿಯ ಊರ ಕಡೆಗೆ, ಊರ ಬಾಗಿಲಿಗೇ
ಬಾಗಿಲಾ ತೋರಣದಿ ತೂಗುತಿಹುದಗೋ!
ತುಂಟಿಮನವದು ಹಾರಿಹೋಗಲಿಹುದು
ಈ ಕಡೆಯ ಕೈಲಾಸವೋ, ಆ ಮಾಂಧತವೋ
ಯಾವುದದ ಕಂದ ಕಾಣುವುದೋ ಅಲ್ಲಿಗೆ.
ಕಾಣದಾದರ ನಿನಗಲ್ಲಿಯು ಎನ್ನ ಮನವದು
ಅಡಗಿಹುದು ಕೈಲಾಸ ಶಿಖರದಿ ಮಲ್ಲೇಶ ನೋಳು
ಮೇಲೇರುವವ ನೀನೋರ್ವನೆ ಅವನ ಶಿರದೆಡೆಗೆ
ಮೋಡಣ್ಣ ಮಲೆಯ ಮೇಲೇರಿ ತಾರಣ್ಣ
ನನ್ನ ಮನವದಕೆ ಮನೆವಾಳ್ತೀಯಾ ಗೀಳಿಲ್ಲ
ಅದನುಳಿದು ಹೇಗೆ ಮೊಗ ತೋರಲೀ ಪತಿರಾಯಗೆ?

ನಾನು ಮತ್ತೆ ಮೊದಲಿನಂತಾಗಲು ಒಂದು ವಾರವೇ ಬೇಕಾಯಿತು. ಜನರೊಂದಿಗೆ ಓಡಾಟ ಮಾತುಕತೆಯಲ್ಲಿ, ಅನಿವಾರ್ಯ ದಿನಚರಿಯಲ್ಲಿ ಸಮಸ್ಥಿತಿಗೆ ಬಂದರೂ ಒಂದು ಗಂಟೆಯ ಏಕಾಂತವಾದರೆ ಸಾಕು, ಮನಸ್ಸು ಮತ್ತೆ ಕಾಲಸದಲ್ಲಿದ್ದ ಸ್ಥಿತಿಗೇ ಮರಳಿ ಬಿಡುತ್ತಿತ್ತು.

ಬುಧಿ ಶಿಬಿರ ತಲುಪುವವರೆಗೂ ಮಾತನಾಡಿಸುತ್ತಲೇ ನಡೆದಿದ್ದ ತುಲಾರಾಮನಿಗೆ ನನ್ನ ನಡವಳಿಕೆ ವಿಚಿತ್ರವೆನಿಸಿರಬೇಕು. ನಾನು ನಿಂತಾಗಲೆಲ್ಲಾ ನನ್ನ ಮುಖವನ್ನೇ ದಿಟ್ಟಿಸಿ ಎಲ್ಲ ಸರಿ ತಾನೇ ಎಂದು, ಉತ್ತರಕ್ಕೂ ಕಾಯದೆ ಕೈ ಹಿಡಿದೆಳೆದು ನಡೆಯ ಹಚ್ಚುತ್ತಿದ್ದ. ಅವನ ಅನುಮಾನ ನೋಡಿ ನನ್ನ ನಗ ಇನ್ನೂ ಹೆಚ್ಚುತ್ತಿತ್ತು. ಬುಧಿಹಳ್ಳಿ ಹತ್ತಿರವಾದುದರ ಸಂಕೇತವೆಂಬಂತೆ ಬಣ್ಣಬಣ್ಣದ ಬೆಟ್ಟತಾವರೆಯ ಹೂಗಳು ಸ್ವಾಗತಿಸಿದ್ದವು. ಮತ್ತದೇ ಹೂ ಮುಡಿವ ಆಸೆ. ಗಿಡಗಳ ಬಳಿಯೇ ನಿಂತೆ ಸಂತೆಯಲ್ಲಿ ಬತ್ತಾಸಿನ ರಾಶಿಯ ಮುಂದೆ ನಿಲ್ಲುವ ಮಗುವಿನಂತೆ, ಈಗ ಹೂ ಕೀಳಬಾರದು. ಸೂರ್ಯ ಮುಳುಗುವ ಹೊತ್ತು. ಬೆಳಗ್ಗೆ ತರುವೆ. ಈಗ ನಡಿ. ಎಂದ ತುಲಾರಾಮ, ಮುಂದಿನ ಐದೂ ದಿನಗಳಲ್ಲಿ ಹೂವಿನೊಂದಿಗೆ ಬೆಳಗಿನ ಶುಭಕೋರಿದ್ದ.

ಬೈದರೂ ನಗುವ ಈ ಹುಚ್ಚಿಯನ್ನು ತಂದು ಬಿಟ್ಟಿದ್ದೇನೆ. ನೀನು ಸಂಭಾಳಿಸು. ಎಂದು

ಹೇಳಿ ಗೆಳತಿ ಮಂದಾಕಿನಿಗೆ ನನ್ನನ್ನು ಒಪ್ಪಿಸಿದ ತುಲಾರಾಮ ನೆಮ್ಮದಿಯ ಉಸಿರೆಳೆದಿದ್ದ. ಶಿಬಿರದಲ್ಲಿ ನನ್ನನ್ನು ಬಿಟ್ಟವನೇ ಟೆಕ್ಷನ್ ನೀಗಿಕೊಳ್ಳಲು ಹಸಿರುವ ಬಾಟಲಿಯ ಅಂಗಡಿಗೆ ಓಡಿದ ತುಲಾರಾಮನ ಮುಖ ನೋಡಿದರೇ ನಗು ಉಕ್ಕಿ ಬರುತ್ತಿತ್ತು.

ಗೆಳತಿಯ ಒತ್ತಾಯಕ್ಕೆ ಮಣಿದು ಆ ಕ್ಷಣವೇ ಸ್ನಾನ ಮಾಡಲೆಂದು ಕೈ ಚೀಲದಲ್ಲಿ ಸಾಬೂನಿಗೆ ತಡಕಾಡಿದಾಗ ಸಿಕ್ಕಿದ್ದು ಯಾರೋ ಕೊಟ್ಟ ಚೀಸ್ ಪ್ಯಾಕೆಟ್, ಜೊತೆಗೇ ಹೊರಬಿದ್ದಿತು ನನ್ನದಲ್ಲದ ಬಾಚಣಿಕೆ ಮತ್ತು ಕುಲಾವಿ. ಎದುರಿಗೇ ನನ್ನ ಕಾಲುಚೀಲಗಳು ಗೆಳತಿಯೊಬ್ಬರ ಬೂಟಿನಿಂದ ಹೊರಗಿಣುಕಿ ನನ್ನನ್ನೇ ನೋಡಿದ್ದವು. ಮತ್ತೆ ನಗುವಿನಲೆ ಹೊಮ್ಮಿತ್ತು.

ಯಾರದೋ ಶ್ಯಾಂಪೂ ಇನ್ಯಾರದೋ ತಲೆಗೆ, ಅವರ ಕುಟ್ಟವಲಕ್ಕಿ ಇವರ ಹೊಟ್ಟೆಗೆ, ಒಬ್ಬರ ಸಾಸಿವೆ ಎಣ್ಣೆ ಮತ್ತೊಬ್ಬರು ಇಬ್ಬರ ಮೊಣಕಾಲಿಗೆ, ಇವರ ಅಸ್ಪ್ರೋ ಅವರ ತಲೆನೋವಿಗೆ, ಇವರ ಮಫ್ಲರ್ ಅವರ ಕುತ್ತಿಗೆಯ ಸುತ್ತ. ಎಲ್ಲರದೂ ಎಲ್ಲರಿಗೂ ವಸುಧೈವ ಕುಟುಂಬಕಂ ಇದಕ್ಕೆ ಬೇಕಾಗಿದ್ದುದೊಂದೇ. ಮನದ ಬಾಗಿಲನ್ನು ತೆರೆದಿಡುವುದು. ಆರಾಮದಲ್ಲಿ ಹೊರಗಿನ ಹೊಸ ಹವೆ ವಿಚಾರದ ಬೆಳಕು, ಸಂತೋಷದ ಮಂದಹಾಸ, ಸ್ನೇಹ ಸೌಹಾರ್ದದ ಒಳಹೊರಗಿನ ಓಡಾಟ. ಮೊದ ಮೊದಲು ಸಹ ಯಾತ್ರಿಗಳು ಮಾತ್ರವೇ ಈ ಮುಕ್ತಮನ ದ್ವಾರದಲ್ಲಿ ಓಡಾಡುತ್ತಿದ್ದು ಕ್ರಮೇಣ ಪೋರ್ಟರ್, ಘೋನಿವಾಲಾ, ಪ್ರಾದೇಶಿಕ ವಿಕಾಸ ದಳದ ಸ್ಕೌಟ್‌ಗಳು, ಕಡೆಗೆ ಭಾಷೆಯರಿಯದ ಟಿಬೆಟಿಯರು, ಚೀನಿಯ ಕೂಡ ಒಳಬರುವಷ್ಟು ವಿಶಾಲವಾಗಿ ತೆರೆದಿತ್ತು ಮನ ನೀ ತೆರೆದುಕೋ ಶಿವದ ಆಗಮನಕೆ, ಮಲ್ಲೇಶನು ನೆಲೆ ನಿಲ್ಲಲಿಕೆ. ಎಷ್ಟು ಸುಲಭ. ಸ್ನಾನಮಾಡಿ ಬಂದವಳ ಮೊಗವನ್ನು ನೋಡಿ, `ಒಂದು ತಿಂಗಳ ಹಿಂದೆ ನಿನ್ನನ್ನು ಕಳಿಸಿಕೊಟ್ಟವರು ಇಂದು ನಿನ್ನನ್ನು ನೋಡಿದರೆ ಖಂಡಿತ ಬೇರೊಂದು ಹುಡುಗಿಯನ್ನು ಹುಡುಕುವರು, ಮರು ಮದುವೆಯಾಗಲು.' ಎಂದುಸುರಿ ಮುಖ ಪೂರ್ತಿ ಕಾಣುವಷ್ಟು ದೊಡ್ಡದಿದ್ದ ಕನ್ನಡಿಯನ್ನು ಕೈಗಿತ್ತರು ಮಂದಾಕಿನಿ. ಕನ್ನಡಿಯಲ್ಲಿದ್ದ ಮೊಗವನ್ನು ನೋಡಿ ನಾನೇ ಬೆದರಿದ್ದೆ. ಮುಖವನ್ನು ಮೀರಿಸಿತ್ತು ನಮ್ಮ ವೇಷ.

ಎಣ್ಣೆ ನೀರು ಕಾಣದೆ ಒಣಗಿದ ಹುಲ್ಲಾಗಿದ್ದ ಕೂದಲು, ಶೀತಗಾಳಿ ಒಣಹವೆಯಿಂದಾಗಿ ಒಡೆದು ಸೂರ್ಯನ ಕಿರಣಗಳಿಂದ ಕೆಂಪಗೆ ಬೆಂದಂತಾಗಿ ಸುಲಿದ ಚರ್ಮ, ಅಲ್ಲಲ್ಲಿ ಇನ್ನೂ ಅಂಟಿಕೊಂಡಿದ್ದು ಬೂದಿ ಬಳಿದಂತಾಗಿದ್ದ ಮೂಗು, ಹಣೆ, ಮುಂಗೈಗಳು, ಸೊರಗಿದ ದೇಹದ ಮೇಲೆ ಸುಕ್ಕುಗಟ್ಟಿದ ಚಕ್ಕಳ, ದೊಗಲೆಯಾದ ಉಡುಪು, ಸಾಬೂನಿನ ಒಗೆತ ಕಾಣದೆ ಅಲ್ಲಲ್ಲಿ ಮಾಸಲು ತಿರುಗಿದ್ದ ಜಿಡ್ಡುಕಲೆಗಳ ಮೇಲುಡುಪು, ಹೆಣ್ಣು ಗಂಡೆಂಬ ಭೇದವಿಲ್ಲದೆ ಎಲ್ಲ ಕಾಲುಗಳಲ್ಲೂ ಕಂಡು ಬರುತ್ತಿದ್ದ ಆಕಾರವಿಲ್ಲದ ದಪ್ಪ ಬೂಟುಗಳು, ಕೆಲವೇಳೆ ತಲೆಯ ಮೇಲೆ, ಕೆಲವೇಳೆ ಕತ್ತಿನ ಮೇಲೆ ನೇತಾಡುತ್ತಿದ್ದ ಕುಲಾವಿ, ಬೆನ್ನ ಮೇಲೆ ಹರಡಬೇಕಿದ್ದುದು ನಡುವಿಗೆ ಸುತ್ತಿಕೊಂಡು ಹೆಬ್ಬಾವಿನಂತಾಗಿದ್ದ ದಪ್ಪನೆ ವಿಂಡ್ ಚೀಟರ್, ಅದರ ಮೇಲೆ ಬಿಗಿದಿದ್ದ ಕಪ್ಪನೆ ಪಟ್ಟಿ, ಕರಭೂಷಣವಾಗಿದ್ದ ಉದ್ದನೆ ಕೋಲು, ಬೆಟ್ಟದಿಂದ ಅಡ್ಡಾಡಿ ಅಲ್ಲಾಡುತ್ತಾ ಇಳಿದು ಬರುತ್ತಿದ್ದ ನಮ್ಮನ್ನು ಮನುಷ್ಯರೆನ್ನುವುದಕ್ಕಿಂತಲೂ ಗ್ರಹಾಂತರದ ಜೀವಿಗಳೆನ್ನಬಹುದಿತ್ತು. ಇಂತಹವರೇ ಗಿರಿಜೆಯ ಅರಮನೆಗೆ ಶಿವನ ಬಾರಾತಿಯಾಗಿ ಬಂದಿಳಿದಾಗ ಗಿರಿಜೆಯ ಅವ್ವೆ ಗೆಳತಿಯರು ಹೌಹಾರಿ ಹಿಂದೋಡದೆ ಮತ್ತೇನು ಮಾಡಿದ್ದಾರು?

ಮನೆಗೆ ಹಿಂತಿರುಗುವಾಗ ಏನೀ ನಿನ್ನ ಅವತಾರವೆಂದು ಮನೆಗುವವರೂ ದಂಗು ಬಡಿದು ನಿಂತಾರು. ಇಂದಿಗಂತೂ ಒಬ್ಬರನೊಬ್ಬರು ಅಣಕಿಸುತ್ತ ನಗುವಿನಲೆಯೆಬ್ಬಿಸುವ ಕೋಡಂಗಿಯ ಸ್ಥಿತಿಯಾಗಿತ್ತು.

ಮಿಂದವಳು ಹೊರಬಂದು ಜಗಲಿಯ ಮೇಲೆ ಕುಳಿತಾಗ ಸುತ್ತಲಿನದೆಲ್ಲವೂ ಕೂಡ ಜಳಕಮಾಡಿ ಶುಭ್ರವಾದಂತೆ ಕಂಡಿತು. ಮನವೂ ನಿರ್ಮಲವಾಗಿ ಭಾವನಾರಹಿತವಾಗಿ ಕುಳಿತಿತ್ತು. `ನಿನ್ನ ಯೋಚನೆಗೆ ಸಾವಿರ ದೀನಾರ.' ಎನ್ನುತ್ತ ಪಕ್ಕದಲ್ಲೇ ಕುಳಿತನು ಮನೋಜ್ ಹರಿದಾಸ್. ಕಳೆದ ಇಪ್ಪತ್ತು ದಿನಗಳ ಸಹವಾಸದಿಂದಾದ ಯಾತ್ರಿಗಳಲ್ಲಿನ ಈ ಸಲಿಗೆ ಅಪ್ಯಾಯಮಾನವಾಗಿತ್ತು. ಯಾವುದೇ ರೀತಿಯ ಒತ್ತಾಯ ಸಂಬಂಧನೆಗಳಿಲ್ಲದೆ ಲೌಕಿಕ ಉದ್ದೇಶವಿಲ್ಲದೆ, ಕೃತಿಮವರಿಯದ ದಾಕ್ಷಿಣ್ಯಕ್ಕೊಳಗಾದ, ಸರಳಸ್ನೇಹದ ರೀತಿಯರಿತ ಸಲಿಗೆ. ನಿಜಭಾವನೆಗಳನ್ನು ಅಳುಕಿಲ್ಲದೆ ಹೇಳುವಾಗ ಅವನ್ನು ಮನವಿಟ್ಟು ಕೇಳುವ ಸಮಾಧಾನದ ಸಲಿಗೆಯದು.

`ನೀನು ಹಲವಾರು ದೇಶಗಳನ್ನು ಸುತ್ತಿಬಂದಿದ್ದೀಯೆಂದೆ. ಅಲ್ಲಿಂದ ಭಾರತಕ್ಕೆ ಮರಳುವಾಗ ಹೇಗೆನ್ನಿಸಿತು? ಈ ಸಲದ ವಿದೇಶ ಪ್ರವಾಸ ಹೇಗೆನ್ನಿಸಿತು?' ಮನೋಜನ ಪ್ರಶ್ನೆ ರಸಾಯನ

ಶಾಸ್ತ್ರದಲ್ಲಿ ಡಾಕ್ಟರೇಟ್ ಪದವಿಗಾಗಿ ಪ್ರಬಂದವನ್ನು ಮುಂಬಯಿಯ ವಿಶ್ವವಿದ್ಯಾಲಯಕ್ಕೆ ಕೊಟ್ಟು ಪ್ರವಾಸಕ್ಕೆ ಬಂದಿದ್ದ ಈ ಯುವಕ ಯಾವ ದೃಷ್ಟಿಕೋನದಲ್ಲಿ ಈ ಪ್ರಶ್ನೆಯಿಟ್ಟನೋ ಅರಿಯೆ. ಆದರದು ನನ್ನಲ್ಲಿ ತುಲನಾತ್ಮಕ ಚಿಂತನಗೆಡೆಮಾಡಿತ್ತು.

ಪಾಶ್ಚಾತ್ಯ ದೇಶಗಳನ್ನು ನೋಡಿ ಬಂದಾಗ ತಲೆಗೇರಿದ ಕಸಿವಿಸಿ, ವಸ್ತು ವ್ಯಾಮೋಹದ ತೊಳಲಾಟ, ಅಲ್ಲಿರುವ ಸುಖ ಸೌಲಭ್ಯಗಳು ನಮ್ಮಲ್ಲಿಲ್ಲವೆಂಬ ತಳಮಳ. ನಮಗಿರುವುದು ಸಾಲದೆಂಬ ಅತೃಪ್ತಿ ಹಿಂದಿರುಗಿದ ಕೆಲದಿನ ಕಾಡುತ್ತಿತ್ತು. ಆದರೆ ಇಂದು? ನಮ್ಮಲ್ಲಿರುವುದು ವಸ್ತುಗಳಾಗಲೀ, ಮನೋಭಾವನೆಗಳಾಗಲೀ ನಿಜವಾಗಿಯೂ ಬೇಕಾದವುಗಳೇ? ಅವುಗಳಿಲ್ಲದೆ ಜೀವನ ಹೆಚ್ಚು ನಿರುಮ್ಮಳವಾಗಲಾರದೇ? ಎಂದು ನಮ್ಮನ್ನೇ ಪ್ರಶ್ನಿಸಿಕೊಳ್ಳುವಂತೆ ಕೈಲಾಸ ಮಾನಸ ಸರೋವರ ಪಾದಯಾತ್ರೆ ಹಾಗೂ ಅಲ್ಲಿನ ಜನರ ಸರಳ ಜೀವನದ ರೀತಿ ಅವರ ಆಧ್ಯಾತ್ಮಿಕ ಜೀವನ ದೃಷ್ಟಿ ಪ್ರೇರೇಪಿಸಿದ್ದವು.

ಅವರಷ್ಟೇ, ಅಷ್ಟೇಕೆ ಈ ನಾಲ್ಕು ವಾರಗಳ ನಮ್ಮದೆ ದೈನಂದಿನ ರೀತಿಯಷ್ಟು ಸರಳವಲ್ಲದಿದ್ದರೂ ನಮ್ಮ ಜೀವನದ ಗೋಜಲನ್ನು ಬಹುಮಟ್ಟಿಗೆ ಕಡಿಮೆ ಮಾಡಿಕೊಳ್ಳಬಹುದೆನಿಸಿತು. ಹಿಂದೆಂದೂ ಕಾಣದ ಸಂತೃಪ್ತಿ ಇಂದು ಮನದಟ್ಟಾಗಿತ್ತು. ಯಃಕಶ್ಚಿತ್ ಅಗರು ಬತ್ತಿಯ ಧೂಮ ಕೋಣೆಯನ್ನೆಲ್ಲ ಆವರಿಸಿ, ಬತ್ತಿ ನಂದಿಹೋದ ನಂತರವೂ ಉಳಿದು ಅಲ್ಲಿದ್ದವರನ್ನು ಮತ್ತೊಂದು ಮಾನಸ ಸ್ತರಕ್ಕೊಯ್ಯುವಂತೆ ಟಿಬೆಟ್ ಪ್ರವಾಸ ಅಲ್ಲಿನ ಆ ಆಧ್ಯಾತ್ಮಿಕ ಮನೋವೃತ್ತಿ ಇನ್ನೂ ಗಾಢವಾಗಿ ಉಳಿದಿತ್ತು.

`ನಿನ್ನೊಡನೆ ಇದೇ ಜಾಡಿನಲ್ಲಿ ಇನ್ನರ್ಧ ಗಂಟೆ ಮಾತನಾಡಿದರೆ ನಾನೂ ಲಾಮಾನಾಗಿ ತಲೆಬೋಳಿಸಿ ಹೊಗಬೇಕಾದೀತು. ಅದು ನನಗೆ ಬೇಡ. ಬೆಳಗಾದಾಗ ನೀನು ಆ ಜಾಡನ್ನು ಮರೆತಿರುವೆ ಎಂದು ಆಶಿಸುವೆ. ನಿನಗೆ ಶುಭರಾತ್ರಿ' ಎಂದು ನಾಟಕೀಯವಾಗಿ ಬಗ್ಗಿ ಸಲಾಮು ಹೊಡೆದು ನಂತರ ಗಹಗಹಿಸಿ ನಗುತ್ತ ಎದ್ದು ಹೋದ. ಮನೋಜನ ಮನದಲ್ಲಿ ನಡೆದಿದ್ದ ಮಾನಸಿಕ ಹೊಯ್ದಾಟ

ಎದ್ದು ಕಾಣುತ್ತಿತ್ತು. ಬೇಡಬೇಡವೆಂದರೂ ಪ್ರಭಾವ ಬೀರಿದ ಈ ಪ್ರವಾಸ ಆ ಯುವಕನಿಗೆ, ಅನೇಕರಿಗೆ ಯಾತ್ರೆಯಾಗಿ ಹೋಗಿತ್ತು. ಇದೇ ತಾನೇ ಕೈಲಾಸ ಕ್ಷೇತ್ರದ ಮಹಿಮೆ, ಮಾನಸ ಸರೋವರ ಸ್ನಾನದ ಮಹತ್ವ ಹಿಮಾಲಯದೊಡಲಿನ ಓರಿಮೆ!

ಬೆಳಗಿನ ಆರು ಗಂಟೆಗೇ ತಯಾರಾಗಬೇಕಿದ್ದ ಉಪಹಾರವನ್ನು ಹೊಟ್ಟೆಗೆ ತುರುಕಿ ಬೆಳ್ಳಂಬೆಳಗು ಹೊರಟವರು ಬುಧಿ ಕ್ಯಾಂಪ್ ಬಿಟ್ಟಾಗ ನಮ್ಮ ಜೊತೆಗೆ ಹಗ್ಗದ ಸುರುಳಿಗಳು ಮತ್ತು ಸಲಿಕೆ ಹಿಡಿದ ಇಬ್ಬರು ಕೂಲಿಯಾಳುಗಳು ನಡೆದಿದ್ದರು. `ಇವರೇಕೆ ನಮ್ಮ ಜೊತೆ? ಇದೆಲ್ಲಾ ಏಕೆ?' ಎಂದು ಕೇಳಿದರೆ ಮುಂದಿನ ಕ್ಯಾಂಪ್‌ನಲ್ಲಿ ಹೇಳುತ್ತೇನೆ ಇಲ್ಲವೇ ನೀನೇ ನೋಡುತ್ತೀಯೇ.' ಎಂದ ಬಲಗೈ ಬಂಟ ತುಲಾರಾಮ ಸಿಂಗ್.

ಬುಧಿ ಕ್ಯಾಂಪ್ ಸಮೀಪವೇ ೧೦೦ ಅಡಿ ಆಳದಲ್ಲಿ ಹರಿದಿದ್ದ ಕಾಲೀ ನದಿಯನ್ನು ದಾಟಿ ಒಂದು ಕಿ. ಮೀ. ನಡೆದಾಗಲೇ ಬುಧಿ ಹಳ್ಳಿ ಕಾಣದಾಗಿ ದಟ್ಟಕಾಡು ಮತ್ತು ದೈತ್ಯ ಬೆಟ್ಟಗಳು ನಮ್ಮನ್ನು ಕಬಳಿಸಿದ್ದವು. ಹಿಂದಿನ ಎರಡು ವಾರಗಳಲ್ಲಿ ಆಗಿದ್ದ ಭಾರಿ ಮಳೆಯಿಂದಾಗಿ ಮೇಲಿನ ಮಣ್ಣನ್ನು ಹೊತ್ತು ಧಾವಿಸಿ ಕೆಳಗುರುಳುತ್ತಿದ್ದ ಕಾಳೀ ನದೀ ಸೊಕ್ಕಿ ಕೆನ್ನಾಲಗೆಯ ಕಾಳಿಯೇ ಆಗಿದ್ದಳು. ಅವಳ ರಭಸಕ್ಕೆ ನೆಲವೇ ಸಣ್ಣಗೆ ಕಂಪಿಸುವುದು ಗೊತ್ತಾಗುತ್ತಿತ್ತು. ನದಿಯಿಂದೆದ್ದ ತುಂತುರು ಪರಿಸರದ ತಣ್ಣನ್ನು ಹೆಚ್ಚಿಸಿತ್ತು, ಎರಡು ವಾರ ಟಿಬೆಟಿನ ಶುಷ್ಕ ಹವೆಯಲ್ಲಿ ಒಣಗಿದ್ದ ದೇಹ ಈ ತಣ್ಣನ್ನು ಹೀರಿ ಹೀರಿ ಶ್ವಾಸಕೋಶ ಭಾರೈಸಿದ ಅನುಭವ. ನದೀಪಾತ್ರದ ಹೆಬ್ಬಂಡೆಗಳಿಗೆ ಅಪ್ಪಳಿಸುತ್ತಾ ತಗ್ಗಿನೆಡೆಗೆ ನುಗ್ಗುತ್ತಿದ್ದ ಟನ್‌ಗಟ್ಟಲೆ ನೀರಿನ ಮೊರೆತದಿಂದ ಏನೂ ಕೇಳಿಸದಂತಾದ ಸ್ಥಿತಿ. ರಾತ್ರಿಯೆಲ್ಲಾ ಸುರಿದಿದ್ದ ಮಳೆಯಿಂದಾಗಿ ಕಾಲೂರಿದವರೇ ಜಾರುತ್ತಿದ್ದ ಮಣ್ಣು, ಅಲ್ಲಲ್ಲಿ ಬೆಟ್ಟದ ಮೇಲಿನಿಂದ ಹರಿದು ನದಿಗೆ ಸೇರುತ್ತಿದ್ದ ಕಿರು ಝರಿಗಳು ದಡವನ್ನೇ ಕೊಚ್ಚಿಹಾಕಿದ್ದರಿಂದ ಆ ಝರಿಗಳಲ್ಲೇ ಇಳಿದು ಬೆಟ್ಟವನ್ನೇ ಆತುಕೊಂಡು ಮುಂದು ವರಿವ ಅನಿವಾರ್ಯತೆ ದಾಟಿದವರ ಕೈ ಹಿಡಿಯಲೂ ಭಯ. ಕೈ ಹಿಡಿದು ನಮ್ಮೊಡನೆ ಅವರನ್ನು ಕಾಳಿಗೆ ಬೀಳಿಸುವುದೇ ಎಂಬ ಅಂಜಿಕೆ. ಸಲಿಕೆ ಹಗ್ಗಗಳ ಅವಶ್ಯಕತೆ ತಾನಾಗಿಯೇ ಅರಿವಿಗೆ ಬಂದಿತ್ತು. ಮಾನವನಷ್ಟೇ ಅಲ್ಲದೆ ಪ್ರಾಣಿಯನ್ನು(ಯಾಕ್) ನಂಬಿ ಕೈಲಾಸ ಸುತ್ತಿ ಬಂದಂತೆ ಪೋರ್ಟರ್‌ಗಳನ್ನೇ ನಂಬಿ ಇಲ್ಲವೇ ಯಾತ್ರಿಗಳೇ ಕೈ ಹಿಡಿದು ಕಾಳಿ ನದಿಯ ನೃತ್ಯದಾಡೆಯ ಮೇಲೆ ನಡೆದಿದ್ದೆವು. ಈ ದಿನದ ಚಾರಣಕ್ಕೆ ಯಾರನ್ನು, ಕುದುರೆಗಳು ಹೊತ್ತಿರಲಿಲ್ಲ. ಯಾರಿಗೂ ಹತ್ತುವ ಧೈರ್ಯವು ಇರಲಿಲ್ಲ.

`ಈ ದಾರಿಯಲ್ಲಿ ಹೋದ ನೆನಪಿಲ್ಲ. ಬೇರೊಂದು ದಾರಿಯಲ್ಲಿ ಹೋಗಿದ್ದೇವು. ಅದರಲ್ಲೇ ಮರಳಿದ್ದರೆ ಈ ರೀತಿ ಒದ್ದೆಮುದ್ದೆಯಾಗಿ (ಭಯದಿಂದಲೂ) ನಡುಗುತ್ತಿರಲಿಲ್ಲ' ಎಂದು ಗೊಣಗಿದವಳಿಗೆ ತುಲಾರಾಮ ಸಿಂಗ್‌ನ ವಿವರಣೆ ಇಂತೆಂದು ನೀನು ಬಯಸಿದ ದಾರಿಯಲ್ಲೇ ಹೋಗಲು ಇದೇನು ಬಯಲೇ? ಪರ್ವತದಲ್ಲಿ ಮಣ್ಣು ಕುಸಿದು ಆ ದಾರಿಯೇ ಇಲ್ಲವಾಗಿದೆ. ಅದನ್ನು ದುರಸ್ತಿಮಾಡಲು ಒಂದು ವಾರವಾದರೂ ಬೇಕು. ಮಳೆ ನಿಲ್ಲುವವರೆಗೆ ದುರಸ್ತಿ ಮಾಡಿದರೂ ಉಪಯೋಗವಿಲ್ಲ. ಇಲ್ಲಿ ದುರಸ್ತಿಯೆನ್ನುವುದು ನಮ್ಮ ಭ್ರಮೆ. ಈ ನದಿ, ಪರ್ವತ ಮಳೆ ಅಪ್ಪಣೆ ಕೊಟ್ಟರೆ ದಾರಿಯಷ್ಟೇ ಪ್ರಕೃತಿಯನ್ನು ಪ್ರಕೃತಿಯೊಬ್ಬಳೇ ದುರಸ್ತಿ ಮಾಡಬಲ್ಲವಳು.

ಪ್ರಕೃತಿಯ ಈ ತಾಂಡವ ಲೀಲೆಯನ್ನು ನೋಡುತ್ತ ನಡೆದಿದ್ದ ಸಮಗೆ ಕೈಲಾಸದ ಬೋಳು ಬೆಟ್ಟಗಳು, ಬೆತ್ತಲೆ ಬಯಲುಗಳು ಮತ್ತೆ ಮತ್ತೆ ನೆನಪಾಗುತ್ತಿತ್ತು. ಅಲ್ಲಿ ಒಮ್ಮೆ ಬಯಲಾದವರು ಎಂದೆಂದಿಗೂ ದಿಗಂಬರೇ ಎಂಬಂತಾಗಿತ್ತು. ದಿಗಂಬರನಲ್ಲಿಗೆ (ಕೈಲಾಸವಾಸಿಗೆ ಇನ್ನೆಂತಹ ಅಂಬರ (ವಸ್ತ್ರ) ಸಾಕಾದೀತು?) ಹೋದವರನ್ನು ಅವ ತನ್ನಂತೆಯೇ ಮಾಡಿದ್ದ ಹಲವು ರೀತಿಯಲ್ಲಿ ಪ್ರಕೃತಿಯೊಂದಿಗಿನ ಜೀವನದಿಂದ ಬಹುದೂರ ನಾಗರಿಕತೆಯ ತಾಂತ್ರಿಕ ಸೌಲಭ್ಯಗಳ ಯಾಂತ್ರಿಕ ಜೀವನದಲ್ಲಿ ಸಭ್ಯತೆಯ ಸೋಗು ಹಾಕಿದ್ದ ನಮ್ಮ ಅಹಂ ದೊಡ್ಡಸ್ತಿಕೆಯ ಪೀತಾಂಬರವನ್ನು ತೊಟ್ಟು ನಿಂತಾಗ ಅದನ್ನು ಹರಿದೊಗೆದಿದ್ದ ಓದಿತಿಳಿದವರೆಂದು ಬೀಗುತ್ತಿದ್ದವರ ಬುದ್ಧಿಗೆ ಮುಸುಕಿದ್ದ ತಿಳಿವಿನ ಪರದೆಯನ್ನು ಸರಿಸಿ ಓದುಬಾರದ ನಾಡಾಡಿಗಳೊಂದಿಗೇ ನಿಲ್ಲಿಸಿದ್ದ.

ಇದುವರೆಗಿನ ಕಲಿಕೆಯನ್ನು ಅಲ್ಲಗಳೆದಿದ್ದ ಇದುವರೆಗೆ ಮಾಡಿದ್ದ ಕಾರ್ಯಗಳೆಲ್ಲದನ್ನು ಇಲ್ಲವಾಗಿಸಿದ್ದ ಇದುವರೆಗೆ ರೂಢಿಸಿಕೊಂಡಿದ್ದ ಅಭ್ಯಾಸಗಳನ್ನು ವಿಧಿ ವಿಧಾನಗಳನ್ನು ಮುಖಕ್ಕೆ ತೊಡಗಿಸಿಕೊಂಡಿದ್ದ ನಾಗರಿಕ ಮೊಗವಾಡಗಳನ್ನು ಎಲ್ಲವನ್ನು ಕಿತ್ತೊಗೆದು ಅತ್ಮವನ್ನು ಬತ್ತಲೆ ನಿಲ್ಲಿಸಿದ. ನಿರ್ಯೋಚನೆಯ, ಇಂದ್ರಿಯಾನುಭವವಲ್ಲದ, ನಿರ್ಭಾವದ ಶೂನ್ಯತೆಗೆ ತಳ್ಳಿದ್ದ ಏನು ಇಲ್ಲದ, ಶೂನ್ಯದಂತಿಲ್ಲದೆ ಇನ್ನೇನು ತುಂಬಲಾಗದಂತಹ ಶೂನ್ಯವನ್ನು ಪರಿಚಯಿಸಿದ್ದ ಬೆತ್ತಲೆ ಭೋಲೆನಾಥ, ಕೈಲಾಸದಂಗಳದಲ್ಲಿ ಬರೀ ಇರುವಿಕೆಯ ಬೇರಾವುದೂ ಬೇಕಿಲ್ಲದ ಇರುವಿಕೆ ಸಹಜ ಸ್ವಭಾವವನ್ನು ಮನಗಾಣಿಸಿದ್ದ ನಿಸರ್ಗ ಸಹಜ ಸರಳ ಮಾನವ ಮಕ್ಕಳಾಗಿ ಬಾಳುವ ಪರಿಯನ್ನು ಓದು ಬಾರದವರಿಂಲೇ ಕಲಿಸಿದ್ದ, ಜೀವನಕ್ಕೆ ಅವಶ್ಯಗಳು, ಸುಖಸಾಧನೆಗಳು ಮತ್ತು ಭೋಗ ವಸ್ತುಗಳು ಇವುಗಳ ಅಂತರವನ್ನು ಕಾಣಿಸಿದ್ದ. ಮಾನವ ಮಾತ್ರರಲ್ಲಿರಬೇಕಾದ ಪರಸ್ಪರ ಮಾನವೀಯ ಸಂಬಂಧವನ್ನು ಮನಗಾಣಿಸಿದ್ದ, ಪ್ರಕೃತಿಯ ಹಲವಾರು ಮುಖಗಳನ್ನು ತೋರಿಸಿ ಅದರಲ್ಲಿನ ಸ್ಥಾವರ ಜಂಗಮ ಜಾಲದಲ್ಲಿ ಮಾನವ ಸ್ಥಾನ ಎಲ್ಲಿಯದೆಂದು ಮನವರಿಕೆ ಮಾಡಿಸಿದ್ದ. `ಈ ಅನಂತರೂಪಿಣಿ ಅನಂತ ಗುಣಮತಿ ಪ್ರಕೃತಿಯನ್ನೆದುರಿಸಿ ಉಳಿಯಲಾರಿರಿ. ಅವಳಲ್ಲೊಂದಿಗೆ ಅವಳೇ ಆಗಿ ಉಳಿಯುವಿರಿ.' ಎಂಬ ಸತ್ಯವನ್ನು ತಿಳಿಸಿದ್ದ ಕಾಳೀನದಿಯ ದಂಡೆಗುಂಟ ಸಾಗಿದವರಿಗೆ ಮತ್ತೊಮ್ಮೆ ತನ್ನ ಮನದನ್ನೆಡೆ ಪ್ರಕೃತಿಯ ಬೇರೊಂದು ಲೀಲಾ ವಿನೋದವನ್ನು ತೋರಿಸಿದ್ದನಾ ವ್ಯೋಮಕೇಳಿ. ಬೆಳಿಗ್ಗೆ ಆರು ಗಂಟೆಯಿಂದ ಅರಂಭವಾದ ಕಾಳಿಯ ಸಾಂಗತ್ಯ ಸಂಜೆಯವರೆಗೆ ದೊರೆಯುವುದಿತ್ತು. ಕೆಲವಡೆಗೆ ತುಂತುರು ಹನಿ ಹಾರುವಷ್ಟು ಸನಿಹದಲ್ಲಿದ್ದರೆ ಕೆಲವೆಡೆ ಪಾತಾಳದಲ್ಲಿ ಕೊರೆದ ಚಿತ್ರದಂತೆ ಕಂದು ಬಣ್ಣದ (ಹೊಸನೀರಿನಿಂದಾಗಿ) ಹಾಸಾಗಿ ಕಾಣುತ್ತಿದ್ದಳು. ಕೆಲವಡೆ ಕಾಲಡಿಯಲ್ಲಿ ಭೋರ್ಗರೆದು ಹರಿದರೆ ಕೆಲವಡೆ ಪಕ್ಕದಲ್ಲೇ ವಿಶಾಲ ಪಾತ್ರದಲ್ಲಿ ಸಮಚಿತ್ತೆಯಾಗಿ ಹರಿದು ರಮಿಸಿದ್ದಳು. ಕೆಲವಡೆ ಪರ್ವತನ ಹಸಿರುಡೆಯಲ್ಲಿ ನುಸುಳಿ ಮಾಯವಾದರ ಮತ್ತೆ ಬಯಲಲ್ಲಿ ಮೈದೋರಿ ರಂಜಿಸಿದ್ದಳು. ಮಧ್ಯಾಹ್ನ ೧೨ ಕ್ಕೆಲ್ಲಾ ಮಾಲಾಹಳ್ಳಿಗೆ ಕರೆತಂದಿಳಿಸಿದ್ದಳು. ಮಾಲಾ ಶಿಬಿರದಲ್ಲಿನ ದಾಸೋಹಕ್ಕೆ ಹಿಮ್ಮೇಳವಾಗಿ ಹಾಡಿದ್ದಳು. ಮೈ ಮನ ತುಂಬಿದ್ದಳು. ಬಗಲಿನ ನೀರಿನ ಚೀಲಕ್ಕೂ ನುಗ್ಗಿದಳು. ಅಂದು ಸಂಜೆಯೇ ಗಾಲಾ ಶಿಬಿರ ಸೇರುವುದಕ್ಕೆ ಮತ್ತೆ ಹಾದಿಗಿಳಿದೆವು.

ಸುಮಾರು ೧೮-೨೦ ಕಿ. ಮೀ. ನುದ್ದಕ್ಕೂ ಸಮ್ಮೋಹಕನಿದ್ದ ಕಾಳೀ ನದಿ ಲಕ್ಷ್ಮಣಪುರದಲ್ಲಿ ನಮ್ಮನ್ನು ಹರಸಿ ಮುಂದೆ ಹರಿದು ಕಣ್ಮರೆಯಾಗಿದ್ದಳು. ಅಲ್ಲಿನ ಟೀ ಅಂಗಡಿಯಲ್ಲಿ ಅರ್ಧ ತಾಸು ಕುಳಿತು ಕಾಳೀ ನದಿಗೆ ಹಾರ್ದಿಕ ವಿದಾಯ ಹೇಳಿ ಪರ್ವತದ ಏರಿಗೆ ನಮ್ಮನ್ನು ಸಮರ್ಪಿಸಿಕೊಂಡಿದ್ದೆವು. ಸುಮಾರು ನಾಲ್ಕು ಕಿ. ಮೀ. ಉದ್ದದಲ್ಲಿ ೪೫೦೦ ಅಡಿಗಳಷ್ಟು ಎತ್ತರವನ್ನು ಸಾಧಿಸಬೇಕಿತ್ತು. ಅದೂ ಬೆಳಗಿನಿಂದ ೧೦ ಕಿ. ಮೀ. ನಡೆದ ನಂತರ, ಇಳಿದ ಮೇಲೆ ಏರಲೇ ಬೇಕಲ್ಲ ಏರುವಾಗ ಹೃದಯಕ್ಕೆ ಘುಸ್ಸು ಸಕ್ಕೆ ಶ್ರಮ ಏದುಸಿರಿನ ಜೊತೆ ಮೀನ ಖಂಡಗಳ ನೋವು, ಇಳಿಯುವಾಗ ಹೆಬ್ಬೆರಳಿನ ಚಿಮ್ಮುವಿಗೆ ಮತ್ತು ಮಂಡಿಯೊಳಗೆ ಅಘಾತ, ಮತ್ತೆ ಹಿಡಿತವಿಲ್ಲದ ಓಟ ಎರಡೂ ಕಷ್ಟಕರವೇ.

ಕೇವಲ ೨೦ ನಿಮಿಷದಲ್ಲಿ ೧೦ ಮಾರು ಉದ್ದವಿದ್ದ ಯಾತ್ರಿಗಳ ಸಾಲು ಒಂದು ಕಿ. ಮೀ. ಗೆ ಹೋಜಿಕೊಂಡಿತ್ತು. ಎರಡು ಕಾಲಾಗಿ, ನಂತರ ಮೂರು ಕಾಲಾಗಿ, ಕೆಲ ಕೆಲವರು ನಾಲ್ಕು ಕಾಲಾಗಿರಲು ಶಕ್ತ್ಯಾನುಸಾರ ವೇಗದ ಪ್ರಮಾಣವಿತ್ತು. ನಿಶಕ್ತ್ಯಾನುಸಾರ `ಹಾಯ್ ದೇವಾ ಇನ್ನೆಷ್ಟು ಮೆಟ್ಟಿಲು?' ಎರಡೇ ನಿಮಿಷ ಕೂರೋಣವೇ?' ನೀರು ಕೊಡಿ ದಮ್ಮಯ್ಯ ಹೇ ಭಗವಾನ್ ಶಕ್ತಿ ಕೊಡು ಇತ್ಯಾದಿಗಳ ಸಂಖ್ಯೆಯಿತ್ತು. ತಾಳ್ಮೆಯನುಸಾರ ಇನ್ನೆರಡೇ ತಿರುವು ನಂತರ ಸಮತಟ್ಟು ಕೂರದಿರು `ಕಾಲಿಗೆ ಎಣ್ಣೆ ಮಾಲೀಷು ಮಾಡುವವರಿದ್ದಾರೆ' ಕರೆದರೆ ಬರುತ್ತಾರೆ ಇತ್ಯಾದಿ ಉತ್ತೇಜಕ ಉಕ್ತಿಗಳು, ನಮ್ಮಂತಹ ಅದೃಷ್ಟಶಾಲಿಗಳಿಗೆ ತುಲಾರಾಮನ ಹುಳಿ ಕಡ್ಡಿಯ ಪಥ್ಯವೂ ದೊರೆತಿತ್ತು.

ಅಡ್ಡಾದಿಡ್ಡಿ ಮೆಟ್ಟಿಲುಗಳ ಮೇಲೆ ನಿರಂತರವಾಗಿ ಜಿನುಗುತ್ತಿದ್ದ ಒರತೆಗಳಿಂದ ಪಾಚಿಯ ಜಾರಿಕೆ ಕಟ್ಟಿಗೆ ಸೇತುವೆಯಲ್ಲಿ ಅಲ್ಲಲ್ಲಿ ಕೊಳೆತು ಬಿದ್ದುಹೋಗಿದ್ದ ಹಲಗೆಗಳು, ಬೆಟ್ಟದ ಮೇಲಿನಿಂದ ಬೀಳುತ್ತಿದ್ದ ಅಬ್ಬಿಗಳೊಳಗೆ ನುಸುಳಿ ಬರುವ ದಾರಿಗಳು ಸಾಲದೆಂದು ಈ ೨೧/೨ ಅಡಿ ಅಗಲದ ಚಿಕ್ಕ ದಾರಿಯಲ್ಲೇ ಎದುರಿನಿಂದ, ಹಿಂದಿನಿಂದ ಬರುತ್ತಿದ್ದ ಭಾರ ಹೊತ್ತ ಕುದುರೆಗಳು, ಇವೆಲ್ಲ ಆತಂಕಗಳನ್ನು ಮೀರಿತ್ತು ಕೆಲವಕ್ಕೆ ಛಾಯಾಚಿತ್ರಗ್ರಹಣದ ಆಸಕ್ತಿ. ಅದಕ್ಕಾಗಿ ನಿಂತವರ ತಾಳ್ಮೆ ತ್ರಾಸದಾಯಕ ಸನ್ನಿವೇಶದಲ್ಲೂ ನಕ್ಕು ನಗಿಸುವವರ ಉಲ್ಲಾಸ. ಇವನ್ನು ಮೀರಿಸಿತ್ತು ನನ್ನ ಏದುಸಿರನ್ನೇ ಏರಿ ಬಂದ `ಓ ನನ್ನ ಚೇತನ ಆಗು ನೀ ಅನಿಕೇತನ' ಕವನದ ಪಲ್ಲವಿ!' ಇಷ್ಟು ಹೊತ್ತು ತುಲಾರಾಮನ ತಲೆ ತಿಂದವಳ ತಲೆಗಿನ್ನಾವ ಗುಂಗು ಏರಿದೆ? ಎಂದು ಹುಬ್ಬೇರಿಸಿದ್ದರು ಸಹಚರರು. ಇಡೀ ಪ್ರವಾಸದ ಅನುಭವಗಳ ನೆನಪುಗಳ ಒಂದರ ಮೇಲೊಂದು ಬರುತ್ತಿದ್ದ ಕುವೆಂಪು ಕವನವನ್ನು ಅರ್ಥೈಸುವುದು ಅಲ್ಲ, ಅನುಭವಿಸುವುದೂ ನಡೆದು ಹಾಡಾಗಿ ಹೊರ ಬಂದಿತ್ತು. ಇಂದಿನ ಚಾರಣ ಮಾರ್ಗವೇ ಹಾಗಿತ್ತು.

ಟಿಬೆಟ್ಟಿನ ಸ್ಕಾರಿ ಪ್ರದೇಶದ ನಿಸರ್ಗ ವೈಶಿಷ್ಟ್ಯದ ಅನುಭವವಾದ ಮೇಲೆ ಅಸಂಭವ ಅಸಾಧ್ಯ ಪದಗಳು ನಮ್ಮ ಬುದ್ಧಿಗೆ ನಾವೇ ಹಾಕಿಕೊಳ್ಳುವ ಪರಿಮಿತಿಯೆನಿಸಿತ್ತು. ಇಲ್ಲಿ ಹಿಮವಂತನೊಡಲಲ್ಲಿ ಈ ರೀತಿ ನಡೆದಾಡಿದ ಮೇಲೆ ಅವೆರಡು ಪದಗಳು ಕೇವಲ ಶಬ್ದಕೋಶದ ಪದಗಳಾಗಿ ಉಳಿದು ಹೋದೆವು. ಪ್ರಕೃತಿ ನಿಯಮದ ನಿಗೂಢತೆ, ಅದರ ಅಗಾಧತೆಯ ಸುಳಿವು ಸಿಗುವುದು ಈ ಪರ್ವತ ಶ್ರೇಣಿಗಳಲ್ಲಿ ಈ ಸುಳಿವಿನ ಬೆಂಬತ್ತಿ ನಿಸರ್ಗ ನಿಯಮವನ್ನರಿಯುವ, ಅಗಾಧತೆಯನ್ನಳೆಯುವ ಮಾನವ ಚೈತನ್ಯದ ಅಪರಿಮಿತತೆಯ ಅರಿವಾಗುವುದು ಇದೇ ಪರ್ವತಸ್ತೋಮದ

ಎತ್ತರದಲ್ಲಿ,

ಬಾಲ್ಯದ ಕುರುಹುಗಳಾದ ಹಾರಾಟ, ಕುಣಿದಾಟ, ಲವಲವಿಕೆಯ ಉತ್ಸಾಹ, ಕುತೂಹಲ, ಅಚ್ಚರಿ, ಇತರರ ನೋವು ನಲಿವಿಗೆ ಸ್ಪಂದಿಸುವ ಚೈತನ್ಯ, ಸ್ವವಿಚಾರಗಳಿಗೂ ಪ್ರಾಣನೀಡುವ ಕಲ್ಪನಾ ಶಕ್ತಿ ದೊಡ್ಡವರಾದಂತೆ ಕ್ಷೀಣಿಸದುದು ಈ ಪ್ರವಾಸ ಕಾಲದಲ್ಲಿ ಮತ್ತೆ ಬಲಗೊಂಡಿತ್ತು. ಅಹ್ಲಾದ, ಆನಂದ ಪರವಶತೆ, ತಲ್ಲೀನತೆ ಎಂಬುದರ ಮರುಪರಿಚಯವಾಗಿತ್ತು. ನಿಜವಾದ ಅರ್ಥದಲ್ಲಿ ನಾವೆಲ್ಲಾ ಜೀವಂತರಾಗಿದ್ದೆವು. ಮೂರು ವಾರಗಳ ನಿಸರ್ಗದೊಡಲಿನ ಚಾರಣದಿಂದ ಕಾಯಕಲ್ಪವೇ ಆಗಿತ್ತು. ವಿಪತ್ತಿನೆದುರಲ್ಲಿ ಸಕಲ ಪ್ರಾಣಿಗಳೂ ಪ್ರದರ್ಶಿಸುವ ಬದುಕಬೇಕೆಂಬ ಛಲ ಈಗ ಹೊರಹೊಮ್ಮುವ ಸುಪ್ತ ಅಂತರ್ಶಕ್ತಿ ಧೈರ್ಯ, ದೈಹಿಕ ಚಾಕಚಕ್ಯತೆ, ಸ್ಫುಟತೆ ನಮ್ಮಲ್ಲೂ ಇರುವುದೆಂಬುದನ್ನು ಸಾಬೀತು ಮಾಡಿದ್ದೆವು. ಅಪರಿಚಿತ ವ್ಯಕ್ತಿಯಲ್ಲಿ ಎಂದೂ ಕಂಡಿರದಿದ್ದ ಪ್ರಾಣಿ ಯಾಕ್‌ನಲ್ಲೂ ಸಹ ಅವರ ಕೌಶಲ್ಯದಲ್ಲಿ, ಅವರ ನಿರ್ಧಾರಗಳಲ್ಲಿ ಪೂರ್ಣನಂಬಿಕೆಯಿಟ್ಟು ನಮ್ಮ ಪ್ರಾಣವನ್ನೇ ಒಪ್ಪಿಸಿರುತ್ತಿದ್ದೆವು. ಅಂತೆಯೇ ಇತರರು ನಮ್ಮಲ್ಲಿಟ್ಟ ನಂಬಿಕೆಯನ್ನುಳಿಸಿಕೊಳ್ಳಲು ಹಣಗಾಡುತ್ತಿದ್ದೆವು. ಮಾನವನ ಹೊರರೂಪಕ್ಕಲ್ಲದೆ ಅಂತರ್ಗುಣಗಳಿಗೆ ಬೆಲೆಕಟ್ಟುವುದನ್ನು ಕಲಿತೆವು. ನಮ್ಮಲ್ಲಿ ನಮಗೆ ಪೂರ್ಣನಂಬಿಕೆ ಬಂದಾಗಲೇ ಇವೆಲ್ಲಾ ಸಾಧ್ಯವೆಂಬುದನ್ನು ಅರಿತೆವು. ತನ್ನೊಳಗಿನ ಮೃಗೀಯ ಭಯವನ್ನು ಮೀರಿ ಅಗೋಚರವನ್ನರಿಸಿ ಹೊರಡುವ ಮಾರ್ಗದಲ್ಲಿ ಎದುರಾಗುವ ದೈಹಿಕ, ಮಾನಸಿಕ, ಬೌದ್ಧಿಕ ಅಡಚಣೆಗಳನ್ನು ದಾಟಿ ಲಕ್ಷ್ಯವನ್ನು ಭೇದಿಸುವ, ಅಸಾಧ್ಯವೆಂದು ಕಂಡುದನ್ನು ಸಾಧಿಸುವ ಮಾನವ ಚೈತನ್ಯದ ಅಗಾಧ ಶಕ್ತಿಯ ಅಭಾಸವನ್ನು ಪಡೆದೆವು.

ಪರ್ವತದ ಮೇಲೇರಿ ಬಂದಂತೆ ಸಂಜೆಯ ಹೊಂಬಿಸಿಲು ಸುತ್ತಲಿನ ಬೆಟ್ಟ ಸಾಲುಗಳ ಮೇಲೆ ಹರಡಿತ್ತು. ಸವಿತಾರನ ಬೆಳಕೂ ಕೂಡ ಮಾಯೆಯು ಬಲೆಯನ್ನು ಬೀಸಿತ್ತು. ಗಂಧವತೀ ಪೃಥ್ವಿ ಸ್ವರ್ಣಮಯೀ ಧರಿತ್ರಿಯಾಗಿದ್ದಳು. ತನ್ನ ಸ್ವರ್ಣಕಾಂತಿಯನ್ನು ಪಡುವಣದಾಗಸಕ್ಕೂ ಎರದಲಿತ್ತಿದ್ದಳು. ಮೇಲೆ ಹತ್ತಿ ಬಂದ ಆಯಾಸದಿಂದಾಗಿ ಕಾಲೆಳೆಯುತ್ತಾ ಮೊದಲು ಸಿಕ್ಕ ಗುಡಿಸಿಲಿನ ಜಗುಲಿಯಲ್ಲಿ ಬಾಂದಳಕ್ಕೆದುರಾಗಿ ಕುಳಿತೆವು. ಮೋಡವಾಯುವುದು ಹಿಮ ಶಿಖರವಾಗುವುದು ಎಂದು ಗುರುತಿಸಲಾಗದಂತಹ ದೃಶ್ಯ ಎರಡಕ್ಕೂ ಚಿನ್ನದ ಲೇಪವಿದ್ದು ಮೋಡದಳು ಸಂಚರಿಸುವ ಶಿಖರಗಳಂತೆ ಸ್ಥಾನಾ ಪಲ್ಲಟ ಮಾಡುತ್ತಿದ್ದವು. ನಮ್ಮ ಧ್ವನಿ ಕೇಳಿ ಒಳಗಿನ ಕತ್ತಲಿನಿಂದ ಹೊಗೆಯ ಮರೆಯಲ್ಲಿ ಗೋಚರಿಸಿತು ಉರಿಯೊಲೆಯ ಮೇಲಿದ್ದಾ ಬಾಣಲೆ, ಅದರಲ್ಲಿ ಕುಣಿದಾಡುತ್ತಿದ್ದ ಬೋಂಡಾಗಳು, ಕುಣಿಯುತ್ತಲೇ ಕೈಗೇ ಬಂದು ಹಾರುತ್ತಲೇ ಬಾಯಿಯೊಳಗಿಳಿದಿದ್ದವು. ೪- ೫ ಹೊಟ್ಟೆಗಿಳಿದ ನಂತರ ನಿಧಾನದಲ್ಲಿ ಹೊಳೆದ ಪ್ರಶ್ನೆ ಈ ಧ್ವನಿ ಮನೋಜಭಯ್ಯನದಲ್ಲವೇ? ಈಗಾಗಲೇ ಶಿಬಿರ ತಲುಪಿ ಚಹಾ ಬಗ್ಗಿಸುತ್ತಿರಬೇಕಿತ್ತು. ಲಕ್ಷ್ಮಣ ಪುರದ ಹತ್ತಿರವೇ ಕಾಲು ತಿರುಚಿಕೊಂಡು ಬಿದ್ದ ಕಾರಣ ಪಾದತ ಕೀಲಿನಲ್ಲಿ ಉಳುಕು ಬಂದಿತು. ಅದೇ ಉಳುಕಿದ ಕಾಲಲ್ಲೇ ೪,೫೦೦ ಅಡಿಗಳಷ್ಟು ಕುಂಟುತ್ತಲೇ ಹತ್ತಿದ್ದನವ ಧೀರ. ಶಿಬಿರಕ್ಕಿನ್ನು ೩-೪ ಕಿಲೋ ಮೀಟರ್ ನಡೆಯಬೇಕಿದ್ದುದರಿಂದ ಕೊಂಚ ಹೊತ್ತು ಕಾಲಿಗೆ ಆರಾಮ ಕೊಡಲು ಬೋಂಡಾ ಮನೆಗ ನುಗ್ಗಿದ್ದ. ನೋವಿನ ಆಯಾಸದಲ್ಲೂ ನಕ್ಕು ನಗಿಸುವ

ಅವನ ಉತ್ಸಾಹ ನಮಗೂ ವ್ಯಾಪಿಸಿಕೊಂಡು ಶಿಬಿರದವರೆಗೆ ಕಾಲೆಳೆದುಕೊಂಡು ಹೋಗುವ ಬದಲಿಗೆ ಉತ್ಸಾಹದಲ್ಲಿ ನಗು ನಗುತ್ತಾ ಸೇರುವಂತೆ ಮಾಡಿತು.

ಗಾಲಶಿಬಿರಕ್ಕೆ ಕಾಲಿಟ್ಟಾಗಿನ ಮನಸ್ಥಿತಿ ಅವರ್ಣನೀಯ. ಅಸಾಧ್ಯವೆನಿಸಿದ ದಿನದ ಚಾರಣವನ್ನು ಕೊನೆ ಮುಟ್ಟಿಸಿದ ಧನ್ಯತಾ ಭಾವ; ನಮ್ಮ ಬಗ್ಗೆ ನಮಗೇ ಇದ್ದ ಹಿಂಜರಿಕೆ ಹೋಗಿ ಆತ್ಮ ಸ್ಥೈರ್ಯದ ನವಭಾವ.; ಈ ಕಾಯಕಲ್ಪವನ್ನು ಮಾಡಿದ್ದ ಪ್ರಕೃತಿ ದೇವಿಯಲ್ಲಿ ಪೂಜ್ಯತಾ ಭಾವ; ಈ ಕಾರ್ಯಕ್ಕೆ ಸಹಕಾರ ನೀಡಿದ್ದ ಬೋಟಿಯ ಬಾಂಧವರ ಬಗ್ಗೆ ಸ್ನೇಹಭಾವ ಎಲ್ಲವೂ ಸಮ್ಮಿಳಿತವಾಗಿತ್ತು. ಬುದಿಯಿಂದ ಗಾಲಾವರೆಗಿನ ಇಪತ್ತಿನ ಚಾರಣದಲ್ಲಿ ಕಂಡ ನಿಸರ್ಗ ಚೆಲುವು ಮತ್ತು ನಮ್ಮ ಯೋಗ್ಯತೆಯ ಬಗೆಗೆ ನಮ್ಮಲ್ಲೇ ಮೂಡಿದ್ದ ವಿಶ್ವಾಸ ಇವೆರಡು ಸಂಗತಿಗಳು ಮತ್ತೊಂದು ಪುರಾಣ ಕಥೆಗೆ ಹೊಸ ಅರ್ಥ ತಿಳಿಯ ಹೇಳಿದ್ದವು.

ಪಾರ್ವತಿಯು ಸೌಂಧರ್ಯದಿಂದ ಶಿವನನ್ನು ಮೆಚ್ಚಿಸುವನೆಂಬ ಬಾಲಿಶ ತಿಳುವಳಿಕೆಗೆ ಗುರಿಯಾಗಿ ಪರಾಭಾವಗೊಂಡು ನಂತರ ಬಾಹ್ಯ ಸೌಂದರ್ಯದಿಂದಲ್ಲದೆ ಒಳಗಿನ ಶಿವತತ್ವದಿಂದ ಮಾತ್ರ ಶಿವನನ್ನು ಪಡೆಯಬಹುದೆಂಬ ಸತ್ಯವನ್ನು ಅರಿತಿದ್ದು ನನ್ನ ಮಟ್ಟಿಗೆ ಕೇವಲ ಪುರಾಣದ ವಿಷಯವಾಗಿ ಉಳಿಯಲಿಲ್ಲ. ನಮ್ಮ ಬಾಹ್ಯಲೋಕದ ಸೌಂದರ್ಯದ ಅರಿವಿನೊಡನೆಯೇ ಅಂತರ್ ಶಕ್ತಿಯುಳ್ಳ ಮಾನವ ನಾನೆಂಬ ಅರಿವು ಮೂಡಿದ್ದು ಆ ಅರಿವಿನ ಬೆಳಕಿನಲ್ಲಿ ನೋಡಿದ್ದ ಅನುಭವಿಸಿದ, ಜನರೊಡನೆ ಕಳೆದ ಕೈಲಾಸ ಮಾನಸ ಸರೋವರ ಪ್ರವಾಸದ ದಿನಗಳು ಶಿವಮಯವಾಗಿತ್ತು. ಮಾನವ ಜನ್ಮ ಪಡೆದವರೆಲ್ಲ ಪಾರ್ವತಿಯರೇ! ಅಂತರ್‌ಶಕ್ತಿಯ ಅರಿವಾಗಿ ಶಿವತತ್ವ ಹೊಂದುವವರೇ. ಅಕ್ಕಮಹದೇವಿಯ ಬಾಹ್ಯ ಸೌಂದರ್ಯಕ್ಕೆ ಮನಸೋತು ಮರುಳಾದ ಕೌಶಿಕ ದೊರೆ. ಅವಳ ಅಂತರ್ಯದ ಶಿವತತ್ವಕ್ಕೆ ತಲೆ ಬಾಗಿ ಚುಳುಕಾಗಿ ನಿಂತ ಶಂಕರ ಮಹದೇವ.

ಇಂದು ಬೆಳಗ್ಗೆ ಮುಖ ಮಾರ್ಜನಕ್ಕಾಗಿ ಅಂಗಳದ ತುದಿಗೆ ನಿಂತಾಗ ಗಾಳ ಶಿಬಿರದ ಕೆಳಗೆ ಕಣಿವೆಯಲ್ಲಿ ಚಿತ್ರದಂತೆ ಮಲಗಿತ್ತು. ಸಿಂಕೋಲ ಒಳಗೆ ಬಿಳಿ ತುಪ್ಪಳದಂತಹ ಮೋಡದ ಹೊದಿಕೆ ಅಲ್ಲಲ್ಲಿ ಕಂಡಿತು. ಸೂರ್ಯನ ಬೆಳಕು ಅದನ್ನಿನ್ನು ತಡವಿರಲಿಲ್ಲವಾಗಿ ಒಳಗಿನ್ನು ಬೆಳಕಾಗಿರಲಿಲ್ಲ. ನಾವು ಕಣಿವೆ ಇಳಿದು ಸಿಂಕೋಲಾ ಹಳ್ಳಿಯ ಸೇತುವೆ ಸೇರುವ ವೇಳೆಗೆ ರವಿ ಕಿರಣಗಳ ಸ್ಪರ್ಶ ಆಗ ತಾನೆ ಎದ್ದಂತೆ ಜುಳುಜುಳು ಹರಿದಿತ್ತು.

ಹಳ್ಳಿಯ ಮನೆಗಳಿಂದೆದ್ದ ಹೊಗೆ, ಮಕ್ಕಳ ಧ್ವನಿ, ಚಿಕ್ಕ ದೊಡ್ಡ ಪ್ರಾಣಿಗಳ ಓಡಾಟ, ಹಳ್ಳಿಗೂ ಬೆಳಗಾಗಿತ್ತು. ಸೇತುವೆಯ ಆ ಕಡೆಗಿದ್ದ ಕಾಡಿನಾಚೆ ಎತ್ತರಕ್ಕೆ ಆಕಾಶದಲ್ಲಿ ರುಂಗ್ಲಿಂಗ್ ಪಾಸ್ ತನ್ನನ್ನು ಹೇರುವಂತೆ ಆಹ್ವಾನಿಸಿತು. ನಮಗೀಗ ಅದನ್ನೇರುವ ರೀತಿಯು ತಿಳಿದಿತ್ತು. ರುಂಗ್ಲಿಂಗ್ ತನ್ನ ಎತ್ತರದಲ್ಲೇ, ನಾವು ಹೆಜ್ಜೆಯಿಂದ ಹೆಜ್ಜೆಗೆ ಸುತ್ತಲಿನ ನೋಟಕ್ಕೆ ಮನಕೊಟ್ಟು ನಡೆದರೆ ರುಂಗ್ಲಿಂಗ್ ಏಕೆ, ಅದರ ಅಣ್ಣನೂ ನಮ್ಮ ಕಾಲ್ಗೆಳಗೆ ಬರಬೇಕು ಎನ್ನುವ ಧೃತಿ, ಸಂಕಲ್ಪವಿತ್ತು.

ಎಳೆ ಬಿಸಿಲಿಗೆ ಬೆನ್ನು ಮಾಡಿ ಪಶ್ಚಿಮಕ್ಕಿದ್ದ ಕಾಡಿನೊಳಕ್ಕೆ ನುಗ್ಗಿದೆವು. ಕಾಡಿನಲ್ಲಿಯ ಬೆಳಗು, ಹಕ್ಕಿಗಳ ಚಿಲಿಪಿಲಿ, ಜೀರುಂಡೆ ಕೀಟಗಳ ಚೀರಾಟ, ಹುಲ್ಲಿನ ಹಸಿರುವ ಘಾಟು, ಸಸ್ಯ

ರಾಶಿಯ ವಿಶಿಷ್ಟ ಪರಿಮಳ ಓರೆಯಾಗಿ ಇಳಿದಿದ್ದ ಬೆಳಗಿನ ಬಿಸಿಲು ತೂರಾಡುತ್ತಿದ್ದ ದೂಳು ನೀರು ಕಣಗಳು, ಈ ವನ ಚಿತ್ರಾಂಕಿತ ಬಿಸಿಲ ಚಾಪೆಯನ್ನು ಸೀಳಿಕೊಂಡು ಆಕಾಶಕ್ಕೇರಿದ ಹೆಮ್ಮರಗಳು, ಅವು ಉದುರಿಸುತ್ತಿದ್ದ ಮಂಜು ಹನಿಗಳು ಚುಮುಚುಮು ತಂಪು. ಎಲ್ಲವನ್ನೂ ಅನುಭುವದ ಬುಟ್ಟಿಯೊಳಗೆ ಆಯ್ದುಕೊಳ್ಳುತ್ತ ನಡೆದಿದ್ದೆವು. ಸುಮಾರು ೫ ಕಿ. ಮೀ. ದೂರವನ್ನು ಏರಿದುದಾಗಿತ್ತು. ಸುಮಾರು ಹತ್ತೂವರೆ ಗಂಟೆ ತುಂತುರು ಮಳೆ ಆರಂಭವಾಯಿತು. ಬಿರುಸು ನಡಿಗೆಗೆ ಮೊದಲಿಟ್ಟೆವು. ನಮ್ಮ ಸುತ್ತಲೂ ವಿಚಿತ್ರ ಮೌನ ಆವರಿಸಿತು. ಗಿಡ ಮರಗಳು ಪಕ್ಷಿ ಕೀಟಗಳು ಯಾವುದಕ್ಕೋ ಕಾದಿರುವಂತಿತ್ತು. ೧೫- ೨೦ ನಿಮಿಷ ನಡೆದಿರಬಹುದು, ಹಿಂದಿನಿಂದ ಅಪರಿಚಿತ ಸದ್ದೊಂದಿಗೆ ಯಾರೋ ನಮ್ಮನ್ನು ಅವಸರಿಸಿದಂತಿತ್ತು. ಹಿಂತಿರುಗಿ ನೋಡಿದರೆ ಯಾರೂ ಕಾಣಲೊಲ್ಲರು. ಪೋರ್ಟರ್‌ಗಳು ಬೇಗ ಬೇಗ ಹೆಜ್ಜೆ ಹಾಕತೊಡಗಿದರು. ಹೆದರಿ ಓಡುವಂತೆ ಬೇಗ ಬೇಗ ಹೆಜ್ಜೆ ಹಾಕ ತೊಡಗಿದರು. ಐದು ನಿಮಿಷದಲ್ಲೇ ಅಪರಿಚಿತರ ದರ್ಶನವಾಯಿತು. ಮಳೆರಾಯರ ಆಗಮನವಾಯಿತು. ಧಾರಾಕಾರವಾಗಿ ಮಳೆ ಹೂಯ್ಯಲಾರಂಬಿಸಿ ಒಮ್ಮೆಲೆ ದಪ್ಪ ದಪ್ಪ ಹನಿಗಳ ತಾಳವಾದ್ಯ ಎಲ್ಲೆಲ್ಲೂ ಮೊಳಗಿತು. ತರೆಗೆಲೆ, ಕಲ್ಬಂಡೆ, ಮರಗಳ ಮೇಲೆ ಬಿದ್ದ ಹನಿಯ ಸದ್ದು ಹೊರಮುಖವಾಗಿ ಹರಿದು ಹೊರಗೆ ಹೋಗದೆ ಒಳಗೇ ತಿರುತಿರುಗಿ ಬರುವಂತೆ ಗುಂಬವಾದ ಸದ್ದು. ದಟ್ಟ ಕಾಡಿನೊಳಗಣ ಮಳೆಯದೇ ಒಂದು ವಿಶಿಷ್ಟ ಶಬ್ದಲೋಕ.

ಪೂರ ನೆನೆದು ಮುಖದಿಂದಿಳಿದಿದ್ದ ನೀರಿನಿಂದ ಎದುರಿನದು ಸ್ಪಷ್ಟವಾಗಿ ಕಾಣಿಸದೆ ನಡಿಗೆ ತಂತಾನೆ ನಿಧಾನವಾಯಿತು `ಇಲ್ಲಿನ ಮಳೆ ಯಾವಾಗ ನಿಲ್ಲುವುದೋ ಹೇಳಲು ಬಾರದು. ನಮ್ಮ ಹಿಂದೆ ಯಾತ್ರಿಗಳಾರೂ ಇಲ್ಲ. ಬಲು ಹಿಂದೆ ಸಾಮಾನಿನ ಕುದುರೆಗಳು ಮಾತ್ರ . ಬೇಗ ನಡೆದು ಶಿಬಿರ ಸೇರಿಕೊಳ್ಳುವುದು ಒಳ್ಳೆಯದು. 'ಎಂದು ಜೊತೆಗಿದ್ದ ನಾಲ್ಕೈದು ಮಂದಿ ಪೋರ್ಟರ್‌ಗಳು ಅವಸರಿಸಿದ ಕಾರಣ, ಮತ್ತೆ ಕಾಲಿಗೆ ತಾಕೀತು ಮಾಡಿ ಬೆಟ್ಟದ ನೆತ್ತಿ ಸೇರುವ ವೇಳೆಗೆ ಮಳೆ ನಿಂತು ಸುತ್ತಲೆಲ್ಲಾ ಬಿಸಿಲು ಚೆಲ್ಲಾಡಿತ್ತು. ಅಲ್ಲೇ ಕಟ್ಟೆಯ ಮೇಲೆ ಕುಳಿತಿದ್ದ ಯಾತ್ರಿಗಳು ಐದಾರು ಜನ! ಮೇಲೆ ಬಿಸಿಲಲ್ಲಿ ಕುಳಿತು ಕೆಳಗಿನ ಮಳೆಯನ್ನು ನೋಡಿದ್ದೀರಾ? ಅಮೋಘ! ಬೇಗ ಬೇಗ ಹತ್ತಿ ಬಂದದ್ದು ಸಾರ್ಥಕವಾಯಿತು.' ಎಂದು ಕಿವಿಯ ಹಿಂಡುತ್ತಾ ನುಡಿದರು.ಅವರು ಸಾಕ್ಷೀಭೂತವಾಗಿ ನೋಡಿದ ಮಳೆಯೊಳಗೆ ಇದ್ದು ಅನುಭವಿಸಿದವರು ನಾವು. ದೇವಗಂಗೆ ಕೆಳಗೆ ದುಮ್ಮಿಕ್ಕಿ ಶಿವನ ಮುಡಿಯೊಳಗೆ ಹೊಕ್ಕಂತೆ ಜಲಧಾರೆ ಕಾಡಿನ ಮುಡಿಯೊಳಕ್ಕೆ ಸಿಕ್ಕಿದುದನ್ನು ಅನುಭವಿಸಿದ್ದೆವು. ಒಂದೇ ಕಾಲದಲ್ಲಿ ನಡೆದ ಘಟನೆಯನ್ನು ಸ್ಥಳದ ಅಂತರವಿಟ್ಟು ಒಬ್ಬೊಬ್ಬರಿಗೆ ಒಂದೊಂದು ಬಗೆಯಾಗಿ ತೋರಿಸಿದ್ದಳು ಪ್ರಕೃತಿ. ಅವಳ ಚಿತ್ತವನ್ನು ಬಲ್ಲವರಾರು? ಪ್ರವಾಸದ ಮೊದಲಿನಿಂದಲೂ ಅವಳು ಕಣ್ಣು ಮುಚ್ಚಾಲೆ ಆಡುತ್ತಲೇ ಬಂದಿದ್ದಳು. ಕೆಲವಡೆ ಸೌಮ್ಯೆಯಾಗಿ ಕೆಲವೆಡೆ ರುದ್ರೆಯಾಗಿ ತಾಪಸಿಯಾಗಿ ಕೆಲವೆಡೆ ಶೃಂಗಾರವತಿಯಾಗಿ ಮನ ರಂಜಿಸಿದ್ದಳು. ಅವಳ ಲೀಲೆಗಳನ್ನು ಕಾಣುತ್ತಾ ಬಂದ ನಾವು ಹಿಮಾಲಯದಲ್ಲಿನ ಒಂದು ಸತ್ಯವನ್ನು ಮನಗಂಡಿದ್ದೆವು.

ಬಂದದ್ದೆಲ್ಲಾ ಬರಲಿ ಪ್ರಕೃತಿಯ ದಯೆಯೊಂದಿರಲಿ.

ಮೊದಲನೆಯದಾಗಿ ನೋಟಕ್ಕೆ ಪ್ರಕೃತಿಯ ಸಹಕಾರವಿರಬೇಕು. ಸೂರ್ಯನ ದಯೆ ಇರಬೇಕು. ಇಲ್ಲವಾದರೆ ಎಲ್ಲವೂ ತೋಯಮಯಂ ಹಿಮಮಯಂ. ಶ್ರಮಪಟ್ಟು ಗುರಿ ಮುಟ್ಟಿದರೂ ಮಂಜು ಮುಸುಕಿದ್ದರೆ ಏನೂ ಕಾಣದಾಗುವುದು. ಕೆಲವೊಮ್ಮೆ ಗುರಿ ಮುಟ್ಟುವುದು ಅಸಾಧ್ಯವಾಗಿ ಅರ್ಧ ದಾರಿಯಲ್ಲೇ ಹಿಂತಿರುಗುವ ಸಂದರ್ಭವು ಒದಗಬಹುದು. ಅಥವ ಇದ್ದಲ್ಲೇ ತಾಸುಗಟ್ಟಲೆ, ದಿನಗಟ್ಟಲೆ ಕಾಯುತ್ತಾ ಕುಳಿತಿರಬೇಕಾಗುವುದು.

ಎರಡನೆಯದಾಗಿ ಯಾವುದೇ ರೀತಿಯ ಪ್ರಕೃತಿ ವಿಕೋಪವಿಲ್ಲದೆ ಚಾರಣದ ಎಲ್ಲಾ ಹಂತವೂ ಕಠಿಣವಾದರೂ ಸುರಕ್ಷಿತವಿರಬೇಕು. ಹಿಮಪಾತ, ಪ್ರವಾಹ, ಪರ್ವತಭಾಗದ ಕುಸಿತ, ದುರ್ಘಟನೆ ಮುಂತಾದವು ಚಾರಣದ ಮಾರ್ಗವನ್ನೇ ಮುಚ್ಚಬಹುದು, ಪ್ರಾಣಹಾನಿಯು ಸಾಧ್ಯ.

ಮೂರನೆಯದಾಗಿ ದೇಹ ಪ್ರಕೃತಿ ಸಹಕರಿಸಬೇಕು. ಆರೋಗ್ಯವೊಂದಿದ್ದರೆ ಏನನ್ನಾದರೂ ಎದುರಿಸಬಹುದು. ಮಾರ್ಗದಲ್ಲಿ ಅನಾರೋಗ್ಯವಾದರೆ ವೈದ್ಯನಾಥನೇ ಗತಿ. ನಾಲ್ಕನೆಯದಾಗಿ ದೈಹಿಕವಾಗಿ ಏನೇ ಆಗಲಿ ಅದನ್ನೆದುರಿಸಿ ಗುರಿ ಸಾಧಿಸುವ ದೃಢತೆ, ಮನೋಸ್ಥೈರ್ಯ ಎಲ್ಲಕ್ಕಿಂತ ಮಿಗಿಲಾಗಿ ಸಕಾರಾತ್ಮಕ ಮನೋಭಾವವಿರಬೇಕು. ಮೊದಲೆರಡು ಅಂಶಗಳು ನಮ್ಮ ಅಧೀನದಲ್ಲಿರದಿರಬಹುದು. ಆದರೆ ನಂತರದ ಎರಡು ಅಂಶಗಳು ನಮ್ಮ ಅಧೀನದಲ್ಲಿರುವುವು. ಪ್ರವಾಸವನ್ನು ಯಶಸ್ವಿಯಾಗಿಸುವುವು. ಈ ನಾಲ್ಕು ಅಂಶಗಳ ಎರಡು ಮುಖಗಳನ್ನು (ನಕಾರಾತ್ಮಕ ಸಕಾರಾತ್ಮಕ) ಈ ಪ್ರವಾಸದಲ್ಲಿ ಕಂಡೆವು.

ಮಳೆಯಲ್ಲಿ ನೆನೆದವರು ಬೆಟ್ಟದ ನೆತ್ತಿಯಲ್ಲಿ ನಿಂತಾಗ ಬೀಸಿ ಬಂದ ಗಾಳಿಯಲ್ಲಿ ನಡುಗಬೇಕಿತ್ತು. ಆದರೆ, ಬೆಟ್ಟ ಏರಿದ ಕಸರತ್ತಿನಿಂದಾಗಿ ದೇಹದಿಂದ ಹೊರಟ ಕಾವು ಹಿತಕರವಾಗಿತ್ತು. ಒಳಗಿನ ಕಾವು ಹೊರಗಿನ ಗಾಳಿ ಸೇರಿ ಐದೇ ನಿಮಿಷದಲ್ಲಿ ಬಟ್ಟೆಗಳು ಮೈಮೇಲೆಯೇ ಒಣಗಿ ಹೋಗಿದ್ದವು. ಯಾರದೋ ಭಿಕ್ಷೆ ಎಳ್ಳುಂಡೆ ತಿಂದು ಕಳಗಿಳಿಯಲು ತೊಡಗಿದಾಗ ಸೂರ್ಯನಾಗಲೇ ನೆತ್ತಿಯಿಂದಿಳಿದು ಪಶ್ಚಿಮದ ಕಡೆಗೆ ವಾಲಿದ್ದ. ಹಾಗಾಗೀ ಮುಖಕ್ಕೆ ರಾಚಿದ್ದ ಎಳೆ ಬಿಸಿಲು - ಮಳೆ ಬಿಸಿಲಾಟಗಳ ಪರಿಣಾಮ ಎಲ್ಲರ ಮುಖದ ಮೇಲೆ ಎದ್ದು ಕಾಣುತ್ತಿತ್ತು. ಎಲ್ಲರದೂ ಒಂದೇ ಸ್ಥಿತಿ. ಕೆಂಪಗೆ ಸುಟ್ಟ ಮೋರೆ, ಕರ್ರಗಾದ ಮೂಗು. ತುಲಾರಾಮನ ಕೈಗಳಲ್ಲೊಂದು ಬೆಟ್ಟ ತಾವರೆ ಹೂ. ನಮ್ಮಿಬ್ಬರು ಮಹಿಳೆಯರಿಗೂ ಇತ್ತು 'ನಿಮ್ಮ ಮುಖ ನೋಡಲಂತೂ ಖುಶಿ ಇಲ್ಲ. ಹಿಂದಿನಿಂದ ಹೂವಿನ ಮುಖವಾದರೂ ಚೆನ್ನಿರಲಿ. ಹಳೇ ಹೂವನ್ನು ತೆಗೆದು ಇದನ್ನಿಡಿ.' ಎಂದ. ಅವನ ರಸಿಕತೆಗೆ ತಲೆ ದೂಗಿದ್ದೆವು. ಕ್ಯಾಂಪ್ ತಲುಪಿದ ಕೂಡಲೇ ಸುಟ್ಟ ಚರ್ಮಕ್ಕೆ ಏನಾದರೂ ಮದ್ದು ಮಾಡಬೇಕೆಂದು ನಿಶ್ಚಯಿಸಿದ್ದೇವು. ನಡೆದಿದ್ದ ನಮ್ಮಲ್ಲಿ ಹರಟೆಯು ನಡೆದಿತ್ತು.

ನಿನ್ನನೊಂದು ಪ್ರಶ್ನೆ ಕೇಳಬೇಕು, ಬೇಸರಿಸಬೇಡ. ಪ್ರವಾಸಕ್ಕೆಂದು ನೀನು ಒಬ್ಬಳೇ ಬಂದೆ. ನನ್ನಂತೆ ಗಂಡನ ಜೊತೆಯಿಲ್ಲದೆ-ಭಯವಾಗಲಿಲ್ಲವೇ? ದಾರಿಯಲ್ಲೆಲ್ಲೂ ಮನೆಗೆ ಕಾಗದ ಬರೆದಂತಿಲ್ಲ. ಎಲ್ಲರೂ ಫೋನ್‌ಗಾಗಿ ಓಡಾಡಿದರೂ ನೀನು ಮಾತ್ರ ಆರಾಮದಲ್ಲಿದ್ದೆ. ಪ್ರವಾಸದಲ್ಲಿ ಒಮ್ಮೆಯಾದರೂ ಮಕ್ಕಳ ಗಂಡನ ಬಗ್ಗೆ ಕಾತರ ತೋರಿಸಲಿಲ್ಲ. ನಿಜ ಹೇಳು ನಿನಗೆ ಮನೆಯ ಕಡೆ

ಚಿಂತೆ ಇರಲಿಲ್ಲವೇ?' ಎಂದು ಗೆಳತಿ ಮಂದಾಕಿನಿಯ ಪ್ರಶ್ನೆ ನನ್ನನ್ನು ನಾನೇ ವಿಮರ್ಶಿಸಿಕೊಳ್ಳುವಂತೆ ಮಾಡಿತು.

ದೆಹಲಿ ಬಿಡುವ ಮುನ್ನ ರಾತ್ರಿ ಮನೆಗೆ ಫೋನ್ ಮಾಡಿ ಎಲ್ಲರೊಡನೆ ಮಾತನಾಡಿದ ಮೇಲೆ ಒಮ್ಮೆಯಾದರೂ ಅವರನ್ನು ಪುನಃ ಮಾತನಾಡಿಸುವ ತವಕವಿರಲಿಲ್ಲ. ನೆನಪಾಗುತ್ತಿದ್ದುದು ನಿಜ. ಆದರದು ತವಕದಿಂದಾಗಿ ಅಲ್ಲ. ಅವರುಗಳು ಕಟ್ಟಿಕೊಟ್ಟಿದ್ದ ಸಾಮಾನುಗಳನ್ನು ಉಪಯೋಗಿಸುವಾಗ ಅವರಿಗೆ ಧನ್ಯವಾದ ಹೇಳುವ ಪರಿಯಾಗಿ. ಈ ಮನೋಭಾವಕ್ಕೆ ಕಾರಣಗಳು ಇದ್ದವು.

ಇಳಕಲು ಕೊರಕಲು ದಾರಿಯಲ್ಲಿ ನಡೆಯುವಾಗ ಶರೀರಕ್ಕೆ ಊರುಗೋಲಿನ ಆಸರೆ ಇದ್ದಂತೆ ಮನಸ್ಸಿಗೆ ಭಾಷೆಗಳ ಊರುಗೋಲಿತ್ತು. ಹೊಸ ಊರುಗಳಲ್ಲಿ ಹೊಸ ಜನರೊಡನೆ ವ್ಯವಹರಿಸಲು, ಅವರೊಡನೆ ನೇರವಾಗಿ ಸಂಪರ್ಕ ಬೆಳಸುವ ನಿಕಟ ಪರಿಚಯ ಮಾಡಿಕೊಳ್ಳುವ ಅವಕಾಶದ ಸದುಪಯೋಗವಾದದ್ದು ನನಗೆ ಕನ್ನಡವೇ ಅಲ್ಲದೆ ಹಿಂದಿ, ಇಂಗ್ಲಿಷ್ ಬರುತ್ತಿದ್ದದರಿಂದ; ತೆಲುಗು ಮತ್ತು ಗುಜರಾತಿಯಲ್ಲಿ ತಪ್ಪೋ ನೆಪ್ಪೋ ಮಾತನಾಡುತ್ತಿದ್ದುದರಿಂದ ಬುದ್ಧಿಗೆ ಊರುಗೋಲಾಗಿ ಕಂಡುದ್ದನ್ನು ತಿಳಿದು ಕೊಳ್ಳುವ ಕುತೂಹಲವಿತ್ತು. ಗೊತ್ತಿಲ್ಲದ ವಿಷಯವನ್ನು ಕೇಳಲು ಹೀನಾಯ ಭಾವನೆ, ಹಿಂಜರಿಕೆ ಇರಲಿಲ್ಲ. ಹೀಗಾಗಿ ಯಾವುದೇ ಗಳಿಗೆಯಲ್ಲೂ ಬೇಸರವಾಗಲಿ ಒಂಟಿತನವಾಗಲೀ ಕಾಡುವ ಸಂಭವವಿರಲಿಲ್ಲ. ಬೇಕೆಂದಾಗ ಏಕಾಂತತೆಗೂ ಅವಕಾಶವಿರುತ್ತಿತ್ತು. ಅಷ್ಟೇ ಅಲ್ಲದೆ ಬೆಳಗಿನಿಂದ ಬೈಗಿನವರೆಗೆ ಎಡೆ ಬಿಡದೆ ಕಾರ್ಯ ಕಲಾಪಗಳಿದ್ದು ರಾತ್ರಿಯಾದಂತೆ ಸುಖ ನಿದ್ರೆಯೊಳಗಿರುತ್ತಿದ್ದೆ.

ಗೆಳತಿಯ ಈ ಪ್ರಶ್ನೆಯಿಂದಾಗಿ ಇಂದು ಇಡೀ ಪ್ರವಾಸದ ಸಿಂಹಾವಲೋಕನ ಮಾಡಿದಾಗ ಗಮನಕ್ಕೆ ಬಂದ ಸಂಗತಿ ಇದು. ಈ ರೀತಿ ಕುಟುಂಬದವರೊಡನೆ ಯಾವುದೇ ರೀತಿಯ ಸಂಪರ್ಕವಿಲ್ಲದೆ, ಮಾಮೂಲಿ ದಿನಚರಿ ಇಲ್ಲದೆ, ರೇಡಿಯೋ, ಟಿ. ವಿ. , ದಿನಪತ್ರಿಕೆ ಇತ್ಯಾದಿಗಳ ಮೂಲಕ ಯಾವ ಸಮಾಚಾರವೂ ತಿಳಿಯದೆ ಒಬ್ಬರೇ ಇದ್ದರೆ ವ್ಯಕ್ತಿಗತ ಭಾವನೆಗಳ ಸಂಬಂಧಗಳ ಪೂರ್ವಾಗ್ರಹ ವಿಚಾರಗಳ ಅಭಿಪ್ರಾಯಗಳ ಗೋಜಲನ್ನು ಕಿತ್ತೊಗೆದು ಮನದಂಗಳವನ್ನೊಮ್ಮೆ ಸ್ವಚ್ಛಗೊಳಿಸುವ ಕಾರ್ಯ ನಡೆಸುವುದು ಸುಲಭ. ೩-೪ ವಾರದ ಈ ರಜೆ ನಿಜವಾದ ಅರ್ಥದಲ್ಲಿ, ಪ್ರತಿಯೊಬ್ಬ ನಾಗರಿಕನ ಜೀವನದಲ್ಲಿ ಎರಡು ಮೂರು ಸಲ ಬೇಕೇ ಬೇಕು. ಈ ಅವಧಿಯಲ್ಲಿ ಶರೀರ ಶುದ್ಧಿಯಲ್ಲದೆ ಭಾವ ಶುದ್ಧಿಯೂ ಆಗುವುದು. ಶರೀರಕ್ಕೆ ಹೊಸತನ ಬಂದಂತೆ ಭಾವನೆ ವಿಚಾರಗಳ ಪುನರ್ವ್ಯವಸ್ಥೆಯಾಗಿ ಸ್ವಭಾವದಲ್ಲೂ ಪಕ್ವತೆ ಕಾಣಬರಲು ಸಾಧ್ಯವಾಗುವುದು.

ನಮ್ಮ ಅಂದಾಜಿನ ಪ್ರಕಾರ ಆರು ಆರುವರೆ ದಿನದ ಚಾರಣ ಮುಗಿಯುತ್ತಿತ್ತು. ಆದರೆ, ದೈವಚಿತ್ತ ಬೇರೆ ಇತ್ತು. ೩ ಕಿ. ಮೀ. ಇಳಿತದ ಚಾರಣ ಮುಗಿಸಿ ಸಮತಟ್ಟಿಗೆ ಬಂದಿದ್ದೆವು. ತುಲಾರಾಮನ ಹಳ್ಳಿ, ಸಮ್ರಿ ಬಳಿ ಬಂದಿದ್ದೆವು. ದಾರಿಯಿಂದಲೇ ಅವನ ಮನೆ, ಮನೆಯೊಡತಿ ಕಂಡು ಬಂದರು. ಹೆಂಡತಿಗೆ ಕೈ ಬೀಸಿ ನಮ್ಮೊಡನೆ ಮುಂದೆ ಬಂದವನು ತನ್ನ ಮಾಮೂಲಿ ಚಾ ದುಕಾನು ಬಂದಾಗ ಮನಸೋತ ತುಲಾರಾಮು ` ಇದೇ ದಾರಿಯಲ್ಲಿ ಮುಂದೆ ಹೋಗಿ. ಮೂರು ಕಿ. ಮೀ. ಅಷ್ಟೇ. ಕ್ಯಾಂಪ್ ಸಿಗುತ್ತದೆ. ನಾನು ಹಿಂದಿನಿಂದಲೇ ನಿಮ್ಮನ್ನು ಸೇರಿಕೊಳ್ಳುತ್ತೇನೆ.' ಎಂದು ಬೆಂಚಿನ ಮೇಲೆ

ಕೂತೇಬಿಟ್ಟ. ಅದೇ ಚಾ ದುಕಾನು ಸಂಜೆಗೆ ಹೆಂಡದಂಗಡಿ ಆಗುವುದೆಂದು ನಂತರ ತಿಳಿದು ಬಂತು. ನಾವು ಅವನಿಗೆ ಕೈ ಬೀಸಿ ನಡೆದ ಹತ್ತೇ ನಿಮಿಷದಲ್ಲಿ ದಾರಿ ಕವಲೊಡೆಯಿತು.

ಯಾವುದು ಸರಿದಾರಿ? ಕೇಳಲು ಅಲ್ಲಾರೂ ಇಲ್ಲ. ಬಯಲು ನಾಡಿನವರ ಅಂದಾಜಿನಂತೆ ಅಗಲ ಕಾಲುದಾರಿಯ ಕವಲನ್ನು ಹಿಡಿದು ನಡೆದೆವು. ಅಲ್ಲಲ್ಲಿ ಇಳಿದೆವು, ಇಳಿಯುತ್ತಲೇ ಹೋದೆವು. ಬಹುದೂರದ ನಂತರ ಮುಂದೆಲ್ಲೋ ಏರಲು ತೊಡಗಿದೆವು. ಇಷ್ಟು ಹೊತ್ತು ಕಷ್ಟ ಪಟ್ಟಿದ್ದೆಲ್ಲ ವ್ಯರ್ಥವೆನ್ನುವಂತೆ ಏರುವುದು ಇಳಿಯುವುದು ನಡೆದೇ ಇತ್ತು. ಅದು ಎದುರಿನದೇನೂ ಕಾಣಿಸದಂತಹ ಗಿಡಮರಗಳ ಪೊದೆಗಳಲ್ಲಿ ನುಸುಳಿದ್ದ ದಾರಿಯಲ್ಲಿ . ತುಲಾರಾಮ ಹೇಳಿದ್ದ ಸೀದಾ ರಾಸ್ತ ( ಸಮತಟ್ಟಿನ ದಾರಿ) ಎಲ್ಲಿ ಹೋಯಿತು?

ಈ ದಾರಿಯಂತೂ ಯಾವುದಾದರೂ ಹಳ್ಳಿಗೆ ಹೋಗಲೇ ಬೇಕಲ್ಲ. ಅಲ್ಲಿ ಕೇಳಿದರಾಯಿತು ಎಂದು ಹಲ್ಲು ಕಚ್ಚಿ ಏರಿದ್ದೆವು ಕುಕ್ಕರಿಸಿ ಕುಳಿತಿದ್ದೆವು. ಇಳಿದಿದ್ದೇವು. ಸೂರ್ಯ ದಿಗಂತದೆಡೆಗೆ ಇಳಿದಂತೆಲ್ಲಾ ಬೆಟ್ಟದ ಕರಿನೆರಳು ಏರುತ್ತಾ ನಡೆದಿತ್ತು. ಕಾಲಲ್ಲಿ ನಡುಕ ಕೈಯಲ್ಲಿ ಹಸಿ ಮರ ಬಳ್ಳಿಗಳ ಅಂಟು, ಎದೆಯಲ್ಲಿ ಕಳವಳ, ತಲೆಯಲ್ಲಿ ಅಸಾಧ್ಯ ನೋವು. ಪಕ್ಕದಲ್ಲಿ ಸರಸರ ಸದ್ದಿನೊಂದಿಗೆ ಕೊಂಬಿನ ತಲೆಯೊಂದು ಹೊರಬಂದು ತನ್ನ ದಾರಿಯನ್ನು ವೀಕ್ಷಿಸಿತ್ತು. ಅಲ್ಲಿ ನಾವಿದ್ದುದನ್ನು ಪಕ್ಕದಲ್ಲೇ ಸವರಿಕೊಂಡು ಹೋಯಿತು. ಅದರ ಹಿಂದೆಯೇ ಹಿಂಡಿನ ಇತರ ಆಕಳು ಬಂದು ಹೋದವು. ಆ ಬೆಟ್ಟದಲ್ಲಾಗಲೇ ಗೋದುಳಿ ಲಘ್ನವಾಗಿತ್ತು. ಗೋವುಗಳೆಲ್ಲ ಮನೆ ಸೇರುತ್ತಿದ್ದವು. ನಾವಿನ್ನು ಅಂಡಲೆಯುತ್ತಿದ್ದೆವು. ಮಂದೆಯ ಹಿಂದೆ ಬಂದ ಹತ್ತು ವರ್ಷದ ಹುಡುಗ ಕೈ ಜೋಡಿಸಿ ನಕ್ಕ- ದನಗಳು ಮೇಯುವ ಬೆಟ್ಟದ ಮಗ್ಗುಲಿನ ದಾರಿಯಲ್ಲೇಕೆ ಬಂದಿರಿ? ಬೆಟ್ಟದ ಮೇಲೆ ಸೀದಾರಾಸ್ತ ಇತ್ತಲ್ಲ?- ಎಂದ ಇನ್ನೊಮ್ಮೆ ಸೀದಾರಾಸ್ತ ಎಂಬ ಪದ ಕೇಳಿದರೆ ಹುಚ್ಚರಾಗುವವರಿದ್ದೆವು-ಆಗ!

ತೂರಾಡುತ್ತ ಸಿರ್ಖಾ ಶಿಬಿರವನ್ನು ತಲುಪಿದಾಗ ಕೈ ಕೈ ಹಿಸುಕಿಕೊಳ್ಳುತ್ತಾ ನಿಂತಿದ್ದ ತುಲಾರಾಂ ಸಿಂಗ್. ಅವನ ವಿವರಣೆ `ನೇರ ದಾರಿ ಎಂದಿದ್ದೇನಲ್ಲ ಕೆಳಗಿನದೇಕೆ ಹಿಡಿದೀರಿ? ಅದು ದೊಡ್ಡದಿತ್ತು ಸರಿ. ದನಗಳು ದಿನಕ್ಕೆರಡು ಬಾರಿ ಉಪಯೋಗಿಸಿ ಅಗಲವಾಗಿದೆ. ನಾವು ಮನುಷ್ಯರು ನಡೆಯುವುದು ಅಥವ ಗುಂಪಿನಲ್ಲಿ ಒಬ್ಬರ ಹಿಂದೆ ಒಬ್ಬರೇ ನಡೆಯುವುದರಿಂದ ಕಾಲು ದಾರಿಯಂತೆ ಕಾಣುವುದೇ ಸರಿದಾರಿ.' ನಾವು ಅಷ್ಟು ತಿಳಿಯದ ಹೆಡ್ಡರೆಂಬಂತೆ ನಕ್ಕು ಆ ಪ್ರಸಂಗಕ್ಕೆ ತೆರೆ ಎಳೆದಿದ್ದ ನಮ್ಮಂತೆಯೇ ಮತ್ತೊಂದು ರೀತಿಯಲ್ಲಿ ಹೆಡ್ಡಿ ಯಾದವರು ಸುಧಾ. ಮಕ್ಕಳ ಮಾತನ್ನು ಹಗುರವಾಗಿ ಪರಿಗಣಿಸುವ ಅಭ್ಯಾಸದ ಬಯಲು ಸೀಮೆ ಅವರಂತೆ ಸುಧಾ ಸರಿದಾರಿ ತೋರಿದ ಮಕ್ಕಳ ನಗುವನ್ನು ಲೇವಡಿ ಎಂದು ತೀರ್ಮಾನಿಸಿ ಮೇಲೇರುವ ದಾರಿ ಹಿಡಿದರು. ಬೆಟ್ಟದ ನೆತ್ತಿ ಏರಿ ಚಕ್ರ ಭೀಮನ ಕೋಟೆಯಂತಿದ್ದ ಕೋಸಿನ ತೋಟದೊಳಗೆ ಹೊಕ್ಕರು. ಅಲ್ಲಿಂದ ಹೊರ ಬರಲು ತಿಳಿಯದೆ ಅಲ್ಲಲ್ಲೇ ಸುತ್ತಿತ್ತಿದ್ದರಂತೆ. ಕೆಳಗಿನ ಸಿರ್ಖಾ ಶಿಬಿರದಿಂದ ನೋಡಿದವರು ಅವರು ತೊಟ್ಟಿದ್ದ ಹಳದಿ ಉಡುಪನ್ನು ಗುರುತಿಸಿ ಹತ್ತಿ ಬಂದು ಬೇಲಿ ಹಾರಿ ಹೊರ ಬರಲು ಸಹಕರಿಸಿ ಶಿಬಿರಕ್ಕೆ ಕರೆ ತಂದಿದ್ದರು.

ಇಂದು ನಾವು ಏಳೆಂಟು ಮಂದಿ ಅನಗತ್ಯವಾಗಿ ನಡೆದು, ಅದು ಬೆಟ್ಟ ಇಳಿದು ಹತ್ತಿ ಇಳಿದು ಹೋಗಿದ್ದ ದಾರಿಯಲ್ಲಿ ವ್ಯರ್ಥಶ್ರಮ ಪಟ್ಟು, ಹೊಸದೊಂದು ವಿಷಯ ಅರಿತೆವು. ಬೆಟ್ಟದ

ಬಾಳು ಬೇರೆ ಬಯಲಿನ ಬಾಳು ಬೇರೆ. ಒಂದರ ತರ್ಕ ವಿವರಣೆ ಮತ್ತೊಂದಕ್ಕೆ ಅನ್ವಯಿಸಲಾಗದು. ಪ್ರವಾಸದ ಪೂರಾ ಇಂತಹ ಪಾಠಗಳು ಅದೆಷ್ಟೋ! ಪರಿಸರವನ್ನು ಅನುಸರಿಸಿ ಜೀವನ ಕ್ರಮ, ಜೀವನಕ್ರಮವನ್ನು ಅನುಸರಿಸಿ ಸಂಸ್ಕೃತಿ, ಆ ಸಂಸ್ಕೃತಿಯನ್ನು ಅನುಸರಿಸಿ ಸೌಂದರ್ಯದ ಪರಿಕಲ್ಪನೆ. ಆಯಾ ಪರಿಸರದಲ್ಲಿ ಆಯಾ ಸಂಸ್ಕೃತಿಗಳೇ ಶ್ರೇಷ್ಠ, ಆಯಾ ರೀತಿಗಳೇ ಉತ್ತಮ. ಹಾಗಾಗಿ ಒಬ್ಬನ ಸಂಸ್ಕೃತಿಯನ್ನು ಅವನ ಸಭ್ಯತೆಯನ್ನು ಮತ್ತೊಂದು ಸಂಸ್ಕೃತಿಯ ಮೇಲೆ ಹೇರುವುದು ಯಾವ ನ್ಯಾಯ? ಪ್ರತಿ ಜನಾಂಗವು ತನ್ನದೇ ಲೋಕವೊಂದನ್ನು ಸೃಷ್ಟಿಸಿಕೊಳ್ಳುತ್ತದೆ. ಭೌತಿಕ, ಭಾವನಾತ್ಮಕ, ಧಾರ್ಮಿಕ, ಸಾಂಸ್ಕೃತಿಕ ಮಗ್ಗಲುಗಳ ಲೋಕವನ್ನು ನಿರ್ಮಿಸಿಕೊಳ್ಳುತ್ತದೆ. ಅಂತಹ ಒಂದೆರಡು ವಿಭಿನ್ನ ಲೋಕಗಳ ಒಳಹೊಕ್ಕು ನೋಡುವ, ಅನುಭವಿಸುವ ಕಾರ್ಯ ನಡೆದಾಗ ಜನಾಂಗ ನಿರ್ಮಿತ ಲೋಕಗಳ ಹೊರಗೆ ನಡುವೆ ನಿಜವಾದ ಲೋಕದ ಪಕ್ಷಿನೋಟವಾಗಬಹುದು. ನಮ್ಮ ಕಣ್ಣು ಮನ ತೆರೆದಿದ್ದು ಬುದ್ಧಿ ಜಾಗರೂಕವಾಗಿದ್ದರೆ. ಅದಾದರೆ ನಮ್ಮ ಚೇತನವು ಅನಿಕೇತನವಾಗಿ ವಿಶ್ವ ಮಾನವನಾಗುವುದು. ಇಲ್ಲವಾದರೆ ಎಲ್ಲವನ್ನೂ ನಮ್ಮದೇ ಲೋಕದ ಅಂದಾಜಿನಲ್ಲಿ ನಮ್ಮ ಮೂಗಿನ ನೇರಕ್ಕೆ ಅಳೆಯುತ್ತಾ ಕೂಪ ಮಂಡೂಕಗಳಾಗುತ್ತೇವೆ. ಎಷ್ಟೇ ದೇಶಕೋಶ ಪರ್ಯಟನೆ ಮಾಡಿದರೂ ನಮ್ಮದೇ ಲೋಕದ ಬಂದಿಗಳಾಗುತ್ತೇವೆ.

ಇವತ್ತು ಸಿರ್ಖಾ ಶಿಬಿರದಿಂದ ಹೊರಟವರು ಪಾಂಗು, ತವಘಾಟ್ ದಾಟಿ ಧಾರ್ಚುಲಾ ಶಿಬಿರದಲ್ಲಿ ರಾತ್ರಿ ತಂಗುವವರಿದ್ದೇವು. ಹೋಗುವಾಗ ನಾರಾಯಣಾಶ್ರಾಮದ ಮಾರ್ಗವಾಗಿ ಹೋಗಿದ್ದು ಇಂದಿನ ಸಿರ್ಖಾ ಪಾಂಗು ಹಾದಿಯನ್ನು ಚಾರಣದ ಕೊನೆಯ ದಿನ ಕಡೆಯ ಚಾರಣದಲ್ಲಿ ಮೊದಲ ಬಾರಿಗೆ ತುಳಿಯುವವರಿದ್ದೇವು.

ಒಂದು ತಿಂಗಳ ಚಾರಣ-ಪ್ರವಾಸದ ದಣಿವು ಎಲ್ಲರ ಮುಖದಲ್ಲಿದ್ದರೂ ಅಭ್ಯಾಸಬಲದ ಮೇಲೆ ನಡೆದಿದ್ದೇವು. ಗಗನಚುಂಬಿ ವೃಕ್ಷಗಳ ನೆರಳಿನಲ್ಲಿ ಸಿರ್ಖಾ ಪಾಟಿಂಟ್‌ನತ್ತ ಏರುತ್ತಾ ಹೋದಂತೆ ಇಡೀ ಪ್ರವಾಸದ ಸಿಂಹಾವಲೋಕನ ನಡೆದಿತ್ತು. ಹಾದಿ ಹರಟೆಯಲ್ಲಿ ಪ್ರವಾಸದ ರಸ ನಿಮಿಷಗಳನ್ನು ಮತ್ತೆ ಮತ್ತೆ ಮೆಲುಕುವುದು ಆಗಿತ್ತು. ಗಮನಾರ್ಹ ಸಂಗತಿ ಎಂದರೆ ಈ ಒಂದು ತಿಂಗಳಲ್ಲಿ ಈ ಒಂದು ತಿಂಗಳಲ್ಲಿ ಭಾರತದ - ಜಗತ್ತಿನ ಯಾವುದೇ ಸುದ್ದಿ ಸಮಾಚಾರ ನಮ್ಮನ್ನು ಮುಟ್ಟದೆ ನಮ್ಮದೇ ಚಿಕ್ಕ ಪ್ರಪಂಚವೊಂದು ರೂಪುಗೊಂಡಿತು. ಇದರ ವ್ಯಾಪ್ತಿ ೯-೧೦ ಕಿ. ಮೀ. ಗಳೊಳಗೆ ಶಿಬಿರದಿಂದ ಶಿಬಿರಕ್ಕೆ. ನಿನ್ನೆ ಈವತ್ತು ನಾಳೆಗೆ ಮಾತ್ರ ಸೀಮಿತವಾಗಿತ್ತು. ನಮ್ಮ ಈ ಪ್ರಪಂಚದ ಸುದ್ದಿಯಾದರೂ ದಾರಿಯಲ್ಲಾದ ಮಳೆ-ಮಂಜು-ಬಿಸಿಲು ಬೀಳುವುದು, ಎದ್ದು ಮುಂದೆ ನಡೆಯುವುದು, ಯಾರಿಗೆ ಎಲ್ಲಿ ಎಂತಹ ನೋಟ ಸಿಕ್ಕಿತು. ಇಷ್ಟೇ! ನಮ್ಮ ಚಟುವಟಿಕೆ ನಡೆಯುವುದು, ಉಣ್ಣುವುದು, ಹಾದಿಯಲ್ಲಿ ಅನುಭವಿಸಿದುದರ ಬಗೆಗೆ ಚಿಂತಿಸುವುದು. ಮತ್ತಾವುದೇ ದಿನ ನಿತ್ಯದ ಕಾರ್ಯಗಳಿಲ್ಲದೆ, ಪರಿಚಿತರ ಸಂಪರ್ಕವಿಲ್ಲದೆ ಮನಸ್ಸು ತಂತಾನೇ ಬಹುವೇಳೆ ಅಂತರ್ಮುಖಿಯಾಗಿರುತ್ತಿತ್ತು. ಈ ಚಿಕ್ಕ ಪ್ರಪಂಚದೊಳಗೆ ಇದೇ ಸಮಯದಲ್ಲೇ ಸುದ್ದಿ ಸಮಾಚಾರಗಳ ಪ್ರಪಂಚವನ್ನು ಮೀರಿದ ಕಾಲದೇಶದ ಎಲ್ಲೆ ಇಲ್ಲದ ವಿಶ್ವ ಪ್ರಪಂಚವೊಂದು ಇರುವುದು ಮನವರಿಕೆಯಾಗಿತ್ತು.

ಈ ಒಂದು ತಿಂಗಳಲ್ಲೇ ವಿಶಾಲ ಹಿಮಾಲಯದ ಅಡ್ಡಗಲವನ್ನು ಎರಡು ಬಾರಿ ಅಳೆದಿದ್ದೆವು.

ನನ್ನ ಚಿಂತನೆ ಕುಮಾವ್ ಜಿಲ್ಲೆಯನ್ನಷ್ಟೇ ಅಲ್ಲದೆ ವಿಶಾಲ ಹಿಮಾಲಯ, ಅದರ ಆಚೆಗಿನ ಟಿಬೆಟ್, ಹಿಂದೆ ನೋಡಿದ್ದ ಇತರ ದೇಶಗಳನ್ನು ಹಾದು ಹೋಗಿತ್ತು. ಕೇವಲ ಮೂವತ್ತು ದಿನಗಳ ಅವಧಿಗೆ ಸೀಮಿತವಾಗದೆ ೧೦೦ ಕೋಟಿ ವರ್ಷಗಳ ಹಿಂದೆ ಸರಿದುದ್ದೇ ಅಲ್ಲದೆ ಮಾನವ ಇತಿಹಾಸದಲ್ಲೂ ಇಣುಕಿತ್ತು. ವಿಶ್ವ ಪ್ರಪಂಚದಲ್ಲಿನ ಸಾಧ್ಯತೆ ಊಹಿಸಿತ್ತು. ಸಿರ್ಖಾ ಪಾಯಿಂಟ್‌ನಲ್ಲಿ ನಿಂತು ಸುತ್ತಲೂ ಹರಡಿದ್ದ ಹಿಮಾಲಯ ಶ್ರೇಣಿಗಳ ಮೇಲೆ ಬಿಸಿಲಿನಾಟವನ್ನು ನೋಡಿದಾಗ ಹಿಮಾಲಯದ ರಮಣೀಯತೆಯನ್ನು ಬಟ್ಟಿ ಇಳಿಸಿ ಇಲ್ಲಿ ಚಿತ್ರಾಂಕಿತ ಮಾಡಿದಂತಿತ್ತು. ಇಲ್ಲಿನ ಕ್ಷಣಗಳು ನಮ್ಮ ಪ್ರವಾಸದ ಕಾಲವನ್ನೇ ಪ್ರತಿನಿಧಿಸುವ ಕ್ಷಣಗಳಾಗಿದ್ದವು. ಉತ್ತರಕ್ಕೆ ಎತ್ತರೆತ್ತರದ ಶಿಖರಗಳು. ದಕ್ಷಿಣಕ್ಕೆ , ಪೂರ್ವ ಪಶ್ಚಿಮಕ್ಕೆ ಅಲೆ ಅಲೆಯಾಗಿ ಇಳಿದಿದ್ದ ಬೆಟ್ಟ ಸಾಲುಗಳು. ಅದಕ್ಕೂ ಆಚೆ ದಕ್ಷಿಣ ದಿಗಂತದ ಧೂಳಿನ ಮುಸುಕಿನಲ್ಲಿ ತನ್ನ ಬೆಳಗಿನ ದಿನಚರಿಯಲ್ಲಿ ತೊಡಗಿರುವ ಭಾರತ ಜನಸಮುದಾಯ. ಕಾಲ ದೇಶಾತೀತದ ಹೊಸ್ತಿಲಲ್ಲಿ ನಿಂತು ಈ ಜನಸಮುದಾಯದ ಪರಿಮಿತ ಪ್ರಪಂಚವನ್ನು ಹೊರಗಿನಿಂದ ನೋಡುವ ವಿಚಿತ್ರ ಸನ್ನಿವೇಶ ಅನುಭವವದು.

ಪಾಂಗು ಹಳ್ಳಿಯ ಕಡೆಗೆ ಇಳಿದಿದ್ದ ದಾರಿಯಲ್ಲಿ ಮುಂದುವರೆದಂತೆ ಕಂದರಗಳು ದೈತ್ಯ ಗರಗಸವೊಂದು ಧರೆಯನ್ನು ಕೊಯ್ದು ಹೋಳುಗಳಾಗಿ ವಿಭಾಗಿಸಿದಂತೆ ಬಹು ಆಳದ ಇಕ್ಕಟ್ಟಿನ ಕಡಿದಾದ ಕಂದರಗಳು ಹಾದಿಯ ಬಲ ಬದಿಗೆ, ಮಣ್ಣು ಕೂಡ ನಿಲ್ಲಲಾರದ ಶಿಲಾಖಂಡಗಳ ಕಂದರಗಳು. ಕತ್ತಲೆಯಾದಮೇಲೆ ಅಥವಾ ಮಂಜು ಮುಸುಕಿದಾಗ ಈ ಹಾದಿಯಲ್ಲಿ ನಡೆಯುವುದು ವಿಪತ್ತನ್ನು ಆಹ್ವಾನಿಸಿದಂತೆ. ಮತ್ತೆ ಕೆಳಗಿಳಿದಂತೆ ಹಣ್ಣನ್ನು ಮಾರಲು ಬುಟ್ಟಿಯಲ್ಲಿಟ್ಟು ಕೊಂಡಿದ್ದ ಹುಡುಗರು ಮಹಿಳೆಯರು ಪಾಂಗು ಹಳ್ಳಿ ಸಮೀಪವಿರುವುದನ್ನು ಸೂಚಿಸಿದ್ದರು. ಒಂದೆರಡು ತಿರುವುಗಳ ನಂತರ ಪಾಂಗು ಹಳ್ಳಿ ಕಣಿವೆಯಲ್ಲಿ ಕಾಣಿಸಿತು. ಜನರ ಓಡಾಟವಿತ್ತು. ಹತ್ತಿರವಾದಂತೆ ಶಾಲೆಗಳಿಗೆ ಸಮವಸ್ತ್ರ ಧರಿಸಿ ಹೊರಟಿದ್ದ ಮಕ್ಕಳು, ಕರ್ಮಚಾರಿಗಳ 'ಓಂ ನಮಃ ಶಿವಾಯ'. ಪಾಂಗು ಶಿಬಿರದ ಹಿಂದಿದ್ದ ಶಾಲೆಯ ಗೋಡೆಗೊರಗಿ ಹತ್ತು ನಿಮಿಷ ದಣಿವಾರಿಸಿಕೊಂಡು ಮತ್ತೆ ದಾರಿ ಹಿಡಿದು ತವಾಘಾಟ್‌ಗೆ ಹೊರಟೆವು. ಥಾಣೇಧಾರ್ ಬೆಟ್ಟದ ನೆತ್ತಿಗೆ ಬರಲು ಐದು ಕಿ.ಮೀ.ನ ಸಮತಟ್ಟಿನ ಹಾದಿ. ನಂತರ ಐದು ಕಿ.ಮೀ.ನ ಇಳಿತ. ಹತ್ತಲು ಮೂರುವರೆ ಗಂಟೆಕಾಲ ತಗೆದುಕೊಂಡಿದ್ದ ಥಾಣೇಧಾರ್ ಇಳಿಯಲು ಕೇವಲ ಮುಕ್ಕಾಲು ಗಂಟೆ!.

ಬೆಟ್ಟವನ್ನಿಳಿದು ಡಾಂಬರು ರಸ್ತೆಗೆ ಬಂದವಳು ಕೈಲಾಸ ಮಾನಸ ಯಾತ್ರೆಯನ್ನು ಯಶಸ್ವಿಯಾಗಿ ಪೂರೈಸಿದ ಸಂತೋಷವನ್ನು ಹತ್ತಿಕ್ಕಲಾರದೆ ಕುಣಿದಾಡುತ್ತಾ ಸೇತುವೆಯ ಬಳಿಗೆ ಬಂದೆ. ಎಂಟು ಹತ್ತು ವರ್ಷದ ಹುಡುಗಿಯರಿಬ್ಬರು ಎದುರಾಗಿ ಓಂ ನಮಃ ಶಿವಾಯ ಎಂದು ನಮಿಸಿದರು. ಚಿಕ್ಕವಳನ್ನು ಹೆಗಲಿಗೇರಿಸಿ ದೊಡ್ಡವಳ ಹೆಗಲ ಮೇಲೆ ಕೈಗಳನ್ನಿಟ್ಟು ಕುಣಿಯುತ್ತಾ ಬಂದವಳ ಹಿಗ್ಗು ನೋಡಿದವರಿಗೆ ಶಿವಲೀಲೆ (ಹುಚ್ಚಿ)ಯಾಗಿ ಕಂಡಿರಬೇಕು. ಆದರೆ ಈ ಶಿವಲೀಲೆಯಲ್ಲಿ ಭಾಗಿಯಾಗಲು ಓಡಿ ಬಂದರು ಭೋಟಿಯಾ ಹುಡುಗರು. 'ಬೆಹನ್‌ಜಿ ಅಂದು ಕಾಲಾಪಾನಿಯಲ್ಲಿ ಕುಣಿದಂತೆ ನಮ್ಮೊಡನೆಯೂ ಒಂದೇ ಒಂದು ಬಾರಿ ಬಾ!' ಅರೆ! ಇವರಿಗೆಂತು ಗೊತ್ತಾಯಿತು ? ಸಾವಧಾನದಲ್ಲಿ ದಿಟ್ಟಿಸಿ ನೋಡಿದಾಗ ಹಲವು ಮುಖಗಳು ಪರಿಚಿತ. ಹಿಂದೆಯೇ ಓಡಿಬಂದ ಭವಾನಿ ಸಿಂಗ್ ಒಂಭತ್ತನೇ ತಂಡದ ಯಾತ್ರಿಗಳನ್ನು ಲಿಪುಲೇಖ್‌ಗೆ ಕರೆದೊಯ್ಯಲು ಸಿದ್ಧರಾಗಿ ನಿಂತಿದ್ದರು. ಕಾಲಾಪಾನಿಯಲ್ಲಿ ಮೈಚಳಿ ಬಿಟ್ಟು ಮನಸಾರೆ ಕುಣಿದವಳು ಜನ ಜಂಗುಳಿಯ ತವಾಘಾಟ್ ಚೌಕದಲ್ಲಿ ಆ ಭಾವವನ್ನು ಹೊಂದಲಾರದೆ ಹೋದೆ. 'ಅಯ್ಯೋ ಹೋಯಿತೆ ಆ ನಾಕ ಅಯ್ಯೋ

ಬಂದಿತೆ ಈ ಲೋಕ!' ನಿರಂತರವಾಗಿ ಶಿವಲೀಲೆಯಲ್ಲೇ ನಿಲ್ಲುವರ ಆನಂದ ಹೊಂದುವುದು ಬಿಡುವುದು ನಮ್ಮ ಕೈಯಲ್ಲೇ! ನಾನೆಂಬ ಮೈಚಳಿ ಬಿಡಬೇಕಷ್ಟೆ.

'ದೀದೀ ನೀನು ಕುಣಿದಾಡುವಷ್ಟು ಚೆನ್ನಿದೆಯೇ ಕೈಲಾಸ ಪರ್ವತ? ದೊಡ್ಡವಳಾದ ಮೇಲೆ ನಾನೂ ಹೋಗಿ ನೋಡುವೆ'. ಹತ್ತು ವರ್ಷದ ಹುಡುಗಿ ಶಾರದಾಳ ನಿರ್ಧಾರ ಕೇಳಿ ಇವಳ ಕಾಲಕ್ಕಾದರೂ ಭಾರತ ಟಿಬೆಟ್ ಗಡಿ ಮುಕ್ತವಾಗಿ ಪ್ರಯಾಣಿಸಲು ಅನುಕೂಲವಾಗಲೆಂದು ಹಾರೈಸಿದೆ.

ತವಾಘಾಟ್‌ನ ಅತಿಥಿಗೃಹದಲ್ಲಿ ನಮ್ಮ ಊಟದ ಏರ್ಪಾಡಾಗಿತ್ತು. ಬಹಳ ದಿನಗಳ ನಂತರ ಮಜ್ಜಿಗೆಯ ದರ್ಶನವಾಯಿತು. ಊಟಮಾಡಿ ಚೌಕಕ್ಕೆ ಬಂದರೆ ಧಾರ್ಚುಲಾ ತವಾಘಟ್ ರಸ್ತೆಯಲ್ಲಿ ಮಣ್ಣುಕುಸಿದು ವಾಹನ ಸಂಚಾರ ನಿಂತು ಹೋಗಿದ್ದ ಸುದ್ದಿ. ಕರೆದೊಯ್ಯುವ ಬಸ್ಸಿಗಾಗಿ ಕಾಯಬೇಕೆನ್ನುವುದು ಕೆಲವರ ಆಗ್ರಹವಾದರೆ ಒಂಭತ್ತು ಕಿ.ಮೀ.ನ ಸುಲಭ ಸುಂದರ ಮಾರ್ಗವನ್ನು ನಡೆದು ನೋಡುವ ಅವಕಾಶ ಬಿಡಬಾರದೆಂದು ಉಳಿದವರ ಒತ್ತಾಯ. ಮಣ್ಣುಕುಸಿದ ಸ್ಥಳದಲ್ಲಿ ಹಗ್ಗ ಕಟ್ಟಿಕೊಂಡು ದಾಟುವ ಸ್ಥಿತಿಗಾಗಿ ಹೆದರಿದ ಕೆಲವರ ಸಲುವಾಗಿ ನಾವು ತೆಪ್ಪನೆ ಕುಳಿತೆವು ಕಾಳೀ ನದಿಯ ದಂಡೆ ಮೇಲೆ ಬಸ್ಸಿಗಾಗಿ ಕಾಯುತ್ತಾ. ಬಸ್ಸಿನ ನಾಲ್ಕು ಚಕ್ರಗಳು ಹೋಗುವಷ್ಟು ಅಗಲ ಮಣ್ಣನ್ನು ಸವರಿ ತಾತ್ಕಾಲಿಕ ರಸ್ತೆ ಮಾಡಿ ಬಸ್ಸಿನಲ್ಲೇ ನಮ್ಮನ್ನು ಧಾರ್ಚುಲಾ ಶಿಬಿರಕ್ಕೆ ತಂದಿಳಿಸಿದಾಗ ಸಂಜೆ ಐದು ಗಂಟೆ.

ಒಂದು ತಿಂಗಳ ಒಡನಾಟದ ಗೆಳೆತನದಲ್ಲಿ ಮನ ಬಿಚ್ಚಿ ಮಾತುಕತೆ, ವಿಚಾರ, ಅಭಿಪ್ರಾಯ ವಿನಿಮಯ, ವಿಳಾಸ ವಿನಿಮಯ, ಹಣದ ಲೆಕ್ಕಾಚಾರ ಚುಕ್ತಾ ಎಲ್ಲವೂ ನಡೆದಿತ್ತು. ಕೈಲಾಸ ಮಾನಸ ಸರೋವರದ ಯಾತ್ರೆಯನ್ನು ಮಾಡುವ ಅವಕಾಶದ ಬಗೆಗೆ ಯಾತ್ರಿಗಳ ಪ್ರತಿಕ್ರಿಯೆ ವೈವಿಧ್ಯಮಯ. ಯಾರು ಯಾವುದಕ್ಕೆ ಪ್ರಾಮುಖ್ಯತೆ ಕೊಡುತ್ತಾರೆಂಬುದಕ್ಕೆ ಸಂಕೇತ.

- ಆ ಅದೃಷ್ಟ ನನಗಿದ್ದರೆ ಒಂದು ತಿಂಗಳಲ್ಲ ಒಂದು ವರ್ಷ ದೀರ್ಘ ಪ್ರವಾಸ ಮಾಡಿಯೇನು.

- ಮತ್ತೊಮ್ಮೆ ಯಾರಾದರೂ ಹಣವನ್ನು ಹೊಂದಿಸಿಕೊಟ್ಟರೆ ಮಾನಸ ತಡಿಯಲ್ಲಿ ಒಂದೆರಡು ತಿಂಗಳು ಇರುವಾಸೆ, ನಮ್ಮ ಕೈಲಿದೆಯೇ?

- ಐವತ್ತು ಸಾವಿರವಲ್ಲ ಐವತ್ತು ಲಕ್ಷ ರೂಪಾಯಿಕೊಟ್ಟರೂ ಆ ಸುಡುಗಾಡು ನಾಡಿಗೆ ನಾ ಹೋಗಲಾರೆ. ಒಂದು ಸಲದ ಅನುಭವ ನೂರು ಜನ್ಮಕ್ಕೆ ಸಾಕಾಗಿದೆ.

- ಮತ್ತೊಮ್ಮೆ ಅಲ್ಲಿಗೇ ಹೋಗುವ ಬದಲಿಗೆ ಹಿಮಾಲಯದಲ್ಲೇ ಬೇರೊಂದು ನಿಸರ್ಗ ಸುಂದರ ತಾಣದಲ್ಲಿ ಟೆಂಟ್ ಹಾಕಿ ನಿಲ್ಲುತ್ತೇನೆ. ಹೊಸದೊಂದು ಫೋಟೋ ಆಲ್ಬಮ್ ತಯಾರುಮಾಡುತ್ತೇನೆ.

- ಮಾನಸ ಸರೋವರ-ಕೈಲಾಸದ ಬೇಸಗೆಯ ವೈಭವವನ್ನು ನೋಡಿದಂತೆ ಚಳಿಗಾಲ,

ಹಿಮಗಾಲದ ವೈಖರಿಯನ್ನು ನೋಡುವಾಸೆ, ಚೀನಾ ಸರ್ಕಾರ ನಮ್ಮನ್ನು ಆ ವೇಳೆ ಬಿಡಲೊಪ್ಪಬೇಕಲ್ಲ!.

- ಶಂಕರ ದೇವನ ದರ್ಶನ ಬ್ರಹ್ಮ ಸರೋವರದಲ್ಲಿನ ಸ್ನಾನ ಎರಡೂ ಮನಃತೃಪ್ತಿಯಾಗುವಂತೆ ಮಾಡಿದೆ. ಜನ್ಮ ಸಾರ್ಥಕವಾಯಿತು. ಎಷ್ಟೋ ಜನ್ಮಗಳ ಪುಣ್ಯ ಹಿರಿಯರ ಆಶಿರ್ವಾದದಿಂದ ಯಾತ್ರೆ ಶುಭಪ್ರದವಾಯಿತು. ಅಷ್ಟು ಸಾಕು ಅತಿಯಾಸೆಯಿಲ್ಲ ನನಗೆ.

- ಕಂಡಕ್ಟೆಡ್ ಟೂರ್‌ನಲ್ಲಿ ಹೋಗಲಾರೆ, ಸ್ವಂತವಾಗಿ ಹೋಗಿ ಮನ ಒಪ್ಪಿದ ಕಡೆ ಬೇಕೇನಿಸಿದಷ್ಟು ನಿಂತು ಇಚ್ಛೆಬಂದೆಡೆ ಹೋಗುವ ಆಸೆ. ಪ್ರಾಕೃತಿಕ ವೈಶಿಷ್ಟ್ಯಗಳನ್ನು ಸುಂದರ ತಾಣಗಳನ್ನು ಕಂಡು ಬರುವಾಸೆ, ಸರ್ಕಾರಿ ಅನುಮತಿ ಸಿಕ್ಕರೆ ನನ್ನ ಜೀವಮಾನದ ಉಳಿತಾಯವೆಲ್ಲವೂ ಇದಕ್ಕೆ ಮುಡಿಪು.

- ನಮ್ಮ ಹತ್ತಿರ ಅಷ್ಟೊಂದು ಹಣ ಪಡೆದ ಚೀನೀ ಸರ್ಕಾರ ಯಾತ್ರಿಗಳಿಗೆ ಶೌಚಾಲಯ ಹಾಗೂ ಆಹಾರ ಸೌಲಭ್ಯಗಳನ್ನು ಒದಗಿಸಬೇಕಿತ್ತು. ಅಧಿಕ ಹಣ ತೆತ್ತು ಕನಿಷ್ಠ ಸೌಲಭ್ಯವೂ ಇಲ್ಲದ ಪ್ರವಾಸ ಇನ್ನೊಮ್ಮೆ ಮಾಡಲಾರೆ.

- ನೇಪಾಳದ ಕಡೆಯಿಂದ ಹೋಗುವವರು ಮಾಡುವಂತೆ, ಒಂಭತ್ತು ದಿನಗಳ ಕಾಲ್ನಡಿಗೆಯ ಬದಲಿಗೆ ವಿಮಾನದಲ್ಲಿ ಹೋಗಿಬರುವ ಹಾಗಿದ್ದರೆ ಚೆನ್ನ. ಮೈ ಕೈಕಾಲು ನೋಯಿಸಿಕೊಂಡು ಹೋಗುವ ಹುಚ್ಚು ಕೆಲಸ ಮತ್ತೊಮ್ಮೆ ಮಾಡುವುದಿಲ್ಲ. ವಿಜ್ಞಾನ ಮುಂದುವರಿದ ಈ ದಿನಗಳಲ್ಲಿ ಹಿಪ್ಪಿಗಳಂತೆ ನಡೆದು ಹೋಗುವುದು ಪೆದ್ದುತನವೇ ಸರಿ.

- ಅರಿಯದೆ ಮೊದಲ ಸಲ ಹೋಗಿ ಗಂಡಾಂತರಗಳನ್ನು ದಾಟಿ ಬಂದವನು ಮತ್ತೆ ಮತ್ತೆ ಅವಕ್ಕೆ ತಲೆಯೊಡ್ಡುವಷ್ಟು ಹೆಡ್ಡನಲ್ಲ. ಕುದುರೆಯಿಂದ ಬಿದ್ದಾಗ ಹೊಟ್ಟೆಗೆ ಏಟು ಬಿದ್ದು ಗುಲ್ಮಕ್ಕೆ ಪೆಟ್ಟಾಗಿ ಟಕಲಾಕೋಟ್‌ನಲ್ಲೇ ನರಳುತ್ತಾ ಮಲಗಿದ್ದ ಯಾತ್ರಿಯನ್ನು ನೋಡಿದೆಯಲ್ಲವೇ?. ಮೋಹಿನಿ ದೇವಿಯರು ಅನುಭವಿಸುತ್ತಿರುವ ನೋವು ಕಾಣುತ್ತಿದೆಯಲ್ಲವೇ? ಆ ಪಜೀತಿ ಯಾರಿಗೂ ಬೇಡ.

- ನೀವೆಲ್ಲಾ ಇಷ್ಟೊಂದು ಹಾಡಿ ಹೊಗಳುವಂತಹುದೇನೋ ಅಲ್ಲಿದೆಯೆನಿಸಲಿಲ್ಲ. ಅಲ್ಲಿಯ ಖಾಲಿತನವನ್ನು ನೋಡಲು ಮತ್ತೊಮ್ಮೆ ಅಲ್ಲಿಗೆ ಹೋಗುವುದು ಹುಂಬತನ.

ಆಶ್ಚರ್ಯಕರ ಸಂಗತಿ, ಎಲ್ಲರೂ ಒಟ್ಟಿಗೆ, ಒಂದೇ ಕಾಲದಲ್ಲೇ ಮಾಡಿದ ಪ್ರವಾಸಕ್ಕೆ ಕೆಲವರು ಹೆದರಿ ಹೈರಾಣಾದರೆ ಮತ್ತೆ ಕೆಲವರು ಅದೇ ಹುಮ್ಮಸ್ಸಿನಲ್ಲಿ ಮತ್ತೊಮ್ಮೆ ಅಲ್ಲಿಗೆ ಹೋಗಲು ತವಕಪಡುವರು. ಕೆಲವರಿಗೆ ಕೈಲಾಸ-ಮಾನಸ ಸರೋವರ ಪ್ರದೇಶ ಸುಡುಗಾಡಾಗಿ ಕಂಡರೆ, ಮತ್ತೆ ಕೆಲವರಿಗೆ ಅದೇ ಪ್ರದೇಶವನ್ನು ವರ್ಷದ ಎಲ್ಲ ಋತುಗಳಲ್ಲೂ ನೋಡುವ ಆಸೆ.

ಸೌಂದರ್ಯವಿರುವುದು ನೋಡುವವನ ಕಣ್ಣುಗಳಲ್ಲಿ, ದಿಟ. ಆ ಕಣ್ಣುಗಳೇ ಇಲ್ಲದೆ ಸೌಂದರ್ಯವೆಲ್ಲಿ? ಕಣ್ಣು ಕಂಡುದನ್ನು ಆನಂದಿಸುವ ಮನಸ್ಸು ಇರಬೇಕು. ನಿರ್ದಿಷ್ಟ ತರಂಗಾಂತರಕ್ಕೆ

ಹೊಂದಿಸಿದಾಗ ಮಾತ್ರ ರೇಡಿಯೊಂದಲ್ಲಿ ಬೇಕಾದ ಕಾರ್ಯಕ್ರಮ ಕೇಳಸಿಗುವಂತೆ ನಮ್ಮ ಮನಸ್ಸನ್ನು ಅನುಗೊಳಿಸಿದಾಗ ಮಾತ್ರ ಸೌಂದರ್ಯಾನುಭವ-ಆನಂದ ಸಾಧ್ಯ. ನೆಗಡಿ ಬಂದು ಮೂಗು ಕಟ್ಟಿಕೊಂಡಿರುವಾಗ ಮಲ್ಲಿಗೆಯ ಪರಿಮಳ ಏನೆಂತು ಗುರಿತಿಸುವುದು.

ಪ್ರತಿಮಾನವನಲ್ಲೂ ಪ್ರಕೃತಿ ಸೌಂದರ್ಯಾಸ್ವಾದನೆಯ ಒಳಗಣ್ಣು ಇರುವುದು. ನಿಸರ್ಗ ಸುಂದರ ರುದ್ರ ರಮಣೀಯ ಸ್ಥಳಗಳನ್ನು ತಲುಪಲು ಪಡಬೇಕಾದ ದೈಹಿಕ ಶ್ರಮ ಆಗುವ ಭಯ ಆತಂಕಗಳನ್ನು ಒತ್ತೊಟ್ಟಿಗೆ ಸರಿಸಿ ಅವುಗಳ ಹೊರನಿಂತು ಪರಿಸರವನ್ನು ನೋಡುವ ರೀತಿಯನ್ನು ಅರಿತರೆ ಈ ಒಳಗಣ್ಣು ತಾನಾಗಿಯೇ ತೆರೆದುಕೊಳ್ಳುವುದು. ಮನೋಭಾವವೂ ಉದ್ವೇಗ ರಹಿತವಾಗಿ ಸಮಾಹಿತವಾದರೆ ಆನಂದದ ಸೆಲೆ ಹಿಡಿಯುವುದು ಬಹುಸುಲಭ. ಇದರೊಂದಿಗೆ ಸಹೃದಯದ ಮನಸ್ಸಿನ ಮಿಡಿತವೂ ಮೇಳೈಸಿದರೆ ಕವಿಬ್ರಹ್ಮಾನಂದದ ಅನುಭವವಾಗುವುದಂತೂ ನಿಶ್ಚಿತ. ಪೂರ್ವ ಸಿದ್ಧತೆಯಾಗಿ ಈ ಸ್ಥಳಗಳ ಪ್ರಾಕೃತಿಕ ವೈಶಿಷ್ಟ್ಯ, ಪೌರಾಣಿಕ-ಐತಿಹಾಸಿಕ ಸಂಗತಿಗಳನ್ನು ಅರಿತಿದ್ದರೆ ಚಿನ್ನಕ್ಕೆ ಮೆರುಗಿಟ್ಟಂತೆ ಆನಂದದ ಪರಿಧಿ ವಿಸ್ತರಿಸುವುದು ಸ್ವಾನುಭವಕ್ಕೆ ಬಂದ ಸಂಗತಿ.

ಧಾರ್ಚುಲಾ ಶಿಬಿರದಲ್ಲಿ ರಾತ್ರಿ ಹತ್ತು ಗಂಟೆಯಾದರೂ ಹೊಸ ಹೊಸ ಸಲಹೆ ಸೂಚನೆಗಳು ಬರುತ್ತಲೇ ಇದ್ದವು. ನಿಗದಿತ ವೇಳೆಗಿಂತಲೂ ಒಂದು ದಿನ ಮುಂಚಿತವಾಗಿ ಧಾರ್ಚುಲಾ ತಲುಪಿದ್ದೆವಾಗಿ ಈ ಕಾಲಾವಕಾಶವನ್ನುಪಯೋಗಿಸಿ ಇನ್ನಾವುದಾದರೂ ಪ್ರವಾಸೀ ಸ್ಥಳವನ್ನು ಸಂದರ್ಶಿಸುವ ಬಗ್ಗೆ ನಾಲ್ಕೈದು ಜನರಿಂದ ವಿನಂತಿಗಳೂ ಬಂದವು. ಆದರೆ ಒಂದು ತಿಂಗಳ ಪ್ರವಾಸದಿಂದ ದೇಹ ಮನಸ್ಸು ಎರಡೂ ದಣಿದಿದ್ದು ಆದಷ್ಟು ಬೇಗ ಮನೆ ಸೇರುವ ಆತುರ ಅನೇಕರಲ್ಲಿತ್ತು. ಇಬ್ಬರು ಗುಂಜಿಯಲ್ಲೇ ವಿಶೇಷ ಅನುಮತಿಯನ್ನು ಪಡೆದು ಮೂರೇ ದಿನಗಳಲ್ಲಿ ಧಾರ್ಚುಲಾ ಸೇರಿದವರು ಅಲ್ಲಿಂದ ನೇರ ಮುಂಬಯಿಗೆ ಹೊರಟು ಹೋಗಿದ್ದರು. ಇನ್ನಿಬ್ಬರು ಧಾರ್ಚುಲಾದಿಂದಲೇ ಸ್ವಂತ ಖರ್ಚಿನಲ್ಲಿ ಟ್ಯಾಕ್ಸಿ ಮಾಡಿಕೊಂಡು ಖಾಟ್‌ಗೊಡಾಂಗೆ ಹೋಗಿ ಅಲ್ಲಿಂದ ರೈಲು ಹಿಡಿದು ಮಾರನೇ ದಿನವೇ ದಿಲ್ಲಿ ತಲುಪುವರಿದ್ದರು.

ಮನೆತನದ ಅತಿವೃದ್ಧ, ಜೀವನಾನುಭವಿ, ಲೋಕೋತ್ತರ ವ್ಯಕ್ತಿತ್ವದ ಹಿರಿಯರೊಬ್ಬರನ್ನು ದರ್ಶನಮಾಡಿ, ನಮಸ್ಕರಿಸಿ ಆಶೀರ್ವಾದ ಪಡೆದು, ಮನದಣಿಯೆ ಮಾತನಾಡಿಸಿ, ಸ್ವಸಂತೋಷಕ್ಕಾಗಿ ತೋಚಿದ ಉಡುಗೊರೆ ಕೊಟ್ಟು ಹಿಂದಿರುಗುವಾಗ ಇರುವ ಏನೋ ತುಂಬು ತೃಪ್ತಿ, ಹೆಮ್ಮೆ ಅವರಂತೆಯೇ ನಾವಾಗಬೇಕೆಂಬ ಹಾರೈಕೆ ಇರುವಂತೆ ಕೈಲಾಸ ಶಿಖರ ದರ್ಶನ ಮಾಡಿದ ಭಾರತೀಯಳಾದ ನನಗೂ ಅದೇ ತೃಪ್ತಿ, ಹೆಮ್ಮೆ, ನನ್ನ ಅಲೌಕಿಕ ಅನಂದ ನೂರ್ಮಡಿಯಾಗಿತ್ತು. ಕೈಲಾಸ-ಮಾನಸ ಸರೋವರದ ದರ್ಶನಾನಂತರ ಬೇರೆಲ್ಲಿಗಾದರೂ ಹೋಗುವ ಬಯಕೆಯಾಗಲೀ ಉತ್ಸಾಹವಾಗಲೀ ಈಗ ಇರಲಿಲ್ಲ. ಇದೇ ಭಾವನೆ ಬಹುಮಂದಿಯಲ್ಲಿತ್ತಾಗಿ ಮೊದಲೇ ನಿಶ್ಚಯಿಸಿದಂತೆ ಬಾಘೇಶ್ವರ-ಬೈಜನಾಥ-ಕೌಸಾನಿ-ನೈನಿತಾಲ್ ಮಾರ್ಗವಾಗಿ ಒಂದು ದಿನ ಮುಂಚಿತವಾಗಿಯೇ ತಲುಪುವುದೆಂದಾಯಿತು.

ಬೆಳಗ್ಗೆ ಎಂಟುಗಂಟೆಗೆ ಧಾರ್ಚುಲಾ ಬಿಟ್ಟವರು ಥಲ್-ಚೌಕೋರಿ ಮಾರ್ಗವಾಗಿ ಬಾಘೇಶ್ವರದ ಸಂಗಮ ಕ್ಷೇತ್ರವನ್ನು ತಲುಪಿದಾಗ ಮಧ್ಯಾಹ್ನ ಒಂದು ಗಂಟೆಯ ಸಮಯ. ಹುಲಿಯ

ರೂಪದಲ್ಲಿ ಪ್ರಕಟವಾದ ಶಿವ ಬಾಘೇಶ್ವರನ ದೊಡ್ಡ ದೇವಾಲಯದ ಒಂದು ಪಾರ್ಶ್ವದಲ್ಲಿ ನಿಂತು ನಿಂತು ಸಗುವ ಗೋಮತಿ ನದಿ, ದೇವಾಲಯದ ಮಗ್ಗುಲಿನ ಮೆಟ್ಟಿಲುಗಳನ್ನು ಮುತ್ತಿಡುತ್ತ ಹರಿಯುವ ಸರಯೂ ನದಿ, ಈ ಎರಡೂ ವಿಶಾಲ ನದಿಗಳು ದೇವಾಲಯದ ಹಿಂಭಾಗದಲ್ಲಿ ಸಂಗಮವಾಗಿ ಮತ್ತೂ ವಿಶಾಲವಾಗಿ ಸಾವಕಾಶದಲ್ಲಿ ಸರಯೂ ನದಿಯಾಗಿ ಹರಿದು, ಹಸಿರು ಬೆಟ್ಟಗಳ ನಡುವೆ ಕಣಿವೆಯಲ್ಲಿ ಸಾಗಿತ್ತು. ಮಧ್ಯಾಹ್ನದ ಇಳಿಬಿಸಿಲಿನಲ್ಲಿ ನೀರಿನ ವಿಸ್ತಾರವಾದ ಹರವು ತನ್ನೊಡಲಿಗೆ ಆಹ್ವಾನಿಸಿತ್ತು. ತಂಡದವರಾಗಿ ಬಂದಿದ್ದ ಕಾರಣ ನದಿಗೆ ಇಳಿವ ಅವಕಾಶವಿಲ್ಲದಾಗಿತ್ತು.

ಬಾಘೇಶ್ವರ ದೇವಾಲಯದೊಳಗೆ ಅಡಿಯಿಡುತ್ತಿದ್ದಂತೆಯೇ ಮತ್ತೆ ನದೀ ದಡಕ್ಕೇ ಓಡಿಹೋಗಬೇಕನಿಸುವಂತೆ ಅಲ್ಲಿ ಕವಿದಿದ್ದ ಕತ್ತಲೆ. ಅಮೂರ್ತವಾದುದನ್ನು ಅಮೂರ್ತವಾಗಿಯೇ ಕೈಲಾಸದಂಗಳದಲ್ಲಿ ಅನುಭವಿಸಿದವಳಿಗೆ, ಇಲ್ಲಿನ, ಸಂಗಮದಲ್ಲಿ ನಿಂತು ಅದೇ ಅನುಭವವನ್ನು ಮತ್ತೆ ಪಡೆದವಳಿಗೆ ದೇವಾಲಯದ ಒಳಗಿನ ಕತ್ತಲೆ ಉಸಿರುಗಟ್ಟಿಸಿತ್ತು. ಅಮೂರ್ತವಾದುದನ್ನು ಗಡಿಗಳಲ್ಲಿ ಅಲ್ಲಿ ಕವಿದಿರುವ ಕತ್ತಲೆಯಲ್ಲಿ ಹಣತೆ ದೀಪಗಳ ಬೆಳಕಿನಲ್ಲಿ ಕ್ರಿಯಾವಿಧಿಗಳ ಮೂಲಕ ಕಾಣುವ ಯತ್ನ ವಿಚಿತ್ರವೆನಿಸಿತು. ನದೀ ದಂಡೆಗೇ ಮರಳಿದಾಗಲೇ ಜೀವಕ್ಕೆ ಸಮಾಧಾನವಾದದ್ದು.

ಎರಡು ಗಂಟೆಗಳ ಬಸ್ ಪ್ರಯಾಣದ ನಂತರ ಕಾಟ್ಯೂರ್ ಕಣಿವೆಯ ಬೈಜನಾಥಕ್ಕೆ ಬಂದೆವು. ಕುಮಾವ್ ಮತ್ತು ಘಡವಾಲ್ ಪ್ರಾಂತಗಳನ್ನು ಐನೂರು ವರ್ಷಗಳವರೆಗೆ ಆಳಿದ ಕಾಟ್ಯೂರ್ ರಾಜವಂಶದವರ ರಾಜಧಾನಿಯಾಗಿದ್ದ ಬೈಜನಾಥದ ಮೊದಲಿನ ಹೆಸರು ಕಾರ್ತೀಕೇಯಪುರ. ಈ ನಗರವನ್ನು ಹಾದುಹೋಗುವ ಗೋಮತಿ ನದಿಯ ದಡದಲ್ಲಿನ ಬೈಜವಾಥ-ವೈದ್ಯನಾಥೇಶ್ವರನ ದೇವಾಲಯದೊಂದಿಗೇ ಪಾರ್ವತಿ ದೇವಿಯ, ಕಾರ್ತಿಕೇಯನ ದೇವಾಲಯಗಳೂ ಇವೆ. ೧೨-೧೩ನೇ ಶತಮಾನದಲ್ಲಿ ನಿರ್ಮಾಣಗೊಂಡ ಈ ದೇವಾಲಯಗಳೂ ವಾಸ್ತುಶಿಲ್ಪಶೈಲಿಯ ವಿಶೇಷ ನಮೂನೆಗಳು. ಒಳಗಿರುವ ವಿಗ್ರಹಗಳು ಸುಂದರವಾಗಿದ್ದು ಏಳುನೂರು ವರ್ಷಗಳಷ್ಟು ಹಳೆಯದೆನಿಸದೆ ಹೊಸತು ಹೊಳಪಿನದಾಗಿವೆ. ಇದೇ ಕಾರಣಕ್ಕಾಗಿ, ವಿಗ್ರಹಚೋರರ ಭಯದಿಂದಾಗಿ ದೇವಾಲಯದೊಳಗೆ ಕತ್ತಲೆಯ ಜೊತೆಗೆ ಕಬ್ಬಿಣದ ಜಾಲರಿಯ ಬಾಗಿಲುಗಳೂ ಸೇರಿ ಅದರಲ್ಲಿನ ಬೀಗ ನಮ್ಮನ್ನೆದುರುಗೊಳ್ಳುವುವು.

ದೇವಾಲಯದೊಳಗೆ ಹೇಗೇ ಇರಲಿ, ಅದರ ಹೊರ ಅಂಗಳದಲ್ಲಿ ಹರಿಯುವ ಗೋಮತಿ ನದಿಯ ತಿಳಿನೀರಿನಲ್ಲಿ ಈಜಾಡಿದ್ದ ದೊಡ್ಡ ಮಹಸೀರ್ ಮೀನುಗಳು, ದಡದಲ್ಲಿ ಎತ್ತರಕ್ಕೆ ವಿಶಾಲವಾಗಿ ಹರಡಿಕೊಂಡು ಬೆಳೆದು ನಿಂತಿದ್ದ ಮಹಾ ವೃಕ್ಷಗಳು, ಸುತ್ತಲೂ ಹಬ್ಬಿದ ಹಸಿರು ಮಲೆಗಳು ಇವೆಲ್ಲವನ್ನು ಹೊಚ್ಚಿರುವ ಶುಭ್ರನೀಲಾಕಾಶ ಎಲ್ಲವೂ ಅನಿಕೇತನನ ನಿಕೇತನಗಳಾಗಿ ಕಂಡವು. ಬೀಸಿದ್ದ ಗಾಳಿ ವಿಶ್ವಚೇತನದ ಕೇತನವಾಗಿತ್ತು.

ಮೇಲಿನಿಂದ ಕೆಳಗೆ ಬರುವಾಗ ಏನೆಲ್ಲಾ ಕಸ ಕಡ್ಡಿಗಳನ್ನು ಮಣ್ಣನ್ನು ಹೊತ್ತು ತಂದರೂ, ಜನ ವಸತಿಗಳನ್ನು ಹಾಯ್ದು ಬಂದರೂ ಕೊಳಕಾಗದ ನದಿಗಳು ಹಿಮಾಲಯದೊಡಲನ್ನು ಬಿಟ್ಟು ಬಯಲಿಗೆ ಬಂದೊಡನೇ ಹೊಲಸಾಗುವುದನ್ನು ಕಂಡು ಅಚ್ಚರಿಯಾಗುವುದು. ಪವಿತ್ರವೆನಿಸಿಕೊಂಡ ಋಷಿಕೇಶ, ಹರದ್ವಾರ, ಅಲಹಾಬಾದ್, ಕಾಶಿ, ಅಯೋಧ್ಯಾ ಮುಂತಾದ ಪ್ರಸಿದ್ಧ ನಗರಗಳಲ್ಲಿನ

ನದೀ ದಂಡೆಯಲ್ಲಿ ಹರಿಡಿರುವ ಹೊಲಸು, ನೀರಿನಲ್ಲಿ ತೇಲಿಬರುವ ಕಲ್ಮಶ ಪವಿತ್ರ ಭಾವನೆಯ ಬದಲಿಗೆ ಜಿಗುಪ್ಸೆ ತರುವುದು. ಆದರೆ ಹಿಮಾಲಯದಲ್ಲಿನ ಎಲ್ಲ ತೊರೆ ನದಿಗಳ ನೈರ್ಮಲ್ಯ ಯಾವುದೇ ಪ್ರಸಿದ್ಧ ದೇವಾಲಯವಿಲ್ಲದೆಯೇ ಅವುಗಳಿಗೇ ತಲೆ ಬಾಗುವಂತೆ ಪ್ರೇರೇಪಿಸುವುದು. ಇಲ್ಲಿನ ಪವಿತ್ರ ನಿರ್ಮಲ ಪ್ರಕೃತಿ ಪರಿಸರದಲ್ಲಿ ವಿಶ್ವದೇಹಿಯ ಸುಳುಹು ಬಹು ಸುಲಭವಾಗಿ ಸಿಗುವುದು.

ನಾಲ್ಕು ವಾರಗಳಿಂದ ಪ್ರಕೃತಿಯ ಮಡಿಲಲ್ಲಿ ಅರೇಳು ಗಂಟೆ ಕಾಲ ನಡೆದು ಸಾಗಿದ್ದವರಿಗೆ ದಣವೆನಿಸಿರಲಿಲ್ಲ. ಆದರೆ ಇಂದು ಬೆಳಿಗ್ಗೆ ಧಾರ್ಚುಲಾದಿಂದ ಬಸ್ಸಿನಲ್ಲಿ ಹೊರಟವರು ಸುಸ್ತಾಗಿ ಹೋದೆವು. ಇಕ್ಕಟ್ಟಿನ ಜಾಗದಲ್ಲಿ ಕಟ್ಟಿಹಾಕಿದ ಅನುಭವ. ಮೊದಲ ದಿನ ನರ್ಸರಿ ಶಾಲೆಯಲ್ಲಿ ಕೂಡಿಟ್ಟ ಮಕ್ಕಳಂತೆ ಕೂತಲ್ಲೇ ಚಡಪಡಿಸಿದೆವು - ನಿದ್ದೆ ಹೋದೆವು, ಬೇಸರವನ್ನು ಕಳೆಯಲು ಅಳಿದುಳಿದ ತಿಂಡಿಗಳನ್ನು ತಿಂದು ಮುಗಿಸಿದೆವು, ಹಾಡಿದೆವು ಹರಟಿದೆವು. ನಡಿಗೆಯಲ್ಲಿ ಎಂತಹ ಸೊಗವಿದೆಯೆನ್ನುವುದು ಇಂದು ಮನದಟ್ಟಾಯಿತು. ಬಸ್ಸು ಕೌಸಾನಿ ಗಿರಿಧಾಮವನ್ನು ಬಳಿಸಾರಿದಂತೆ ಸಂಜೆಯಾಗಿತ್ತು. ಸೂರ್ಯ ಮುಳುಗಲು ಕೇವಲ ಅರ್ಧಗಂಟೆ ಉಳಿದಿತ್ತು. ಬಸ್ಸು ಕೌಸಾನಿ ಗಿರಿ ಪಂಕ್ತಿಯನ್ನು ಬಳಸಿ ಮೇಲೇರಿದಂತೆ ಉತ್ತರದಲ್ಲಿರುವ ತ್ರಿಶೂಲ, ನಂದಾದೇವಿ, ನಂದಕೋಟ್ ಪರ್ವತ ಹಿಮಶಿಖರಗಳು ಬಹಳ ಸಮೀಪದಲ್ಲೆಂಬಂತೆ ಸಂಜೆ ಬಿಸಿಲಿನಲ್ಲಿ ಚಿನ್ನದ ಗುಡ್ಡಗಳಾಗಿ ಥಳಥಳಿಸಿ ನಮ್ಮ ಕಣ್ಮನ ಸೆಳೆದರೆ ದಕ್ಷಿಣದ ಬಯಲಿಗೆ ಇಳದಿಳಿದು ಹೋಗಿದ್ದ ಗುಡ್ಡ ಬೆಟ್ಟಗಳು ಇತ್ತಲೂ ನೋಡಿ ಎಂದು ಗೋಗೆರೆಯುವಂತಿತ್ತು. ಸೂರ್ಯಾಸ್ತದ ಮನೋಹರ ದೃಶ್ಯಗಳಿಗಾಗಿಯೇ ಕೌಸಾನಿ ಪ್ರವಾಸಿಗರ ಅಚ್ಚುಮೆಚ್ಚಿನ ಗಿರಿಧಾಮವಾಗಿರುವುದು. ಸುಮಾರು ೬೪೦೦ ಅಡಿಗಳೆತ್ತರಕ್ಕೇರಿ ಕೆ.ಎಮ್.ವಿ.ಎನ್ ಪ್ರವಾಸೀ ಬಂಗಲೆಯಲ್ಲಿಳಿದು ಬಿಸಿಲು ಮಚ್ಚಿಗೆ ಏರಿ ನಿಂತಾಗ ಸೂರ್ಯಾಸ್ತಕ್ಕೆ ಕೇವಲ ಹತ್ತು ನಿಮಿಷಗಳಿದ್ದವು. ಈ ಹತ್ತು ನಿಮಿಷಗಳು ಸೂರ್ಯ ದಿಗಂತದಲ್ಲಿ ಕಣ್ಮರೆಯಾದ ಕ್ಷಣಗಳು ಹೇಮಮಯ. ಇಂದಿನ ಸಂಜೆಯೂ ಭಗವಾನನ ಕೃಪೆಯಾಗಿ ಅವನ ನಿರ್ಗಮನದ ಮೋಡಿಗೊಳಗಾಗಿದ್ದೆವು.

ಕೌಸಾನಿಯಿಂದ ಕಾಣುವ ಹಿಮ ಶಿಖರಗಳ ವೈಭವವನ್ನು ನೋಡುತ್ತಿದ್ದಂತೆಯೇ ನಮ್ಮ ಉದ್ಗಾರದಲ್ಲಿ ಕೈಲಾಸ ಶಿಖರವೇ ಮತ್ತೆ ಆವರಿಸಿತು. ಈಗೀಗ ಏನನ್ನು ಕಂಡರೂ ಆ ಶಿಖರಕ್ಕೆ ಆ ಸರೋವರಕ್ಕೇ ಅಲ್ಲಿಗೇ ಹೋಗಲು ಮನ ತುಡಿಯುತ್ತಿತ್ತು. ಕೈಲಾಸ-ಮಾನಸ ಸರೋವರ ಒಂದು ನಶೆಯಂತೆ ಮತ್ತಾವುದೂ ಕಾಣದು ರುಚಿಸದು. ಬೇರಾವುದೂ ಬೇಕಿಲ್ಲವೆಂಬ ಅಮಲು ಅನೇಕರ ತಲೆಗೇರಿತ್ತು.

ತಾಯಿತಂದೆಯರ ಪಾರ್ವತಿ ಪರಮೇಶ್ವರ ಪಾದದಲ್ಲೇ ವಿಶ್ವವನ್ನು ಕಂಡ ಗಣಪನಂತೆ ವರ್ಣನಾ ಮಾತ್ರದಿಂದಲೇ ಕೈಲಾಸ ಮಾನಸ ಪ್ರದೇಶವನ್ನು ಕುಳಿತಲ್ಲೇ ಅನುಭವಿಸಬಲ್ಲವರು ಅಲ್ಪ ಸಂಖ್ಯಾತರು. ನಾವು ಕಾರ್ತಿಕೇಯನ ಜಾಯಮಾನದವರು, ಸಶರೀರಿಗಳಾಗಿ ಕೈಲಾಸ-ಮಾನಸ ಸರೋವರಕ್ಕೆ ಹೋಗಿ ನೋಡಬೇಕೆಂದು ಶ್ರಮಪಟ್ಟವರು. ನಾವು ಇನ್ನೂ ಅದರ ಗುಂಗಿನಲ್ಲಿಯೇ ಉಳಿದಿದ್ದು ಸಹಜವೇ.

ಸೂರ್ಯ ಮುಳುಗಿದಂತೆ ಕತ್ತಲಾವರಿಸಿ ಕೆಳಗಿನ ಕೌಸಾನಿ ಊರಿನ ಅಂಗಡಿ ಮನೆಗಳಲ್ಲಿ ದೀಪಗಳು ಬೆಳಗಿದವು. ಸಂಜೆ ಹೊನ್ನೂರಾಗಿದ್ದ ಕೌಸಾನಿ ಈಗ ಕನಸಿನೂರಾಗಿ ಬೆಳದಿಂಗಳ ಜೋಳಿಗೆಯಲ್ಲಿ ತೂಗಾಡುತ್ತಿತ್ತು. ಬೆಳದಿಂಗಳ ಬೆಳಕಿನಲ್ಲಿ ಮಿಂದು ಮೃದುವಾಗಿದ್ದ ಸುತ್ತಲಿನ ಬೆಟ್ಟಗಳು ಕೌಸಾನಿಗೆ ಮಧುರ ಮೌನ ಜೋಗುಳ ಹಾಡಿದ್ದವು. ರಾತ್ರಿಯ ಈ ನೀರವತೆ ಹೃದಯದ ಮಿಡಿತವನ್ನು ಮೌನವಾಗಿಸಿದ ಅನುಭವ. ವಾದ್ಯ ಮೇಳದ ಧ್ವನಿ-ಗತಿ ನಿಧಾನವಾಗಿ ಮೇಲೇರಿ ತೀವ್ರವಾಗಿ ತುದಿಮುಟ್ಟಿ ನಿಂತಾಗಿನ ತುಂಬು ಮೌನದಂತೆ ಒಂದು ತಿಂಗಳ ಪ್ರವಾಸದ ಕೊನೆಯ ಈ ರಾತ್ರಿಯ ಮೌನ ವಿಶೇಷವಾಗಿತ್ತು. ಮೌನ ಮುಕ್ತಾಯ ಹಾಡಿತ್ತು. ಬೆಳಗ್ಗೆ ಎಂಟು ಗಂಟೆಗೆ ಕೌಸಾನಿಯಿಂದ ಹೊರಟು ರಾಣೀಖೇಟ್ ಮಾರ್ಗವಾಗಿ ಸಿಗುವ ದೇವಾಲಯಗಳನ್ನು, ನಿಸರ್ಗ ಸುಂದರ ಸ್ಥಳಗಳನ್ನು ನೋಡುತ್ತ ನೈನಿತಾಲ್ ಸೇರಿದಾಗ ಮಧ್ಯಾಹ್ನ ನಾಲ್ಕು ಗಂಟೆ. ಇಲ್ಲಿನ ನೈನಾಪೀಕ್‌ನಲ್ಲಿರುವ ನೈನಾದೇವಿ ಮಂದಿರವನ್ನು ನೋಡಿ ಕೆಳಗಿಳಿದಾಗ ಸಂಜೆ ಆರರ ಸಮಯ. ಆಗಲೇ ದಟ್ಟಿಸಿದ ಮೋಡಗಳು ಆಗಸವನ್ನು ಬೂದು ಮಾಡಿದ್ದವು. ಅರ್ಧ ಗಂಟೆಯಲ್ಲಿ ಮಳೆ ಮುಸಲಧಾರೆಯಾಗಿ ಜಡಿಯಲಾರಂಭಿಸಿತು. ತಂಡದ ಅನೇಕ ಯಾತ್ರಿಗಳು ಮಾರುಕಟ್ಟೆಯ ಅಂಗಡಿಗಳಲ್ಲಿ ಚದುರಿಕೊಂಡಿದ್ದವರು ಎಲ್ಲಿದ್ದರಲ್ಲೇ ಅಂಗಡಿಗಳಲ್ಲಿ ಬಂದಿಯಾಗಿದ್ದೆವು. ನೈನಿತಾಲ್‌ನಲ್ಲೇ ಪುನಃ ಅಂಟಿಕೊಳ್ಳತೊಡಗಿದ ಮಾಮೂಲೀ ವ್ಯಾಪಾರೀ ಮನೋಭಾವದ ಜಿಗುಟನ್ನು ತೊಳೆಯಲೆಂಬಂತೆ ಮಳೆ ಸುರಿದರೂ ಎಲ್ಲರ ಕೈಯಲ್ಲೂ ಕೊಂಡ ಸಾಮಾನಿನ ಹೊರೆ. ಅದನ್ನು ಜತನ ಮಾಡಲು ಒದ್ದಾಟ. ಭಾಪುರೇ! ಲೌಕಿಕ ಬದುಕೇ, ನಿನ್ನಾಳ ಅರಿವುದೆಂತು? ನಿನ್ನಂಟು ಎಷ್ಟು ಗಟ್ಟಿ! ಸರಳವಾಗಿ ಬದುಕಲು ಸಾಧ್ಯ-ಸುಲಭವೆಂಬುದು ಸ್ವಾನುಭವಕ್ಕೆ ಬಂದರೂ ಮತ್ತೆ ಎತ್ತಿಕೊಂಡು ಹೊರೆಯ ಬದುಕು.

ಇಂದಿನ ಬಹುಭಾಗ ಬಸ್ಸಿನಲ್ಲಿ ಕುಳಿತು ೩೨೦ಕಿ.ಮೀ. ದಾರಿಯನ್ನು ಕ್ರಮಿಸಿ ದೆಹಲಿಯನ್ನು ಆಗಸ್ಟ್ ೩೦ರಂದು ತಲುಪಿದಾಗ ಸಾಯಂಕಾಲ ಐದು ಗಂಟೆ. ದೆಹಲಿಯ ಯಾತ್ರಿ ನಿವಾಸ್‌ದ ಅಂಗಳದಲ್ಲಿ ಯಾತ್ರಿಗಳನ್ನೆದುರುಗೊಳ್ಳಲು ಬಂದ ಜನ ಸಮೂಹ. ಇಡೀ ತಂಡವನ್ನು ಒಂದೇ ವ್ಯಕ್ತಿಯೆಂಬಂತೆ ಬರಮಾಡಿಕೊಂಡ ಬಂಧುಮಿತ್ರರ ಸಮೂಹ. ಬಸ್ಸಿನಿಂದಿಳಿದ ಒಬ್ಬೊಬ್ಬರನ್ನೂ ಕೈಹಿಡಿದಿಳಿಸಿ, ಕೈಗೆ ಹಾರ, ತಾಂಬೂಲ, ಪೇಡೆಗಳನ್ನಿತ್ತು ತಬ್ಬಿಕೊಂಡವರೆಷ್ಟೋ ಜನ. ವಯಸ್ಸು ಗಮನಿಸದೆ ಕಾಲ್ಮುಟ್ಟಿ ನಮಸ್ಕರಿಸಿದರೆಷ್ಟೋ ಜನ. ಮರುದಿನ ಮನೆಗೆ ಬಂದು ಆತಿಥ್ಯ ಸ್ವೀಕರಿಸಿ ಆಶೀರ್ವದಿಸಿರೆಂದು ಆಮಂತ್ರಿಸಿದವರು ಅನೇಕ ಮಂದಿ. ನಿಮ್ಮ ಯಾತ್ರೆ ಹೇಗಿತ್ತು? ನಿಮ್ಮ ಅನುಭವಗಳೇನು? ಎಂದು ಕುತೂಹಲದಿಂದ ಕೇಳಿದವರಿಗೆ ಉತ್ತರಿಸಲಾಗದ ಮನಃಸ್ಥಿತಿ. ವಿವಾಹದ ಮರುದಿನ ಮದುಮಗಳನ್ನು ಕೇಳಿದರೆ ಮೊದಲ ರಾತ್ರಿಯ ಅನುಭವವನ್ನೆಂತು ಬಣ್ಣಿಸಿಯಾಳು? ಕಣ್ಣ ಮಿಂಚು-ತುಟಿಯ ನಗೆ-ಕೆನ್ನೆ ಕೆಂಪು ಎಷ್ಟು ಹೇಳಿದರಷ್ಟೇ. ಮೊದಲ ಬಾರಿಗೆ ನಮ್ಮಿರವನ್ನೇ ಹೊತ್ತಿಸಿದ ಅಲೌಕಿಕವಾದೊಂದು ಅನುಭವ ಪಡೆದವರು ನಾವು ಏನು ಹೇಳಿಯೇವು? "ಅತ್ಯಾನಂದ ತಂದ ಯಾತ್ರಾನುಭವ, ಅನುಭವಿಸಿಯೇ ತಿಳಿಯಬೇಕು. ನಿಮಗೂ ಈ ಸದವಕಾಶ ಸಿಗಲೆಂದು ಹಾರೈಸುತ್ತೇವೆ." ಎಂದು ಕೈಮುಗಿದೆವಷ್ಟೆ.

# ಹಿನ್ನುಡಿ

ಕೈಲಾಸ - ಮಾನಸ ಯಾತ್ರಾ ಪ್ರವಾಸ ಹೊರಡುವ ನನ್ನ ನಿರ್ಧಾರ ಪ್ರಜ್ಞಾಪೂರ್ವ ಸ್ಥಿತಿಯಲ್ಲೇ ರೂಪಗೊಂಡಿದ್ದು, ಆಯ್ಕೆಗೊಂಡ ಸೂಚನಾಪತ್ರ ಓದಿದೊಡನೇ ಅರಿವಿಗೆ ಬಂದದ್ದು ಸೂರ್ಯೋದಯದಷ್ಟೇ ಖಚಿತವಾದ ನಿರ್ಧಾರ. ಅನಿಶ್ಚಯ ಚರ್ಚೆ-ವಾದಕ್ಕೆ ಆಸ್ಪದವಿಲ್ಲದೆ ಒಮ್ಮನದ ಇತ್ಯಾತ್ಮಕ ನಿರ್ಧಾರದಲ್ಲಿನ ಮನಶ್ಶಾಂತಿ ಮತ್ತು ಕಾರ್ಯ ಸ್ಪಷ್ಟತೆ ವಿಶೇಷ ರೀತಿಯದಾಗಿತ್ತು. ಪ್ರವಾಸ ಹೊರಡುವ ಸುದ್ದಿ ತಿಳಿದ ಬಂಧುಮಿತ್ರರದು ಹಲವು ತರಹೆಯ ಪ್ರತಿಕ್ರಿಯೆ.

- "ನಿನ್ನೊಬ್ಬಳಿಗೇ ಮೂವತ್ತಾರು ಸಾವಿರದಷ್ಟು ಖರ್ಚೇ? ನಾನಾದರೆ ಇದೇ ದುಡ್ಡಿನಲ್ಲಿ ಒಂದು ಒಡವೆ ಮಾಡಿಸುತ್ತಿದ್ದೆ."

- "ಕೈಲಾಸ- ಮಾನಸ ಸರೋವರ ಬರೀ ಪುರಾಣದಲ್ಲಿ ಬರುವ ಹೆಸರಲ್ಲವೇ? ನಿಜವಾಗಿಯೂ ಈ ಜಾಗ ಇದೆಯೇ? ಎಲ್ಲಿ? ಅದರ ಬದಲಿಗೆ ನೇಪಾಳ- ಹಾಂಗ್ ಕಾಂಗ್ ಅಥವಾ ಸಿಂಗಪುರ್ ನೋಡಿ ಬರಬಹುದಿತ್ತಲ್ಲ."

- "ಮಗನ ಪರೀಕ್ಷೆ ಸಮಯದಲ್ಲೇ ಹೊರಟಿರುವೆಯಲ್ಲ, ಅವನಿಗೆ ತೊಂದರೆಯಾಗುವುದಿಲ್ಲವೇ?"

- "ಒಂದು ತಿಂಗಳ ಕಾಲ್ನಡಿಗೆ ಪ್ರಯಾಣವೆನ್ನುತ್ತೀರಿ, ಒಬ್ಬರೇ ಹೊರಟಿರುವಿರೇಕೆ? ನಿಮ್ಮವರು ಒಪ್ಪಿ ಕಳಿಸುತ್ತಿರುವುದು ಆಶ್ಚರ್ಯ!"

- "ನೀವಿಬ್ಬರೂ ಜೊತೆಯಲ್ಲಿ ಯಾತ್ರೆ ಮಾಡಿದ್ದರೆ ಸಮವಿತ್ತು. ಮುಂದಿನ ವರ್ಷ ಒಟ್ಟಿಗೆ ಹೋಗಿ. ಈಗಲೇ ಹೋಗಬೇಕೆನ್ನುವ ಹಠವೇಕೆ?"

- "ನಿನ್ನನ್ನು ನೋಡಿದರೆ ಬೆಟ್ಟ ಗುಡ್ಡ ಹತ್ತಿ ಇಳಿಯುವ ತಾಕತ್ತಿರುವಂತಿಲ್ಲ. ಯೋಚಿಸು. ಮುಂಗಡ ಹಣ ಹೋದರೆ ಹೋಗಲಿ."

- "ಒಬ್ಬಳೇ ಹೋಗಿ ಬರುವ ಧೈರ್ಯ ಮಾಡಿರುವೆ. ಸಂತೋಷ. ಯಾತ್ರೆಗೆ ಹೊರಟವರನ್ನು ತಡೆಯುವುದು ಸಲ್ಲದು. ಕೈಲಾಸಪತಿಯ ದರ್ಶನವಾಗಲೆಂದು ಹಾರೈಸುವೆ."

- "ನಿಮಗೆ ಕೈಲಾಸ ಮಾನಸ ಪ್ರವಾಸದ ಅದೃಷ್ಟ ಖುಲಾಯಿಸಿದೆ. ಇಲ್ಲಿನದೆಲ್ಲವನ್ನು ಮರೆತು ಖುಷಿಯಾಗಿ, ಚಿಕ್ಕ ಹುಡುಗಿಯಾಗಿ, ನಿರಾತಂಕವಾಗಿ ಪ್ರವಾಸ ಎಂಜಾಯ್ ಮಾಡಿ ಬನ್ನಿ. ಬಂದ ಮೇಲೆ ದಿನದಿನದ ಅನುಭವಗಳನ್ನು ಹೇಳಲು ಸುಲಭವಾಗುವಂತಹ ದಿನಚರಿ

ಬರೆದಿಡಲು ಮರೆಯದಿರಿ. ಮರಳಿ ಬಂದು ನಮ್ಮನ್ನೂ "ಮಾನಸ ಪ್ರವಾಸ" ಮಾಡಿಸಿ."

ಎಲ್ಲ ನಕರಾತ್ಮಕ ಪ್ರತಿಕ್ರಿಯೆಗಳಿಗೆ ಮನಸ್ಸನ್ನು ಕುರುಡು ಕಿವುಡಾಗಿಸಿತ್ತು ನನ್ನ ಮೊಂಡುಧೈರ್ಯದ ಅಚಲ ನಿರ್ಧಾರ. ಇತರರನೇಕರಿಗೆ ಅಕಾಲವೆನಿಸಿದರೂ ನನಗೆ 'ಇದೇ ಸಕಾಲವೆನಿಸಿತು. ಅವಕಾಶ ಬಿಟ್ಟರೆ ಮುಂದೆಂದೂ ಈ ನಿರ್ಧಾರ ಮಾಡಲಾರನೆಂಬ ಅಂತರಾಳದ ಅನಿಸಿಕೆಯಿಂದಾಗಿ ಈ ಪ್ರವಾಸ ನನಗೆ 'ನಾನು' ಕೊಟ್ಟ ಉಪಹಾರ.

ದಹಲಿಯಲ್ಲಿ ಮೊದಲ ಪರಿಚಯವಾದ ತಂಡದ ಸದಸ್ಯರಲ್ಲಿ ಕೆಲವರು ಪವಿತ್ರ ಕ್ಷೇತ್ರದರ್ಶನಕ್ಕಾಗಿ ಪೂಜಾ ವಿಶೇಷ ಸಾಮಗ್ರಿಗಳೊಡನೆ ಹೊರಟ ಭಕ್ತಯಾತ್ರಿಕರಾದರೆ ಕೆಲವರು ಹಿಮಾಲಯದ ಸೀಮಾಂತ ಕ್ಷೇತ್ರದ ಪ್ರಕೃತಿಯನ್ನು ನೋಡಲು ಸಿಕ್ಕ ಅವಕಾಶವನ್ನು ಬಿಡಬಾರದೆಂದು ತಮ್ಮ ವಿವಿಧ ನಮೂನೆಯ ಕ್ಯಾಮರಾ, ಮೂವಿಕ್ಯಾಮರಾ ಹೊತ್ತು ಹೊರಟ ಛಾಯಾಗ್ರಾಹಕ ಟ್ರೆಕ್ಕರ್ಸ್ - ಚಾರಣಿಗರು. ಮೂರು ನಾಲ್ಕು ಮಂದಿ ನನ್ನಂಥವರು ಕ್ಷೇತ್ರ ಯಾತ್ರೆಯ ಅಥವಾ ಚಾರಣದ ಪೂರ್ವಾನುಭವವಿಲ್ಲದೆ, ಯಾತ್ರಾರ್ಥಿಯ ಪೂರ್ಣರೂಪದ ಭಕ್ತಿಯಾಗಲೀ ಚಾರಣಿಗನ ದೇಹದಾರ್ಢ್ಯ ಸಲಕರಣೆಗಳಾಗಲೀ ಇಲ್ಲದೆ, ಯಾವುದೇ ಪೂರ್ವಾಗ್ರಹವಿಲ್ಲದೆ, ನಿರೀಕ್ಷೆಯೂ ಇಲ್ಲದೆ 'ಖಾಲಿ ಹಾಳೆ' ಗಳಾಗಿ ಹೊರಟಿದ್ದೆವು. ಅಚ್ಛೋದ ಸರೋವರ - ಶಿವನ ಅಟ್ಟಹಾಸವನ್ನು ನೋಡುವ ಅಮೂರ್ತ ಕನಸಿನ ಬೆಂಬತ್ತಿ ಹೊರಟವಳು ನಾನು.

ನನ್ನ ಹಿಂದಿನ ಪ್ರವಾಸಗಳಲ್ಲಿದ್ದಂತೆ ಈ ಪ್ರವಾಸದಲ್ಲಿ ಬಂಧು ಮಿತ್ರರಾರು ಇಲ್ಲದೆ ಒಬ್ಬಂಟಿಯಾಗಿ ಹೊರಟವಳು. ಅಪರಿಚಿತ ಯಾತ್ರಿಕರ ತಂಡದಲ್ಲಿ ಮಾಡಿದ ಒಂದು ತಿಂಗಳ ಪಾದಯಾತ್ರಾ ಪ್ರವಾಸದ ಅನುಭವಗಳು ಅನನ್ಯ ಲಭ್ಯ. ವಿಭಿನ್ನ ಪರಿಸ್ಥಿತಿಗಳಲ್ಲಿ ಅನಿವಾರ್ಯ ಸಂದರ್ಭದಲ್ಲಿ ವ್ಯಕ್ತವಾಗುವ ಮಾನವ ಸ್ವಭಾವದ ವಿವಿಧ ಮಗ್ಗುಲುಗಳ ಪರಿಚಯ ಈ ಪ್ರವಾಸದಲ್ಲಾಯಿತು. ವ್ಯಕ್ತಿ ತಾನು ಪಡೆದ ಸಂಸ್ಕಾರಕ್ಕನುಗುಣವಾಗಿ ಪರಿಸ್ಥಿತಿಗೆ ಪ್ರತಿಕ್ರಿಯಿಸುವ, ತನ್ನ ಮೌಲ್ಯಗಳಿಗೆ ಒತ್ತು ಕೊಡುವ ರೀತಿಯ 'ಪ್ರದರ್ಶನ' ವಾಯಿತು. ಪ್ರವಾಸದ ದಿನಗಳು ಒಂದೊಂದೇ ಕಳೆದಂತೆ ಒಬ್ಬೊಬ್ಬರ ನಿಜರೂಪ ಹೊರಬಂದಿತ್ತು. ಕೆಲವರಿಗೆ ಎಲ್ಲರಿಗಿಂತ ಮೊದಲು ಶಿಖರವನ್ನು ತಲುಪಿ 'ಉತ್ತಮ' ಜಾಗ ಹಿಡಿಯುವ ಛಲ, ಅದಕ್ಕಾಗಿ ದುಡುದುಡು ಓಟವಾದರೆ ಕೆಲವರಿಗೆ ಸದಾ ಭಗವನ್ನಾಮಸ್ಮರಣೆ ಮಾಡುತ್ತ ಮನಸ್ಸನ್ನು ಅತ್ತಿತ್ತ ಹರಿಯಗೊಡದೆ 'ಏಕಾಗ್ರ ಚಿತ್ತ'ದಿಂದ ಯಾತ್ರೆ ಮಾಡಬೇಕೆಂಬ ದೈವ ಭಕ್ತಿಯ ಕಡಿವಾಣ. ಕೆಲವರಿಗೆ ಕುದುರೆ ಅಥವಾ ಯಾಕ್‌ನ ಸಹಾಯವಿಲ್ಲದೆ ಇಡೀ ಯಾತ್ರೆಯನ್ನು ಕಾಲ್ನಡಿಗೆಯಲ್ಲೇ ಮಾಡಿ ಪ್ರಶಸ್ತಿಪತ್ರಗಳಿಸುವ ಹೆಬ್ಬಯಕೆಯಾದರೆ ಕೆಲವರಿಗೆ ಹಣಕೊಟ್ಟ ಮೇಲೆ ನಡೆಯಬೇಕಿಲ್ಲವೆಂದು ಕೊಂಡರೂ ಕುದುರೆಯವ ಅಥವಾ ಯಾಕ್‌ನವ ಬಲವಂತದಲ್ಲಿ ಕೆಳಗಿಳಿಸಿ ನಡೆಸಿದ್ದಕ್ಕಾಗಿ ಕೋಪ, ದುಗುಡ. ಕೆಲವರಿಗೆ

ತಮ್ಮ ನಾಸ್ತಿಕತೆಯ ಬಗೆಗೆ ಹೆಮ್ಮೆಯೆನಿಸಿ ಅದನ್ನು ತೋರ್ಪಡಿಸಿಕೊಳ್ಳಲು ಮಾಡಿದ ಬೇಕಿಲ್ಲದ ತರ್ಕ ವಾದಗಳು. ಇವರನ್ನು ಸರಿದಾರಿಗೆ ತರಬೇಕೆಂದು ಪಣತೊಟ್ಟಿದ್ದ ಆಸ್ತಿಕರ ಬುದ್ಧಿವಾದ, ಪರೋಕ್ಷ ಒತ್ತಾಯ. ಕೆಲವರಿಗೆ ರಕ್ತದೊತ್ತಡ, ಸಕ್ಕರೆ ಖಾಯಿಲೆ ದಮ್ಮು ಇತ್ಯಾದಿ ಆರೋಗ್ಯದ ತೊಂದರೆಗಳಿಂದ ಅನಾನುಕೂಲವಾದರೆ ಕೆಲವರಿಗೆ ತಮ್ಮದು ಬಿಟ್ಟು ಬೇರೆ ಭಾಷೆ ತಿಳಿಯದ ತೊಡಕಿನಿಂದಾಗಿ ಚರ್ಚೆಗಳಲ್ಲಿ, ವಿಚಾರ ವಿನಿಮಯದಲ್ಲಿ ಪಾಲ್ಗೊಳ್ಳಲಾಗದ ಪರಿಸ್ಥಿತಿ. ನನಗೆ ಇದಾವುದೂ ತೊಂದರೆಗಳಿಲ್ಲದುದೊಂದು ವರವೇ ಆಗಿತ್ತು. ನನಗೂ ನನ್ನದೇ ಆದ ಇತಿಮಿತಿಗಳಿದ್ದವು. ಚಿಕ್ಕಂದಿನಿಂದಲೇ ಬೋರೂರಿದ್ದ ಪ್ರಾಣಿಗಳ ಬಗೆಗಿನ ಭಯ; ಹಗಲುಗನಸು ಕಾಣುತ್ತ ಮೈಮರೆವ ಸ್ವಭಾವ; ಮುಂಗೋಪದ ಅತಿ ಭಾವುಕ ಮನಸ್ಸು; ನಿದ್ದೆಗಾಗಿ ಊಟವನ್ನಾದರೂ ಬಿಡುವ ಮತ್ತು ಇಷ್ಟವಿಲ್ಲದ ಕೆಲಸವನ್ನು ಅತಿ ಕಡಿಮೆ ಶ್ರಮದಲ್ಲಿ ಮಾಡಿ ಮುಗಿಸುವ ಸೋಮಾರಿತನ, ಬೆಳಗ್ಗೆ ಸ್ನಾನವಿಲ್ಲದೆ ಹೊರಹೊರಡುವ ಅಥವಾ ಊಟ ಮಾಡುವ ಅಭ್ಯಾಸ ವಿಲ್ಲದ ದಿನಚರಿ; ತುಸು ಸ್ಥೂಲವೆನ್ನಬಹುದಾದ ಮಟ್ಟಸ ದೇಹದ ಗಿಡ್ಡ ಕಾಲುಗಳ ಚಿಕ್ಕ ಹೆಜ್ಜೆಯ ವೇಗವಿಲ್ಲದ ನಡಿಗೆ; ಮನೆಗೆಲಸದ ಹೊರತಾಗಿ ಬೇರಾವ ರೀತಿಯ ವ್ಯಾಯಾಮ ಅಥವಾ ದೂರದ ನಡಿಗೆಯ ಅಭ್ಯಾಸವಿಲ್ಲದ ದಿನಚರಿ- ಇವಾವುದೂ ಕೈಲಾಸ ಮಾನಸ ಪ್ರವಾಸದ ಪೂರ್ಣಾನಂದಕ್ಕೆ ಅಡ್ಡಿಯಾಗದಿದ್ದುದು ನನ್ನ ಸುದೈವ.

ಇಲ್ಲಿಯವರೆಗೆ ಮಗಳಾಗಿ, ಪತ್ನಿಯಾಗಿ, ಸೊಸೆಯಾಗಿ, ತಾಯಿಯಾಗಿ, ಗೃಹಿಣಿಯಾಗಿ, ಉಪನ್ಯಾಸಕಿಯಾಗಿ ಇತರರ ಇಷ್ಟಾನಿಷ್ಟಗಳಿಗೆ ಹೊಂದಿಕೊಂಡು ಹೋಗುವ ಅನಿವಾರ್ಯತೆಯಲ್ಲಿ ಉಸಿರುಗಟ್ಟಿದಂತಾಗಿದ್ದವಳಿಗೆ ಈ ಒಂದು ತಿಂಗಳ ಕಾಲ ನನ್ನಂತೆ ನಾನಿರಲು, ನನ್ನ ಸ್ವಭಾವ ಸಹಜ ರೀತಿಯಲ್ಲಿರಲು ಸಿಕ್ಕ ಅವಕಾಶ ಅತ್ಯಮೂಲ್ಯವಾಗಿತ್ತು. ನನ್ನಿಂದ ಯಾವುದೇ ರೀತಿಯ ನಿರೀಕ್ಷೆಮಾಡದೆ ನನಗೆ ಯಾವುದೇ ರೀತಿಯ ರಿಯಾಯಿತಿ ತೋರದೆ ನನ್ನನ್ನು ಕೇವಲ 'ವ್ಯಕ್ತಿಯಾಗಿ' ಪರಿಗಣಿಸಿ ನಿಷ್ಪಕ್ಷ ಪಾತ ಭಾವದಲ್ಲಿ ವ್ಯವಹರಿಸಿದ ಯಾತ್ರಿಜನ ಮತ್ತು ಸಂಪರ್ಕಕ್ಕೆ ಬಂದ ಇತರ ಜನ ಮಾನವ ಸಹಜ ಪ್ರೀತಿ ತೋರಿದ್ದರು. ಇದೇ ನಿಲುವಿಲ್ಲಿ ನನ್ನ ಕುಂದುಗಳನ್ನು ತೋರಿಸಿದಂತೆಯೇ ನನ್ನ ವಿಶೇಷತೆಗಳನ್ನು ಗುರುತಿಸಿ ಪ್ರೋತ್ಸಾಹಿಸುವ ಮೂಲಕ ಮುರುಟಿದ್ದ ಆತ್ಮವಿಶ್ವಾಸವನ್ನು ಜಾಗೃತಗೊಳಿಸಿದರು. ಪರಸ್ಪರ ಸಹಕಾರದಿಂದ, ತಾಳ್ಮೆಯ ರಚನಾತ್ಮಕ ಮನೋಭಾವದಿಂದ, ಎದುರಾದ ಅಡ್ಡಿ ಆತಂಕಗಳನ್ನು ನಮ್ಮ ಅಂತಃಶಕ್ತಿಗೆ ಮೀಟುಗೋಲಾಗಿ ಮಾಡಿಕೊಳ್ಳುವ ರೀತಿಯನ್ನರಿತೆವು. ವೈಯಕ್ತಿಕವಾಗಿ ಕಲೆಹಾಕಿದ 'ಬೇಕು-ಬೇಡಗಳ' ಕಸವನ್ನು ಗುಡಿಸಿ ತಕ್ಕಮಟ್ಟಿನ ಚಿತ್ತಶುದ್ಧಿ ಗಳಿಸಿದೆವು. ಮತ್ತೊಬ್ಬರ ಅಭಿಪ್ರಾಯ, ಮಾನಸಿಕ ನಿಲುವುಗಳಿಗೆ ಮಾನ್ಯತೆಕೊಟ್ಟು ಅವನ ನೆಲೆಯಿಂದಲೂ ಪರಿಸ್ಥಿತಿಯನ್ನು ಅರ್ಥೈಸುವ ತಾಳ್ಮೆ ಹೃದಯ ವೈಶಾಲ್ಯ ಅಷ್ಟಿಷ್ಟು ಲಭಿಸಿತು.

ಲಿಪುಲೇಖ್‌ವರೆಗಿನ ಒಂಭತ್ತು ದಿನಗಳ ಚಾರಣ ಒಂದು ವಿಧದಲ್ಲಿ 'ಸ್ವ'ಪರಿಚಯದ ಕಾರ್ಯವಾಗಿತ್ತು. ದಿನವೂ ಬೆಳಗ್ಗೆ ಬುದ್ಧಿ ಎಚ್ಚರಾಗುವ ಮೊದಲೇ ದಾರಿಗಿಳಿದು ನಡೆಯುವಾಗಿನ ಏಕಾಂತ, ಅದೂ ಕೂಡ ಪ್ರಕೃತಿಯ ಚಿಕಿತ್ಸಾರೂಪದ ಏಕಾಂತ. ಆತ್ಮವಿಮರ್ಶೆಗೆ ಪ್ರೇರೇಪಿಸುವ ಚಿಂತನೆಗೆ ಹಚ್ಚುವ ಪ್ರಕೃತಿಯ ಪ್ರೇರಣೆ, ದೇಹ, ಮನಸ್ಸು, ಬುದ್ಧಿ ಇವುಗಳು ಸಾಧನೆಗಿರುವ ಬೇರೆ ಬೇರೆ ಸಾಧನಗಳೆಂಬ ಅರಿವು ಗ್ರಂಥಗಳನ್ನೋದಿಯಲ್ಲ - ಅನುಭವಕ್ಕೆ ಬಂದ ಅರಿವು. ವಿಶೇಷ ರೀತಿಯದಾಗಿತ್ತು. ಈ ಮೂರೂ ಸಾಧನಗಳ ರೀತಿಯನ್ನು ಪರಿಭಾವಿಸುತ್ತ ಕೂರುತ್ತಿದ್ದ ಒಂದು ಅಸ್ತಿತ್ವದ ಅನುಭವವಾಗುತ್ತಿತ್ತು. ಏರಿಳಿತದ ನಡಿಗೆ ಸಾಕಾಗಿ ದೇಹ ಸೋತು ಬಾಯ್ಬಿರಿ ಕುಳಿತಾಗ ಮನಸ್ಸು ಮುಂದಿನ ಶಿಬಿರದ ಆಸೆಯಿಂದ ದೇಹವನ್ನೆಳೆದು ಹಾಕುತ್ತಿತ್ತು. 'ಇನ್ನೆಷ್ಟು ದೂರ?' , 'ಇನ್ನಾವ ರೀತಿಯ ಆಪತ್ತು?' ಎಂದು ಮನಸ್ಸು ಚಿಂತಿಸಿ ಮುದುರಿಕೊಂಡಾಗಲೂ ನಡೆದೇ ಇರುತ್ತಿದ್ದ ಕಾಲುಗಳು ಮುಂದಿನ ಶಿಬಿರವನ್ನು ತಲುಪಿರುತ್ತಿದ್ದವು. ಈ ರೀತಿಯ ವಿಚಿತ್ರ ಅನುಭವಗಳಾಗಿರುವುದು ಅನೇಕ ಸಲ. ದೇಹ ಮನಸ್ಸುಗಳ ಪರಿಯನ್ನು ನೋಡುತ್ತಿದ್ದ ಬುದ್ಧಿಯ ಪ್ರತಿಕ್ರಿಯೆ ಅನೇಕ ಸಲ ನಗುವಾಗಿ ಹೊರಬರುತ್ತಿತ್ತು. ಸಹಯಾತ್ರಿಗಳು ಕಾರಣವಿಲ್ಲದೇ ನಗುವಳಿವಳು - 'ಪಾಗಲ್ ಕಹೀ ಕಿ' ಎಂದು ಅಣಕವಾಡಿದುದೂ ಉಂಟು. ನಗುವಿನ 'ಪರದೆ'ಯ ಹಿಂದಿರುತ್ತಿದ್ದ 'ಬಯಲು'ತನ ವಿಶಿಷ್ಟ ಶೂನ್ಯತೆ ಅನೇಕ ವೇಳೆ ದಿಗಿಲು ತರುತ್ತಿತ್ತು. ಈ ರೀತಿಯ, ಮಧ್ಯಾಹ್ನದವರೆಗಿನ ನಡಿಗೆಯಲ್ಲಿ ದೇಹದ ಜೊತೆಗೆ ಮನಸ್ಸು ಕೂಡ ದಣಿದಿರುವುದು ಗೊತ್ತಾಗುತ್ತಿತ್ತು. ಈ ದಣಿವಿನಲ್ಲೂ ವಿಚಿತ್ರ ರೀತಿಯ ಶಾಂತಿ - ಪುನಶ್ಚೇತನಗೊಳ್ಳುವ ಶಕ್ತಿಯ ವಿಚಿತ್ರ ಅನುಭವ. ಒರೆಸಿದ ಕನ್ನಡಿಯಂತೆ, ಇಂದ್ರಿಯಗಳಲ್ಲಿನ ಸ್ಫುಟತೆ - ತೀವ್ರತೆಯ ಹೆಚ್ಚಳದ ಅನುಭವ. ಹೊಸದು ದಿನಚರಿ ಹೊಸದು ಕೂಟ- ನೋಟ - ಊಟ - ಉಡಿಗೆ ಹೊಸತು ಭಾವ ಅನುಭವ. ಟಂಕಸಾಲೆಯಿಂದ ಬಂದ ಹೊಸನಾಣ್ಯದಂತೆ ನಾವೇ ಹೊಳೆಯುತ್ತಿರುವಂತಹ ಅನಿಸಿಕೆ.

ಕೈಲಾಸ ಮಾನಸ ಸರೋವರದ ಅನುಭವಕ್ಕೆ ಈ ರೀತಿಯ ಪೂರ್ವ ಸಿದ್ಧತೆ ಶುದ್ಧೀಕರಣ ಅವಶ್ಯವಿತ್ತು. ಏಕೆಂದರೆ ಕೈಲಾಸ ಮಾನಸ ಪ್ರದೇಶದಲ್ಲಿರುವುದು ತರ್ಕಕ್ಕೆ ಸಿಗದ ಒಂದು ಭಾವ ಸತ್ಯ. ಭೌತಿಕ ಸತ್ಯವನ್ನು ದಾಟಿ ನಿಂತ ನಿತ್ಯಭಾವಸತ್ಯ. ಕರಣಗಳನ್ನು ಅನುಗೊಳಿಸದಿದ್ದರೆ ತರ್ಕಕ್ಕೆ ಸಿಗದ ಒಂದು ಭಾವಸತ್ಯ. ಇಲ್ಲಿಗೆ ನಡೆದು ಬರುವ ಯಾತ್ರಿಗಳು ಮಾಡುವ ಪ್ರದಕ್ಷಿಣೆ, ನಮಸ್ಕಾರ, ಪೂಜೆ, ಮಂತ್ರಜಪ, ಏರಿಸುವ ಕಲ್ಲು, ಕಟ್ಟಿದ ವಸ್ತ್ರತೋರಣಗಳು ಮುಖ್ಯವಲ್ಲ. ಇವು ತಂದುಕೊಡುವ 'ಶ್ರದ್ಧೆ' ಮುಖ್ಯ. ಈ ಕ್ರಿಯೆಗಳಿಗೇ ಪ್ರಾಧಾನ್ಯತೆ ಕೊಡುವ ಅಂಧಶ್ರದ್ಧೆಯಲ್ಲ. ಇಲ್ಲಿ ಅನುಭವಕ್ಕೆ ಬರುವುದು ವಿಶ್ವಚೇತನವೆಂಬ ಮುಕ್ತ ಮನಸಿನ ದೃಢ ವಿಶ್ವಾಸದ ಭಾವಶುದ್ಧಿಯ ಶ್ರದ್ಧೆ. ಪಡೆದ ಭಾವ ಶುದ್ಧಿಗನುಸಾರವಾಗಿ ಇಲ್ಲಿರುವುದನ್ನು ಅನುಭವಿಸಬಲ್ಲೆವಷ್ಟೆ. ಈ ವಿಶ್ವಾಸದ ಶ್ರದ್ಧೆಯಿಲ್ಲದೆ ಬರಿದೇ ನೋಡಲು ಬಂದವರಿಗೆ ಕಾಣುವುದು ಮರುಪ್ರದೇಶದ ಬೋಳು ಬಟ್ಟೆಗಳ ನಡುವೆ

ನಿಂತಿರುವ ಶಿಖರ, ಅದರ ಸಮೀಪ ಹರಡಿರುವ ಒಂದು ದೊಡ್ಡ ಸರೋವರ.

ಕೈಲಾಸ ಶಿಖರ ಮತ್ತು ಮಾನಸ ಸರೋವರ ಪ್ರಕೃತಿಯ ಪರಿಪೂರ್ಣತೆಯ ಪ್ರತೀಕಗಳು. ಈ ಪರಿಪೂರ್ಣತೆಯಲ್ಲಿ ನಮ್ಮ ಪೂರ್ಣತೆಯನ್ನು ಕಂಡುಕೊಳ್ಳುವ ಪ್ರಯತ್ನವೇ ನಾನಿಲ್ಲಿ ಕಂಡ ಸತ್ಯ. ಭಾವಸತ್ಯ. ಈ ಪ್ರಯತ್ನಕ್ಕೆ ನನ್ನನ್ನು ಅನುಗೊಳಿಸಿದ್ದು ಹಿಮಾಲಯದಲ್ಲಿನ ಒಂಭತ್ತು ದಿನಗಳ ಚಾರಣ. ದಕ್ಷಿಣದ ಕಡೆಗಿನ ಹಿಮಾಲಯದಲ್ಲಿನ ವನಸಿರಿಯಲ್ಲಿ ಓಲಾಡಿದ ಮನಸ್ಸು ಗಿರಿ ಪಂಕ್ತಿಗಳನ್ನು ದಾಟುತ್ತ ಉತ್ತರಕ್ಕೇರಿ ಹೋದಂತೆ ರುದ್ರ ರಮಣೀಯ ದೈತ್ಯ ಪರ್ವತಗಳಲ್ಲಿ 'ಅಹಂ' ಭಾವವನ್ನು ಬಿಡಲೊಪ್ಪದೆ ಹಿಡಿದಿರಲೂ ಆಗದೆ ತುಯ್ದಾಡಿತ್ತು. ಕೈಲಾಸ ಮಾನಸ ಪ್ರದೇಶದ ಗಂಭೀರ ಶೂನ್ಯವನ್ನು ಹೊಕ್ಕ ನಂತರ 'ಅಹಂ' ಭಾವವಿಲ್ಲದಾಗುವ ಭಯವನ್ನು ಬಿಟ್ಟು 'ಸೋಹಂ' ಭಾವದ ತೆಕ್ಕೆಯಲ್ಲಿ ಅನೇಕ ಸಲ ತೂಗಿ ತೊನೆದಾಡಿತು. ವಯಸ್ಸು ಲಿಂಗಗಳ ಅರಿವೂ ಇಲ್ಲದಾದ ಈ ಭಾವದಲ್ಲಿದ್ದುದೆಲ್ಲಾ ಒಂದೇ - ತುಂಬಿನಿಂತ ಮೌನ. ಚಿತ್ತ ಸಂವಾದ ನಿಂತ ಮೌನ. ರಾಶಿಯಾಗಿ ನಿಂತ ಶಿವನ ಅಟ್ಟಹಾಸದ ಹಿಂದಿನ ಮಹಾಕಾಲದ ಅನಂತ ಮೌನ.

ಈ ರೀತಿಯ ಅನನ್ಯ ಪರಿಸರವನ್ನು, ಇಲ್ಲಿ ಅನುಭವಕ್ಕೆ ಬರುವ ಅಖಂಡತೆಯನ್ನು ಮತ್ತೆ ಮತ್ತೆ ಪಡೆಯುವ ಅವಕಾಶವನ್ನು ಕಳೆದುಕೊಳ್ಳಲಿಚ್ಛಿಸದೆ ಅದಕ್ಕಾಗಿ 'ಅಭಿವೃದ್ಧಿ' , 'ಆಧುನಿಕತೆ' ಯನ್ನು ಒಲ್ಲದೆ ಬಿಟ್ಟವರು ಟಿಬೆಟಿಯರು ಆತ್ಮವನ್ನು ಬಾಗಿಸದ ಮಂಕುತಿಮ್ಮರಾಗಿರುವರೇನೋ! ಅವರ 'ಪೂರ್ಣ ಸ್ವಾತಂತ್ರ್ಯದ' ಹೋರಾಟದ ಹಿಂದಿರುವ ಅನಿವಾರ್ಯತೆಯ ಸುಳಿವು ಸಿಕ್ಕಿತಿಲ್ಲಿ.

ಮನೆಯಿಂದ ಹೊರಟವಳು ದೆಹಲಿ ಸೇರಿದಾಗ ಮೈಸೂರಿನವಳೆನಿಸಿಕೊಂಡೆ, ಲಿಪುಲೇಖ್ ಪರ್ವತವನ್ನೇರಿ ನಿಂತಾಗ ಭಾರತೀಯಳಾಗಿ ಬೆಳೆದು ಟಿಬೆಟ್ಟಿಗೆ ಕಾಲಿಟ್ಟವಳು ಕೈಲಾಸ ಪ್ರದಕ್ಷಿಣೆಯಲ್ಲಿ 19000 ಅಡಿಗಳ ಎತ್ತರಕ್ಕೇರಿದಾಗ ದಿಗಂತವನ್ನು ಸುತ್ತಿ ಸುತ್ತಿ ನೋಡುತ್ತ ಕೇವಲ ಮಾನವಳಾಗಿ ದೇವನೊಂದಿಗೆ ಸಂಪರ್ಕಿಸಿದೆ. ಅಲ್ಲಿಗೂ ಬಿಡದೆ ಸುತ್ತಲಿನ ಪ್ರಕೃತಿ 'ನನ್ನನ್ನು' ಬಿಚ್ಚಿ ಬರಿದು ಮಾಡಿ ತನ್ನೊಳಗೇ ಇಳಿದು ಹೋಗುವಂತೆ ಕರಗಿಸಿದ ಅನುಭವ. ಭತ್ತದ ಕಾಳು ಅರಳಿ ಅರಳಿ ಸಿಡಿದು ಭತ್ತದ ಹೊಟ್ಟೆಯೊಡೆದು ಹೊರಗೆಲ್ಲಾ ಚೆಲ್ಲಿಹೋದ ಅರಳಿನಂತೆ! 'ಸಿದ್ಧ'ವಾಗಿರುವ ಅಲ್ಪವನ್ನು ಮನಗಾಣಿಸಿ 'ಸಾಧ್ಯ'ವಿರುವುದನ್ನು ತೋರಿಸಿ 'ನನ್ನ' ಚಿತ್ರವನ್ನು ಸ್ಪಷ್ಟ ಪಡಿಸಿದವಳು ಅಸೀಮ ಚಿತ್ರಕಾರ್ತಿ ಪ್ರಕೃತಿ.

ಮನೆಯಿಂದ ಒಂಟಿ ಹೊರಟಾಗ ಒಂದು ತಿಂಗಳ ದೀರ್ಘ ಪ್ರವಾಸದಲ್ಲಿ ಕೈಲಾಸ - ಮಾನಸ ನೋಡಿಬರುವ ಸಾಹಸಕಾರ್ಯಕ್ಕಿಳಿದಿದ್ದೇನೆಂಬ ಉತ್ಸಾಹ, ಅಸಾಮಾನ್ಯ ನಿಸರ್ಗ ಸುಂದರ ಪ್ರದೇಶವನ್ನು ನೋಡಿ ಆನಂದಿಸುವೆನೆಂಬ ಅಸ್ಪಷ್ಟ ಕಲ್ಪನೆಯಿತ್ತೇ ವಿನಹ ಆಗಲಿದ್ದ ಅನುಭವದ ಸುಳಿವು ಕಿಂಚಿತ್ತೂ ಇರಲಿಲ್ಲ. ಅಂದುಕೊಂಡದ್ದೇ ಒಂದು ಆದದ್ದೇ ಬೇರೊಂದು. ಪ್ರವಾಸಗ

ಮೊದಲ ಒಂದು ವಾರದಲ್ಲಿ ನನ್ನ 'ಒಳಗಣ್ಣಿನ ಶಸ್ತ್ರ ಚಿಕಿತ್ಸೆ' ನಡೆದಿತ್ತು. ಕೈಲಾಸ ಮಾನಸದ ನಂತರ ಪ್ರಪಂಚವೇ ಬದಲಾಗಿ ಹೋಯಿತು. ನೋಡುವ ಮುಟ್ಟುವ ಕೇಳುವ ಪ್ರತಿಯೊಂದು ಸಂಗತಿಯಲ್ಲೂ ಅದರ ಹಿಂದಿನ ಕೈವಾಡ ಕಾಣುವಂತಾಯಿತು. ಚಿಟ್ಟೆ ಹಾರಿದರೇ ಹಿಗ್ಗು, ಬಂಡೆಗಲ್ಲು ಉರುಳಿದರೂ ಹಿಗ್ಗು. ಕಂಬಳಿ ಹೊದ್ದಾಗಲೂ ಹಿಗ್ಗು - ಕಾಲಿಗೆ ಮುಳ್ಳೊತ್ತಿದಾಗಲೂ ಹಿಗ್ಗು!.

ಇಂದ್ರಿಯಾನುಭವದ ಎಲ್ಲ ಕ್ಷಣಕ್ಕೂ ನಿಖರ ರೂಪ - ತೀವ್ರತೆಯ ಸೊಗಸು. ಮನದಲ್ಲಿ ಏನೇ ಭಾವ ಮೂಡಿದರೂ ಅದನ್ನು ಹೊರನಿಂತು ನೋಡುವ ಪೃಥಕ್ ಭಾವ. ಈಗ ಕೋಪವಾಗಲೀ ದುಃಖವಾಗಲೀ ಸಂತೋಷವಾಗಲೀ ಆಗುವುದಿಲ್ಲವೆಂದಲ್ಲ. ಒಡನೆಯೇ ಈ ಭಾವಗಳ ಹಿಂದೆ ಸರಿದು ನೋಡುವ ಅನ್ಯಥಾ ಭಾವವೊಂದು - ಕೈಲಾಸ ಮಾನಸದಲ್ಲಿ ಹೊಂದಿದ ಸಮಾಧಿ ಸಮ ಭಾವವೊಂದು ಮೂಡಿ ಬಂದು ಮನಸ್ಸು ಮತ್ತೆ ತಿಳಿಯಾಗುವುದು ಅರಿವಿಗೆ ಬರುವುದು. ಮಾಡುವುದೆಲ್ಲಾ ಆಗುವುದೆಲ್ಲಾ ಪೂರ್ಣವೊಂದರ ಭಾಗವೆಂಬ ಭಾವ. ಮೊದಲಿನ 'ಕೊರಕೊರ' ಇಲ್ಲದ 'ತುಂಬು'. ಪ್ರಾಪಂಚಿಕ ಬೇಡವೆಂಬ ವೈರಾಗ್ಯವಲ್ಲ ಪಾಲಿಗೆ ಬಂದದ್ದನ್ನು ಮನಸಾರೆ ಅನುಭವಿಸುವ ಮೋಜು! ಕಷ್ಟವಾಗಲೀ ಸುಖವಾಗಲೀ ಹಿರಿದಾದುದೊಂದು 'ಸುಖ'ದ ಭಾಗವೆಂಬ ಆತಂಕರಹಿತ ಭಾವ.

ಪೃಥ್ವಿಯ ಮಾನದಂಡ ಹಿಮಾಲಯದ ಪರ್ವತಗಳು; ಶಿವಶಕ್ತಿಯ ಕ್ರೀಡಾಂಗಣ ಕೈಲಾಸದ ಪರಿಸರ; ಮಾನಸದ ಸ್ಫಟಿಕ ಶುದ್ಧ ವಿಶಾಲ ಜಲರಾಶಿ - ಈ ಮೂರು ಸೇರಿ ಬರೆದ ಸತ್ಯ ಕಥೆಯಾಯಿತು ಈ ಪ್ರವಾಸ. ಈ ಕಥೆಗೆ ಹಿನ್ನುಡಿ ಬರೆದು ತನ್ನ ಮುದ್ರೆಯೊತ್ತಿತು ಓಂ ಪರ್ವತದ ಬೀಜಾಕ್ಷರ.

ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೆ|

ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೆ||

ಓಂ ಶಾಂತಿಃ ಶಾಂತಿಃ ಶಾಂತಿಃ||

# ಯಾತ್ರಾಮಾಹಿತಿ

ದೆಹಲಿಯಿಂದ ಆರಂಭವಾಗುವ ಕೈಲಾಸ – ಮಾನಸಸರೋವರ ಯಾತ್ರೆಗೆ ಆಯ್ಕೆಯಾದೊಡನೆ ಒಂದು ಸಾವಿರ ರೂ. ಗಳ ಮುಂಗಡ ಹಣವನ್ನು ಕುಮಾವ್ ಮಂಡಲ ವಿಕಾಸ ನಿಗಮಕ್ಕೆ ಕಟ್ಟುವುದು ಯಾತ್ರಿಯ ಮೊದಲ ಹೆಜ್ಜೆ. ದೆಹಲಿಗೆ ಹೊರಡುವಾಗಲೇ ಒಯ್ಯಬೇಕಾದ ಕಾಗದ ಪತ್ರಗಳೆಂದರೆ ಪಾಸ್ ಪೋರ್ಟ್, ವೈದ್ಯಕೀಯ ತಪಾಸಣಾ ವರದಿ, ಕ್ಯಾಮರಾದ ಪೂರ್ಣವಿವರ ಪತ್ರ, ಇಂಡೆಮ್ನಿಟಿ ಬಾಂಡ್ ಮತ್ತು ಚೀನಾದ ವೀಸಾ ಮತ್ತಿತರ ಬಾಬ್ತಿಗೆ ಹಣ – (ಸುಮಾರು ಮೂವತ್ತೈದು ಸಾವಿರದಷ್ಟು) ವಿದೇಶೀ ವಿನಿಮಯದ ಏಳುನೂರ ಐವತ್ತು ಡಾಲರ್‌ಗಳನ್ನು ವಿದೇಶಾಂಗ ವ್ಯವಹಾರ ಮಂತ್ರಾಲಯದವರ ಸಹಕಾರದಲ್ಲಿ ದೆಹಲಿಯ ರಿಸರ್ವ್ ಬ್ಯಾಂಕಿನಿಂದ ಪಡೆಯಬಹುದು. ಟಿಬೆಟ್‌ನ ಟಕಲಾಕೋಟ್‌ನಲ್ಲಿ ಆರುನೂರು ಡಾಲರ್‌ನಷ್ಟು ಹಣವನ್ನು ಚೀನಾ ಸರ್ಕಾರಕ್ಕೆ ಪಾವತಿಮಾಡಬೇಕಾಗುವುದು.

## ಯಾತ್ರಾಮಾರ್ಗ ಮತ್ತು ಕಾಲಾವಧಿ

| ದಿನ | ಶಿಬಿರದಿಂದ | ಶಿಬಿರಕ್ಕೆ | ದೂರ(ಕಿ.ಮೀ) | ಎತ್ತರ(ಅಡಿ) |
|---|---|---|---|---|
| ೧. | ದೆಹಲಿ | ಅಲ್ಮೊರ್‍ರಾ | ೩೭೦(ಬಸ್ಸಿನಲ್ಲಿ) | ೫,೫೦೦ |
| ೨. | ಅಲ್ಮೊರ್‍ರಾ | ಧಾರ್ಚುಲಾ | ೨೭೦ | ೨,೯೭೦ |
| ೩. | ಧಾರ್ಚುಲಾ | ಪಾಂಗು | ೨೬ | ೭,೨೬೦ |
| | ತವಾಘಾಟ್‌ನಿಂದ | ಚಾರಣ ಪ್ರಾರಂಭ | ೯ (ಚಾರಣ) | ೩,೯೬೦ |
| ೪. | ಪಾಂಗು | ಸಿರ್ಖಾ | ೧೦(ಚಾರಣ) | ೮,೪೫೦ |
| ೫. | ಸಿರ್ಖಾ | ಗಾಲಾ | ೧೦ | ೮,೦೫೦ |
| ೬. | ಗಾಲಾ | ಮಾಲ್ಪಾ | ೧೧ | ೬,೭೬೫ |
| ೭. | ಮಾಲ್ಪಾ | ಬುಧಿ | ೯ | ೮,೮೪೫ |
| ೮. | ಬುಧಿ | ಗುಂಜಿ | ೧೫ | ೧೦,೬೨೫ |
| ೯. | ಗುಂಜಿ | ಕಾಲಾಪಾನಿ | ೧೦ | ೧೧,೮೮೦ |
| ೧೦. | ಕಾಲಾಪಾನಿ | ನಾಬಿದಾಂಗ್ | ೮ | ೧೩,೮೦೦ |
| ೧೧. | ನಾಬಿದಾಂಗ್ | ಲಿಪುಲೇಖ್ | ೭+ | ೧೬,೭೩೦ |
| ೧೨. | ಲಿಪುಲೇಖ್ | ತಕಲಾಕೋಟ್‌ಗೆ | ಬಸ್ಸಿನಲ್ಲಿ | ೧೪,೦೦೦ |

ಟಿಬೆಟ್‌ನಲ್ಲಿ ಒಟ್ಟು ಹದಿನಾಲ್ಕು ದಿನಗಳ ಪ್ರವಾಸದ ನಂತರ ಮತ್ತೆ ಇದೇ ಮಾರ್ಗವಾಗಿ ಮರಳಿ ಧಾರ್ಚುಲಾದಿಂದ ಬಾಗೇಶ್ವರ, ಬೈಜನಾಥ ಮೂಲಕ ಕೌಸಾನಿ, ನೈನಿತಾಲ್‌ನಲ್ಲಿ ಎರಡು

ದಿನ ಕಳೆದು ದೆಹಲಿಗೆ ಮರಳುವುದರಲ್ಲಿ ಒಟ್ಟು ಯಾತ್ರೆಯವಧಿ ಮೂವತ್ತೆರಡು ದಿನಗಳು.

ಟಿಬೆಟಿನ ಟಕಲಾಕೋಟ್ ಷಹರಿಗೆ ಬಂದೊಡನೆಯೇ ಕಸ್ಟಮ್ಸ್ ಮತ್ತು ಇಮಿಗ್ರೇಷನ್ ಕಾರ್ಯ. ಕಾಲಮಾನದ ಅಂತರ ಸುಮಾರು ಎರಡುವರೆಗಂಟೆಯಷ್ಟು – ಬೇಸಗೆಯ ಕಾಲದಲ್ಲಿ. ಎರಡನೆಯ ದಿನ ವಿದೇಶೀ ವಿನಿಮಯ ಹಣ ಪಾವತಿ ಮತ್ತು ಅವಶ್ಯವಸ್ತುಗಳ ಖರೀದಿಗಾಗಿ ಮೀಸಲು. ಮೂರನೆಯ ದಿನ ಬೆಳಗ್ಗೆ ಕೈಲಾಸ ಮಾನಸ ಯಾತ್ರಾರಂಭ.

| | ಅ ತಂಡ | ಬ ತಂಡ |
|---|---|---|
| ದಿನ | ಕೈಲಾಸ ಪ್ರದಕ್ಷಿಣಾ | ಮಾನಸ ಪ್ರದಕ್ಷಿಣಾ |
| ೧೩. | ದಾರ್ಚೆನ್ | ಹೋರೆ |
| ೧೪. | ದಿರಾಪುಕ್ | ಚುಗು |
| ೧೫. | ಜಾಂಗ್ ದಿರಾಪುಕ್ | ಜೈದಿ |
| ೧೬. | ಮಾನಸ ಪ್ರದಕ್ಷಿಣಾ | ಕೈಲಾಸ ಪ್ರದಕ್ಷಿಣಾ |
| ೧೭. | ಹೋರೆ | ದಾರ್ಚೆನ್ |
| ೧೮. | ಚುಗು | ದಿರಾಪುಕ್ |
| ೧೯. | ಜೈದಿ | ಜಾಂಗ್ ದಿರಾಪುಕ್ |
| ೨೦. | ಜೈದಿ | ದಾರ್ಚೆನ್ |
| ೨೧. | ಟಕಲಾಕೋಟ್‌ಗೆ ಎರಡು ತಂಡಗಳು ಒಟ್ಟಿಗೆ ಮರಳುವುವು. | |
| ೨೨. | ಖೋಜಾರ್ ನಾಥ ದೇವಾಲಯದ ಸಂದರ್ಶನ | |
| ೨೩. | ಕಸ್ಟಮ್ಸ್ ಹಣದ ವಿನಿಮಯ ಮತ್ತು ಇಮಿಗ್ರೇಶನ್ ಕಾರ್ಯ. | |

ಮೂರನೆಯ ದಿನ ಭಾರತಕ್ಕೆ ಮರಳಿ ಕಾಲಾಪಾನಿಯಲ್ಲಿ ತಂಗುವುದು. ವಸತಿ–ಆಹಾರ–ಉತ್ತರ ಪ್ರದೇಶ ಸರಕಾರ ಮತ್ತು ಕುಮಾವನ್ ಮಂಡಲ ವಿಕಾಸ ನಿಗಮದ ಸಹಕಾರದಲ್ಲಿ ಲಿಪುಲೇಖ್‌ವರೆಗಿನ ಶಿಬಿರಗಳಲ್ಲಿ ಫೈಬರ್ ಗ್ಲಾಸ್ ಗುಡಿಸಲು ಮತ್ತು ಟಿನ್ ಶೆಡ್‌ಗಳ ವ್ಯವಸ್ಥೆ ಇರುವುದು. ಶೌಚಾಲಯಗಳ ತಾತ್ಕಾಲಿಕ ವ್ಯವಸ್ಥೆಯೂ ಉಂಟು. ಜನರೇಟರ್‌ನಿಂದ ಸೀಮಿತ ಕಾಲದವರೆಗೆ ವಿದ್ಯುತ್ ಎಲ್ಲ ಶಿಬಿರಗಳಲ್ಲೂ ದೊರೆಯುವುದು. ಹಾಸಿಗೆ ಹೊದಿಕೆಗಳನ್ನು ಒದಗಿಸುವರು. ಟಿಬೆಟಿನ ಶಿಬಿರಗಳಲ್ಲಿಯೂ ಮೆತ್ತೆ, ರಜಾಯಿಗಳು ದೊರೆಯುವುದು. ಆದರೆ ವಿದ್ಯುತ್ತಿನ ಸೌಲಭ್ಯವಿರುವುದಿಲ್ಲ. ಭಾರತ ಯಾತ್ರಿಗಳಿಗೆ ಶಾಕಾಹಾರೀ ಊಟದ ವ್ಯವಸ್ಥೆಯನ್ನು ಕೆಎಮ್‌ವಿಎನ್‌ನವರೇ ಮಾಡುವರು. ಟಿಬೆಟಿನಲ್ಲಿ ಟಕಲಾಕೋಟ್‌ನಲ್ಲಿರುವವರೆಗೆ ಶಾಕಾಹಾರೀ ಊಟವನ್ನು ಒದಗಿಸುವರು. ಇತರ ಶಿಬಿರಗಳಲ್ಲಿ ಯಾತ್ರಿಗಳೇ ಅಡುಗೆ ಮಾಡಿಕೊಳ್ಳಬೇಕು. ಒಲೆಯನ್ನು, ಕೆಲವು ಪಾತ್ರೆಗಳನ್ನು ಶಿಬಿರದ ವ್ಯವಸ್ಥಾಪಕರಿಂದ ಪಡೆಯ ಬಹುದಷ್ಟೆ. ಈ ಕಾರಣದಿಂದಾಗಿ ದೆಹಲಿಯಿಂದಲೇ ಪ್ರೀಕುಕ್ಡ್ ಆಹಾರದ ಪ್ಯಾಕೆಟ್‌ಗಳನ್ನು ಒಯ್ಯುವುದು ಪ್ರದಕ್ಷಿಣಾಕಾಲದ ಅಡುಗೆಯ ಕೆಲಸವನ್ನು ಹಗುರಗೊಳಿಸುವುದು.

ಉಡುಪು–ಸಾಧನಗಳು :– ಕೈಲಾಸ ಮಾನಸ ಪ್ರದೇಶ ಮತ್ತು ಅಲ್ಲಿಗೆ ಹೋಗುವ

ಮಾರ್ಗವೂ ಹದಿನಾರು – ಹತ್ತೊಂಭತ್ತು ಸಾವಿರ ಅಡಿಗಳೆತ್ತರದಲ್ಲಿರುವುದರಿಂದ ಶೀತಗಾಳಿ, ಮಂಜು, ಮತ್ತು ಪರ್ವತೀಯ ಹವಾಮಾನ ತ್ರಾಸದಾಯಕವಿರುವುದು. ಇವುಗಳಿಂದ ರಕ್ಷಣೆ ಪಡೆಯುವಂತಹ ಉಣ್ಣೆ ಉಡುಪುಗಳು– ಇತರ ಸಾಧನಗಳು ಅಗತ್ಯ. ಕುಲಾವಿ, ಸ್ವೆಟರ್, ಕೈಗೌಸು, ಉಣ್ಣೆಯ ಮತ್ತು ಹತ್ತಿಯ ಕಾಲ್ಚೀಲಗಳು, ಟ್ರೆಕ್ಕಿಂಗ್ ಶೂಗಳು, ಕಪ್ಪು ಕನ್ನಡಕ, ರೈನ್‌ಕೋಟು, ಅತ್ಯಗತ್ಯವಾದ ವಸ್ತುಗಳು. ಟಾರ್ಚು, ಮೋಂಬತ್ತಿಗಳೂ ಅವಶ್ಯಕ ವಸ್ತುಗಳೇ! ಕೈಲಾಸಮಾನಸ ಪ್ರದೇಶದಲ್ಲಿ ಬೇಸಿಗೆಯಕಾಲವಾದರೂ ಜುಲೈ ಆರಂಭದಲ್ಲೇ ಭಾರತದ ಕಡೆಗೆ ಮುಂಗಾರಿನ ಮಳೆಗಾಲ. ಹಿಮಾಲಯದ ತಪ್ಪಲಿನ ಮಾರ್ಗದ ಮೊದಲ ಮೂರು ನಾಲ್ಕು ದಿನಗಳ ಚಾರಣ ಮಳೆಯಲ್ಲೇ ಆಗುವ ಸಂಭವ ಹೆಚ್ಚು. ನಂತರದ ನಾಲ್ಕೈದು ದಿನಗಳ ಚಾರಣದಲ್ಲಿ ಮಳೆ ಕಡಿಮೆಯಾದರೂ ಚಳಿಗಾಳಿ ಬಿರುಸಾಗಿ ಬೀಸುವುದು. ರಾತ್ರಿಯಲ್ಲಿ ಚಳಿ ಹೆಚ್ಚಾಗಿರುವುದು. ದಿನದಲ್ಲಿ ನೇರ ಬಿಸಿಲಿನ ತಾಪವೂ ಹೆಚ್ಚು. ಅದಕ್ಕಾಗಿ ಅಗಲ ಪಟ್ಟಿಯ ಹ್ಯಾಟ್ ಅಥವಾ ಟೋಪಿ ಧರಿಸಿ ಮುಖಕ್ಕೆ ರಕ್ಷಣೆಕೊಡಬೇಕಾಗುವುದು. ಬಗಲ ಚೀಲದಲ್ಲಿ ಒಂದು ಜೊತೆ ಕಾಲ್ಚೀಲವಿಟ್ಟಿರುವುದು ಒಳ್ಳೆಯದು. ಏಕೆಂದರೆ ಹಿಮಾಲಯದಲ್ಲಿ ಯಾವಾಗ ಮಳೆಯಾಗುವುದೋ ಹೇಳಲು ಬಾರದು.

ಸಾಮಾನು – ಸಾಗಣೆ:– ಒಬ್ಬರಿಗೆ ಇಪ್ಪತ್ತೈದು ಕಿಲೋಗ್ರಾಂನಂತೆ ಲಗ್ಗೇಜನ್ನು ಕೆ. ಎಂ. ವಿ. ಎನ್.ನವರು ಸಾಗಿಸುವರು. ಹೆಚ್ಚಿನ ತೂಕವಿದ್ದರೆ ಅದಕ್ಕೆ ಬೇಕೆನಿಸಿದರೆ ಕುದುರೆಗಳನ್ನು ಬಾಡಿಗೆಗೆ ಪಡೆಯಬಹುದು ದಿನಕ್ಕೆ ೨೦೦ ರೂ ನಂತೆ. ಅಥವಾ ದಿನಕ್ಕೆ ಎಂಭತ್ತು – ತೊಂಭತ್ತರಂತೆ ಕೂಲಿಯಾಳನ್ನು ಪಡೆಯಬಹುದು. ಹಿಂದಿರುಗುವಾಗ ಲಿಪುಲೇಖ್‌ನಲ್ಲಿ ಕುದುರೆ, ಕೂಲಿ ಸಿಗುವುದು. ಮಧ್ಯಂತರದ ಶಿಬಿರಗಳಲ್ಲಿ ಈ ಸೌಕರ್ಯ ಸಿಗಲಾರದು. ಮಾನಸ ಸರೋವರದ ಪ್ರದಕ್ಷಿಣೆಗೆ ಕೂಡ ಕುದುರೆಗಳನ್ನು ಹೋರೆ ಶಿಬಿರದಲ್ಲಿ ಪಡೆಯಬಹುದು. ಕೈಲಾಸ ಪ್ರದಕ್ಷಿಣೆಗೆ ಯಾಕ್ (ಚಮರೀ ಮೃಗ) ದಾರ್ಚೆನ್‌ನಲ್ಲಿ ಸಿಗುವುದು. ಇವುಗಳಿಗೆ ನಿಗದಿತ ಯುವಾನ್‌ಗಳನ್ನು ಟಕಲಾಕೋಟ್‌ನಲ್ಲೇ ಕೊಡಬೇಕಾಗುವುದು.

ವೈದ್ಯಕೀಯ:– ಗುಂಜಿವರೆಗೆ ಉತ್ತರ ಪ್ರದೇಶದ ಸರಕಾರ ಯಾತ್ರಿಗಳಿಗೆ ವೈದ್ಯಕೀಯ ಸೌಲಭ್ಯವೊದಗಿಸುವುದು. ಗುಂಜಿವರೆಗೆ ಇಬ್ಬರು ವೈದ್ಯರು ಯಾತ್ರಿ ತಂಡದೊಂದಿಗೇ ನಡೆಯುವರು. ಗುಂಜಿಯಿಂದ ಲಿಪುಲೇಖ್‌ವರೆಗೆ ಇಂಡೋ ಟಿಬೆಟಿಯನ್ ಬಾರ್ಡರ್ ಪೋಲೀಸ್‌ನವರು ಈ ಸಹಾಯವನ್ನೊದಗಿಸುವರು. ಯಾತ್ರಿಗಳು ತಮ್ಮ ವೈಯಕ್ತಿಕ ಔಷಧಗಳನ್ನು ಒಯ್ಯುವುದುತ್ತಮ. ರಕ್ತದೊತ್ತಡ, ದಮ್ಮು, ಡಯಾಬಿಟಿಸ್, ಹೃದಯದ ತೊಂದರೆ, ಮೂರ್ಛೆ ರೋಗಗಳು ಎತ್ತರಕ್ಕೆ ಹೋದಂತೆ ಉಲ್ಬಣಗೊಂಡು ಪ್ರಾಣಾಂತಿಕವಾಗಬಹುದು. ದೇಹಸ್ವಾಸ್ಥ್ಯ ಅತ್ಯಗತ್ಯ ಅರ್ಹತೆ. ದೆಹಲಿಗೆ ಹೋಗುವ ಮುನ್ನವೇ ಪೂರ್ಣ ವೈದ್ಯಕೀಯ ತಪಾಸಣೆಯಾಗಿ, ಅದರ ವರದಿಯನ್ನು ಒಯ್ಯಬೇಕಾಗುವುದು. ದೆಹಲಿಯಲ್ಲಿ, ಇಂಡೋ ಟಿಬೆಟಿಯನ್ ಬಾರ್ಡರ್ ಪೋಲೀಸ್ ಆಸ್ಪತ್ರೆಯಲ್ಲಿ ಮತ್ತೊಮ್ಮೆ ತಪಾಸಣೆ ನಡೆಯುವುದು. ಇಲ್ಲಿ ತೇರ್ಗಡೆಯಾದವರು ಮಾತ್ರ ಮುಂದುವರಿಯುವರು. ಐದು ದಿನಗಳ ಕಾಲ್ನಡಿಗೆಯಲ್ಲಿ ಎತ್ತರಕ್ಕೆ ಹೋದವರ ದೇಹಾರೋಗ್ಯದ ತಪಾಸಣೆ ಪುನಃ ಗುಂಜಿಯ ಮಿಲಿಟರಿ ಶಿಬಿರದಲ್ಲಿ ನಡೆಯುವುದು. ಟಿಬೆಟ್‌ನಲ್ಲಿ ಯಾವುದೇ ರೀತಿಯ ವೈದ್ಯಕೀಯ ಸಹಾಯವೂ ಸುಲಭದಲ್ಲಿ ದೊರೆಯಲಾರದು. ಪರ್ವತೀಯ ಪ್ರದೇಶದಲ್ಲಿ ಭೇದಿ ಸಾಮಾನ್ಯವಾದುದರಿಂದ ಯಾತ್ರಿಗಳು ಮಲ ಸಾರಕತೆಗೆ ಔಷಧಿ ಹೊಂದಿರುವುದು ಅಗತ್ಯ. ಜೊತೆಗೆ ಎಲೆಕ್ಟ್ರಾಲ್, ಗ್ಲೂಕೋಸ್, ಇಸಬ್‌ಗೋಲ್,

ಕ್ರೋಸಿನ್, ವಿಟಾಮಿನ್ ಮಾತ್ರೆಗಳು, ವಿಕ್ಸ್ ಇನ್ಹೇಲರ್, ವ್ಯಾಸಲೀನ್ ಕ್ರೀಮ್‌ಗಳು ಅವಶ್ಯಕ.

ಛಾಯಾ ಚಿತ್ರ:- ಸಮುದ್ರಮಟ್ಟದಿಂದ ಮೇಲಕ್ಕೇರಿದಂತೆ ಬ್ಯಾಟರಿಗಳು ಬೇಗ ಬರಿದಾಗುವುದರಿಂದ ಹೆಚ್ಚಿಗೆ ಬ್ಯಾಟರಿಗಳನ್ನು ಒಯ್ಯುವುದು ಸೂಕ್ತ. ಧಾರ್ಚುಲಾವರೆಗೆ ನಂತರ ಟಕಲಾಕೋಟ್‌ನಲ್ಲಿ ಮಾತ್ರ ಬ್ಯಾಟರಿಗಳನ್ನು ರೀಚಾರ್ಜ್ ಮಾಡಲವಕಾಶವುಂಟು. ಟಿಬೇಟ್‌ನಲ್ಲಿ ಕ್ಯಾಮರಾಗಳನ್ನು ವಿಡಿಯೋ ಕ್ಯಾಮರಾಗಳನ್ನು ಉಪಯೋಗಿಸಲು ಯಾವುದೇ ನಿರ್ಬಂಧವಿಲ್ಲ. ಆದರೆ ಯಾತ್ರಾಮಾರ್ಗವು ಸೀಮಾಂತ ಕ್ಷೇತ್ರದ ಮೂಲಕ ಇರುವುದರಿಂದ ಭಾರತದ ಕಡೆಗೆ ಛಾಯಾಚಿತ್ರ ತೆಗೆಯಲು ವಿಶೇಷ ಅನುಮತಿ ಬೇಕು. ದೆಹಲಿಯ ವಿದೇಶಾಂಗ ವ್ಯವಹಾರ ಮಂತ್ರಾಲಯವೇ ಅನುಮತಿ ಪತ್ರದ ವ್ಯವಸ್ಥೆಯನ್ನು ಮಾಡುತ್ತದೆ. ದೆಹಲಿಯನ್ನು ಬಿಟ್ಟಮೇಲೆ ಉತ್ತಮ ದರ್ಜೆಯ ಫಿಲ್ಮ್ ರೋಲುಗಳು ಸಿಗುವುದಿಲ್ಲವಾಗಿ ಹೆಚ್ಚಿಗೆ ರೋಲುಗಳನ್ನು ದೆಹಲಿಯಲ್ಲೇ ಕೊಂಡು ಒಯ್ಯುವುದು ಸೂಕ್ತ.

ಲಯಸನ್ ಆಫೀಸರ್:- ಭಾರತೀಯ ಮತ್ತು ಚೀನೀ ಅಧಿಕಾರಿಗಳೊಡನೆ ಯಾತ್ರಿತಂಡದ ಪ್ರತಿನಿಧಿಯಾಗಿ ಸುಲಭ ಸಂಪರ್ಕ ಸಾಧಿಸಲು, ಯಾತ್ರಾಕಾಲದ ಸರಕಾರೀ ನಿಯಮ – ರೀತಿಗಳನ್ನು ಸುಗಮಗೊಳಿಸಲು, ಯಾತ್ರೆಯು ಸರಕಾರೀ ತೊಡರುಗಳಿಲ್ಲದೆ ಪೂರ್ಣಗೊಳ್ಳಲು ಲಯಸನ್ ಆಫೀಸರ್ ಒಬ್ಬರು ಪ್ರತಿತಂಡದೊಂದಿಗೆ ಹೊರಡುವರು. ಇವರನ್ನು ವಿದೇಶಾಂಗ ವ್ಯವಹಾರ ಮಂತ್ರಾಲಯವೇ ನಿಯೋಗಿಸುವುದು. ಇವರ ಮೇಲ್ವಿಚಾರಣೆಯಲ್ಲಿ, ಯಾತ್ರಿಗಳ ಪೂರ್ಣಸಹಕಾರದೊಂದಿಗೆ ಮಾತ್ರ ಯಾತ್ರೆ ಸುಗಮ ಸಾಧ್ಯ.

— — — — — — —

# ಗ್ರಂಥ ಸೂಚಿ


೧. 'ಕನ್ನಡ ಕಾಳಿದಾಸ ಮಹಾ ಸಂಪುಟ' ; ಎಸ್. ವಿ. ಪರಮೇಶ್ವರ ಭಟ್ಟ.

೨. 'ಮಂಕು ತಿಮ್ಮನ ಕಗ್ಗ' ; ಡಿ. ವಿ. ಜಿ.

೩. 'ಎಮಾಂಗ್ ಬುದ್ಧಿಸ್ ಮೆನ್' ; ಚಲಚ್ಚಿತ್ರ ನಿರ್ಮಾತೃ ಕ್ಲೆಮೆನ್ಸ್ ಕುಬಿಯವರ ಸಂದರ್ಶನ ಎಸ್. ಆರ್. ರಾಮಕೃಷ್ಣ ಅವರಿಂದ–ಡೆಕ್ಕನ್ ಹೆರಾಲ್ಡ್ ೭.೨.೯೭.

೪. 'ಕುಮಾವ್' ; ಡಾ. ಪುಷ್ಕಿನ್ ಫರ್ತಿಯಾಲ್.

೫. 'ನಾಗರ್ ಕೆ ಬೇಟೆ ಪರ್ವತರಾಜ್ ಹಿಮಾಲಯ್ ಕಾ ಜನ್ಮ್' ; ಡಾ. ಖಡ್ಗಸಿಂಹ್. ವಾಲ್ದಿಯಾ– ಸಾಪ್ತಾಹಿಕ ಹಿಂದೂಸ್ತಾನ್.

೬. 'ಕೈಲಾಸ್ ಮಾನಸರೋವರ್ ಯಾತ್ರಾ' ; ಮಿನಿಸ್ಟ್ರಿ ಆಫ್ ಎಕ್ಸ್‌ಟರ್ನಲ್ ಅಫೇರ್ಸ್.

೭. 'ಹಿಮಾಲಯ' ; ಹರ್ಬರ್ಟ್ ಟಿಕಿ.

೮. 'ಕೈಲಾಸ್ ಮಾನಸರೋವರ್' ; ಶ್ರೀ ಪ್ರಣವಾನಂದ.

೯. 'ಎ ಸ್ಟ್ರೇಂಜರ್ ಇನ್ ಟಿಬೆಟ್' ; ಸ್ಕಾಟ್ ಬೆರ್ರಿ.

೧೦. 'ಎ ಹ್ಯಾಂಡ್ ಬುಕ್ ಆಫ್ ಟಿಬೆಟನ್ ಕಲ್ಚರ್' ; ಎಚ್. ಎಚ್. ದಲೈಲಾಮಾ.

೧೧. 'ಸ್ಟಾರಿ ಟಿಬೆಟ್ ಚೈನಾ'.

## REACTIONS OF THE KAILAS - MANAS AROVAR ON WESTERN MINDS

It will not be out of place if a few lines are quoted here from the "Trans -Himalaya" of Dr. Sven Hedin, giving the reactions of these two Holy places on his mind.

"The stranger also approaches Kang-rimpoche with a feeling of awe., It is incomparably the most famous mountain in the world Mount Everest and Mount Blanc cannot vie with it.

"Manasarovar is the abode of

sanctity and of peace.........No language on earth contains words forcible enough to describe the view from it over the lake...........I, too, was the victim of an illusion which almost made me catch at the parapet for support. I wondered whether it was a fit of giddiness..... A dream - picture in the most ethereal transitory tones floats before us. We seem to stand on a promontory jetting out into space which yawns around us and in front ......I should have liked to remain a while under its enchantment ......... I enjoy the voyage to the full, for nothing I remember in my long wandering in Asia can compare with the overpowering beauty of this nocturnal sail...... Two flocks of geese are swimming on the water producing diverging ripples. All is so indescribably quiet; so ethereal, transparent and transitory, so subtle and sensitive, that I scarcely dare breathe. Never has a church service, a wedding march, a hymn of victory, or a funeral made a more powerful impression on me....... Wonderful, attractive, enchanting lake! Theme of story and legend, playground of storms and changes of colour, apple of the eye of gods and men, goal of weary, yearning pilgrims, holiest of the holiest of the lakes, are thou, Tso-mavang, lake of all lakes. Navel of old Asia, where four of the most famous rivers of the world, the Brahmaputra, the Indus, the Sutlej and the Ganges, rise among gigantic peaks..........Manasarovar is the pearl of all the lakes of the world. Hoary with age when the books of the Veda were written......... Oh! what a wonderful lake it was! I have no words to describe it. To my dying day I shall never forget it, and even now is in my mind as a legend, a poem and a song. Nothing that I can recall through all my wandering can compare with

overwhelming beauty of this night journey. It was like listening to the silent and mighty throbs of the heart of Nature..... It seemed as though the landscape, ever-changing as the hours creep slowly by, were unreal; as though it no longer belonged to this earth, but lay on the borders of the world beyond, nearer to Heaven, the region of dreams and phantasies, of hopes and longings, a mysterious fairy land, rather than to this earth of men and sinners, of worldliness and vanity...... I threw a farewell glance at Tso-mavang, and experienced a feeling of bereavement at the thought that. I must now leave its shores."

August Gansser writes, "The fundamental idea of Asiatic Religions is embodied in one of the most significant temples I had ever seen, a sun-lit rock and ice! Its remarkable structure and peculiar harmony of its shape, justify my speaking of Kailas as the most sacred mountain in the world ..... the holiest mountain for Asiatic religious .......The Kailas, not only is the holiest mountain in the World and the Sublime Throne of the Gods."




ಕೈಲಾಸ- ಮಾನಸ ಸರೋವರದ ನಕ್ಷೆ



ನಕ್ಷೆ - 2, ಹಿಮಾಲಯದಲ್ಲಿನ ಶಿಖರಗಳು




130-140 ಕೋಟಿ
ವರ್ಷಗಳ ಹಿಂದೆ




60-65 ಕೋಟಿ
ವರ್ಷಗಳ ಹಿಂದೆ




10-11 ಕೋಟಿ
ವರ್ಷಗಳ ಹಿಂದೆ




25-30 ಲಕ್ಷ
ವರ್ಷಗಳ ಹಿಂದೆ

ಪ್ರಾವಾರ (ಮ್ಯಾಂಟಲ್)


ಕೆಳಗಿನ ಭೂ ಪಟ್ಟಿ


ಮೇಲಿನ ಭೂ ಪಟ್ಟಿ


ಪದರಗೊಂಡ ಮರಳು ಮಣ್ಣು


ಜಲರಾಶಿ


ಹಿಮಾಲಯದ ಜನನ



ಸ್ವರ್ಗದ ಕಡೆಗೆ ಏರಿನಿಂತ ಗೊಂಪಾ



ದೇವಗನ್ನಡಿಯಂತೆ ಹೊಳೆವ ಗೌರಿಕುಂಡ

ತಾರಾಮೂರ್ತಿಯವರ ಕಣ್ಣಿನ ಮೂಲಕ ನಾವು ಅದ್ಭುತ ದೃಶ್ಯಗಳನ್ನು ನೋಡುತ್ತೇವೆ ಕಿವಿಯ ಮೂಲಕ ನಾನಾರೀತಿಯ ಸದ್ದುಗಳನ್ನು ಕೇಳುತ್ತೇವೆ. ಈ ಪ್ರವಾಸ ನಮ್ಮ ಕಣ್ಣೆದುರಿಗೆ ಒಂದು ಡಾಕ್ಯುಮೆಂಟರಿಯ ಹಾಗೆ ಬಿಚ್ಚಿಕೊಳ್ಳುತ್ತ ಹೋಗುತ್ತದೆ. ತುಂಬ ಹಸಿದಾಗ ಎಂಥದೇ ಆಹಾರ ಸಿಕ್ಕಾಗ ತಿನ್ನುವ ಸುಖ, ದಣಿದಾಗ ಸಿಗುವ ವಿಶ್ರಾಂತಿಯ ಸುಖ, ಯಾರ್‍ಯಾರೋ ಅಪರಿಚಿತರ ನಡುವೆ ತನ್ನನ್ನೇ ಮರೆಯುವ ಆನಂದ, ಹೀಗೆ ತಾರಾಮೂರ್ತಿಯವರ ಪ್ರವಾಸ ನಮಗೆ ಇಂದ್ರಿಯಗ್ರಾಹ್ಯವಾದಅನುಭವವಾಗುತ್ತದೆ.


ಪ್ರಕಾಶಕರು

ಸಾಹಿತ್ಯ ಕಲಾದರ್ಶಿನಿ

ನಂ. 13/2, ಮೊದಲನೆ ಮಹಡಿ, 4ನೇ ಬೀದಿ, ನಾಗಪ್ಪ ರಸ್ತೆ,
ಪ್ಯಾಲೇಸ್‌ನಗರ, ಬೆಂಗಳೂರು - 560 003
ದೂರವಾಣಿ : 3363605